# ಲಿಯೋನಾ

ಮಲ್ಲಿಕಾ

"ಓಂ ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೇ।
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವಶಿಷ್ಯತೇ"

Liyona in Kannada by 'Mallika'
Published by Lakshmi Prakashana,
7, Langford Road, Bangalore-560 025.

ಪ್ರಥಮ ಮುದ್ರಣ : ೧೯೭೦
ದ್ವಿತೀಯ ಮುದ್ರಣ : ೧೯೮೭



ಬೆಲೆ : ಮೂವತ್ತು ರೂಪಾಯಿಗಳು

ಮುದ್ರಕರು :
ನ್ಯೂ ಐಡಿಯಾಸ್
351, 10ನೇ ಬಿ ಮುಖ್ಯ ರಸ್ತೆ
ಜಯನಗರ
ಬೆಂಗಳೂರು-560 011

# ನಿವೇದನೆ

ಲಿಯೋನಾ ಕಥಾ ಸಂಕಲನ ಸಾವಿರದೊಂಭೈನೂರೆಪ್ಪತ್ತರಲ್ಲಿ ಬೆಳಕು ಕಂಡಿತು. ಇದರ ಪ್ರತಿಗಳು ಮುಗಿದು ಹೋಗಿ ಯಾವಕಾಲವೊ. ಈ ವರೆಗೆ ಅದರ ಪುನರ್ಮುದ್ರಣ ಸಾಧ್ಯವಾಗದೇ ಉಳಿದಿತ್ತು. ಈ ಸಲ ಹೊರತರುವ ಸಾಹಸ ಮಾಡಿರುವೆ. ಇಂದಿನ ಪರಿಸ್ಥಿತಿಯಲ್ಲಿ ಪುನರ್ಮುದ್ರಣವೆಂದರೆ ಸಾಮಾನ್ಯವಲ್ಲ. ಸರಕಾರದ ಕುರುಡುಗಣ್ಣಿನಿಂದ ಸಾಹಿತಿಗಳು-ಪ್ರಕಾಶಕರು ಬವಣೆ ಪಡುತ್ತಿರುವುದು ದೇಶ ಬಲ್ಲುದು. ಆದರೂ, ಈ ದಿಶೆಯಲ್ಲಿ ಯಾವ ಪರಿಹಾರವೂ ದೊರೆಯಲಿಲ್ಲ. ಅರ್ಥಾತ್ ಬರೆಯುವ ಉತ್ಸಾಹಕ್ಕೆ ಎಳ್ಳುನೀರು. ಮುಖ್ಯವಾಗಿ ಸಾಹಿತಿಗಳಿಗೆ-ಕವಿಗಳಿಗೆ ಸಕಲ ಸೌಕರ್ಯಗಳನ್ನೂ ಒದಗಿಸಿಕೊಡಬೇಕು ನಮ್ಮ ಸರಕಾರ. ಆದರೆ ಅದರ ಕುರುಡುಗಣ್ಣಿಗೆ ನಮ್ಮ ಭಂಗ ಕಾಣಿಸುತ್ತಿಲ್ಲವಾದ್ದರಿಂದ ಸಾಹಿತ್ಯ ಮುಂಬೆಳೆಯುತ್ತಿಲ್ಲ. ಇದು ದೇಶದ ಪ್ರಗತಿಯ ಲಕ್ಷಣವಲ್ಲ. ಸತ್ ಸಾಹಿತ್ಯಾವಲೋಕನದಿಂದ ಜನಮನ ಪರಿಪುಷ್ಟಿಗೊಳುವುದು ಎಂಬುದನ್ನು ಮರೆಯಬಾರದು. ಸತ್ ಸಾಹಿತ್ಯದಿಂದ ಸನ್ಮತಿಯ ಬೆಳವಣಿಗೆ, ಸದಾಚಾರಗಳ ಸೃಷ್ಟಿ, ಎಂಬುದು ಕರಾತಲಾಮಲಕ, ಆದರೂ ಅಲಕ್ಷ್ಯ ಅತ್ಯಾಶ್ಚರ್ಯ. ಸಾಹಿತ್ಯದ ಬೆಲೆಯನ್ನು ಅರಿತುಕೊಳ್ಳದೆ ಹೋದರೆ ಆಗುವುದು ಇಷ್ಟೆ.

ಇದಕ್ಕಾಗಿ ಸರಕಾರ ತುರ್ತು ಕ್ರಮ ಕೈಕೊಳ್ಳಬೇಕು.

೧-೧೧-೮೬ — ಮಲ್ಲಿಕಾ

# ಪರಿವಿಡಿ

# ಲಿಯೋನಾ

"ಭಾರತದ ಆನೆ ! ಭಾರತದ ಆನೆ !"

ಢಂ, ಢಂ, ಢಂ, ಢಂ.

"ಗಾಂಧೀ ಮೆಚ್ಚಿದ ಕೋತಿ ! ಗಾಂಧಿ ಕೋತಿ !!"

ಢಂ, ಢಂ, ಢಂ, ಢಂ.

ಮೃದಂಗ ಘೋಷದೊಡನೆ ಸಿಲ್ವಿಯಾ ಉಚ್ಚಸ್ವರದಲ್ಲಿ ಬಿತ್ತರಿಸಿದಾಗ 'ಭಾರತ' 'ಗಾಂಧಿ' ಶಬ್ದಗಳ ವಿಶೇಷ ಹಾದಿಗರ ಗಮನವನ್ನು ಸೂಜಿಗಲ್ಲಿನಂತೆ ಸೆಳೆಯಿತು–ಪ್ರಥಮ ಸಂದರ್ಶನದ ದೃಶ್ಯಮಾನ ಸೌಂದರ್ಯಕ್ಕೆ ಮನಸೋತು ಒಳಬಂದು ಕೌತುಕವನ್ನು ನೋಡಿ ಆನಂದಿಸುವರು ಅಥವಾ ಕೊಂಡುಕೊಳ್ಳುವರು. ಚೆಂಗೆನ್ನೆಗಳ ಚೆಲುವೆಯ ಹೊಂಬಣ್ಣದ ಕೇಶಪಾಶವು ಭುಜಗಳ ಮೇಲೆ ಹರಿದಾಡುತಿತ್ತು. ವಿಮಲ ವಿಶಾಲ ನಯನಗಳು ನಕ್ಷತ್ರಗಳಂತೆ ಮಿನುಗುತಿದ್ದುವು. ಸಹಸ್ರ ಸಹಸ್ರ ಕಲಾಕೃತಿಗಳ ಮಧ್ಯೆ ಆವಿರ್ಭೂತ ಸ್ವರ್ಗಲಕ್ಷ್ಮಿಯಂತೆ ನಿಂದ ಅವಳು ಉಚ್ಚಸ್ವರದಲ್ಲಿ ಮತ್ತೆ ಬಿತ್ತರಿಸಿದಳು, "ಭಾರತದ ಆನೆ ! ಭಾರತದ ಆನೆ !!"

ಪ್ರಕಾಶಮಯೀ ಕಲಾಕೃತಿಗಳನ್ನು ಒರಿಸಿ ಓರಣವಾಗಿ ಜೋಡಿಸುತಿದ್ದ ವರ್ಜಿನಿಯಾ ಒಳಬಂದ ಗಿರಾಕಿಗಳೊಡನೆ ವ್ಯವಹರಿಸುತಿದ್ದಳು. ಕಿಸಲಯ ಕೋಮಲ ತರುಣಿಯರ ಮುಖಮಂಡಲ ಕಲಾಕೃತಿಗಳೊಂದಿಗೆ ಸ್ಪರ್ಧೆ ಹೂಡುವಂತೆ ಶೋಭಾಯಮಾನವಾಗಿದ್ದುವು.

ಆ ಭಾಸಮಾನ ತಡಿಯಲ್ಲಿ ಭಾರತೀಯ ಕಲಾಕೃತಿಗಳ ದಿವ್ಯಶೋಭೆ ವೈದುಷ್ಯಪೂರ್ಣ ಮಂಗಳವೇದಿಯಂತೆ ಹೃದಯಂಗಮವಾಗಿತ್ತು.

ಆಕ್ಸ್‌ಫರ್ಡಿನ ಟೋಟನ್ ಹ್ಯಾಮ್ ಕೋರ್ಟ್ ರಸ್ತೆ ಮತ್ತು ವಿಲ್ಸನ್ ಸರ್ಪಂಟೈನ್ ರಸ್ತೆಗಳು ಕೂಡುವೆಡೆ ಮೂಲೆಯಲ್ಲಿರುವ ಅಂಗಡಿಯು "ಬ್ರೈಟ್ ಕಾರ್ನರ್" ಎಂಬ ಅಭಿಧಾನವನ್ನು ಪಡೆದು ಸುಂದರ ಕಲಾಕೃತಿಗಳ ಆವಾಸಸ್ಥಾನವಾಗಿ ಸುಮಾರು ಮೂವತ್ತು ವರ್ಷಗಳು ಸಂದುವು. ಅಂದಿನಿಂದ

ಇಂದಿನವರೆವಿಗೆ ಅಭ್ಯುದಯದ ಹಾದಿಯಲ್ಲಿಯೇ ನಡೆಯುತ್ತಿರುವ ಅಂಗಡಿಯ ಪರಿಚಯವಿಲ್ಲದವರು ಈಗ ಆಕ್ಸ್‌ಫರ್ಡಿನಲ್ಲಿ ಯಾರೂ ಇಲ್ಲ.

* * * *

ಇಂದು ಲ್ಯೂಸಿ ಶಾಲೆಯ ಕೊನೆಯ ಹಂತವನ್ನು ಮುಗಿಸಿ ಮನೆಗೆ ಮರಳಿದಾಗ ಲಿಯೋನಾಳ ಮಾತೃಭಾವ ಸಹಸ್ರ ಸ್ರೋತಗಳಾಗಿ ಹರಿಯಿತು. ತುಟಿಗಳಂಚಿನಲ್ಲಿ ಮಂದಹಾಸ ಮಿನುಗಿ ಕಪೋಲ ಪ್ರಾಂತಗಳು ವಿಕಸನಗೊಂಡುವು. ಸದ್ಯೋದಿತ ವಸಂತಶ್ರೀಯಂತಿದ್ದ ಅವಳನ್ನು ಗಾಢಾಲಿಂಗನ ಮಾಡಿಕೊಂಡು– "ಇಷ್ಟಾದರೂ ಆಯಿತಲ್ಲ, ಲ್ಯೂಸಿ. ಇನ್ನು ಮನಸ್ಸಿಗೆ ಏನೇನೂ ಹಚ್ಚಿಕೊಳ್ಳಬೇಡ."

ಮಾತೃಭಾವದ ಸವಿಯನ್ನುಂಡರೂ ನೀರಸ ನಗೆ ಬೀರಿದಳು ಲ್ಯೂಸಿ. ತೀರದ ಆಸೆ ಹೃದಯವನ್ನು ಭೈರಿಗೆಯಂತೆ ಕೊರೆಯುತಿತ್ತು. ಎಷ್ಟೇ ಪ್ರಯತ್ನ ಪಟ್ಟರೂ ಶಾಲೆಯ ಪ್ರತಿ ಹಂತ ಹಂತದಲ್ಲೂ ಸೋಲನ್ನೆದುರಿಸಿ ಕೊನೆಯ ಹಂತವನ್ನೇರ ಬೇಕಾದರೆ ಸಾಕುಸಾಕಾಗಿತ್ತು, ಅವಳಿಗೆ. ಅಂತಲೇ ಮರುಮಾತಾಡದೆ ಗೊಂಬೆಯಂತೆ ಹಾಗೇ ನಿಂತಳು. ಮಗಳ ಗಂಭೀರ ಸ್ವರೂಪವನ್ನು ನೋಡಿ ಲಿಯೋನಾ ನುಡಿದಳು "ನಾನು ತಾನೆ ಏನು ಕಲಿತಿದ್ದೆ ?"

"ಆ ಕಾಲ ಹಾಗಿತ್ತು."

"ಕಾಲ ಹಾಗಿರಲಿಲ್ಲ ; ಜನ ಹಾಗಿದ್ದರು."

ಇಬ್ಬರ ಮುಖದಲ್ಲೂ ಮುಗುಳುನಗು ಮೂಡಿತು.

"ನೋಡು, ಶಾಲೆಯಲ್ಲಿ ಕಲಿತುದಷ್ಟೆ; ಅನಂತರ ಜೀವನಕ್ಕೆ ಕಾಲಿಟ್ಟೆ. ಅದಷ್ಟರಲ್ಲೆ ನನ್ನ ಈ ಎಲ್ಲಾ ಕಾರುಬಾರು ನಡೆಯುತ್ತಿದೆ."

"ನಿಮ್ಮಂತೆಯೇ ಎಲ್ಲರೂ ಇರಬೇಕಲ್ಲ ?"

"ಇರಲೇಬೇಕು, ಹಾಗೆಂದರೆ....?"

ಲ್ಯೂಸಿ ಹೂದಾನಿಯನ್ನು ಬಟ್ಟೆಯಿಂದ ಒರಿಸುತ್ತ "ನಿಮಗೆ ಸೌಕರ್ಯ ವಿರಲಿಲ್ಲವೇನೋ. ನನಗೆ ಎಲ್ಲಾ ಇದ್ದು ಆಗಲಿಲ್ಲ. ಅದೇ ಬೇಸರ."

"ಎಷ್ಟು ಪುಣ್ಯವೋ ಅಷ್ಟೇ ಲಭ್ಯ, ಮುಖ್ಯವಾಗಿ ದೃಢ ಸಂಕಲ್ಪವಿಷ್ಟರೆ

ಎಲ್ಲವೂ ಈಡೇರುತ್ತೆ”

“........”

ಒಂದು ಘಳಿಗೆ ಯೋಚಿಸುತಿದ್ದು, ಅನಂತರ ಮುಂದುವರಿದಳು ಲಿಯೋನಾ “ಒಂದು ಕಾಲದಲ್ಲಿ ನಾರಿ ವಿಘ್ನಸ್ವರೂಪಳು ಎಂಬ ಪ್ರಾಚುರ್ಯ ವಿತ್ತು. ಆಕೆ ಆನಂದ ಭೋಗಕ್ಕೆ ಅಮೂಲ್ಯವಸ್ತು ಎಂಬ ದುರ್ಭಾವನೆ ಇತ್ತು. ಅಂಥ ದಿನಗಳಲ್ಲಿ ನಾವು ತಲೆಯೆತ್ತುವುದು ಎಷ್ಟು ಕಷ್ಟವಾಗಿತ್ತು....? ಈ ಕಾಲದಲ್ಲಿ ಹೇಗೂ ಕಳೆಯುತ್ತದೆ.”

“ಈಗಲೂ ಸಹ ಶೇಕಡಾ ಎಷ್ಟು ಮಂದಿ ಸಂಕಲ್ಪ ಭರಿತರಾಗಿದ್ದಾರೆ?”

“ನಿಜ ಮಗೂ. ಎಲ್ಲಿಯವರೆಗೆ ನಾರೀತತ್ವದ ಅಭಾವವಿರುವುದೋ ಅಲ್ಲಿಯವರೆಗೆ ನಾರೀ ಜೀವನದ ಪರಮಲಕ್ಷ್ಯ ಪದಾಕ್ರಾಂತವಾಗಿ “ಜೀವನ ಸಿದ್ಧಿ” ಧೂಳೀಪಟವಾಗಿ ಗಾಳಿಯಲ್ಲಿ ತೂರಿಹೋಗುತ್ತದೆ. ಈ ಭಾಸಮಾನ ಜಗತ್ತಿನಲ್ಲಿ ಮಹತ್ವಾಕಾಂಕ್ಷೆಗಳ ಪರಿಣಾಮವನ್ನು ಶಾಂತ ವಿಶ್ವಸ್ತ ಮಂಗಳ ದೆಡೆಗೆ ನೇರವಾಗಿ ನಡೆಸಲು ಶುಭಚರಣಗಳನ್ನು ನಿಯಂತ್ರಿತಗೊಳಿಸುವ ಏಕೈಕ ಶಕ್ತಿಯೆಂದರೆ ಶೃಂಖಲಾಹೀನ ನಾರೀಶ್ರೀ.”

ಕ್ಷಣಕಾಲ ಜಗತ್ತೆ ಮಧುಮಯವಾಗಿ ತೋರಿತೇನೋ. ಲ್ಯೂಸಿಯ ಮುಖಮಂಡಲ ಶುಭ್ರ ಮನೋಹರವಾಯಿತು.

“ಶುಭೇ ! ಈ ಜಡಮಾಂಸಪಿಂಡ ಶಕ್ತಿಮತೀ ಸ್ತ್ರೀಯಲ್ಲ. ಆಕೆಯ ಆತ್ಮಶಕ್ತಿ ಪಂಜರ ಬದ್ಧ ಸಾರಿಕೆಯಂತಿದ್ದರೂ ಆನಂದಭೋಗದ ಬಯಕೆ ಯನ್ನು ಬದಿಗೊತ್ತಿ ಆನಂದ ರಸಾನ್ನವನ್ನು ನೀಡಲು ಮುಂದಾಗುವ ಶಕ್ತಿ ಸಂಪದವನ್ನು ನೆನಪಿನಲ್ಲಿ ತಂದುಕೊ.

“ಸಹಸ್ರ ಸಹಸ್ರಧಾರೆಗಳಲ್ಲಿ ಹರಿದು ಬರುವ ಕಷ್ಟ ಸುಖಗಳ ರುದ್ರ ಮಧುರ ಸನ್ನಿವೇಶಗಳಲ್ಲಿ ದಲಿತ ದ್ರಾಕ್ಷೆಯಂತೆ ತನ್ನನ್ನು ತಾನೇ ಹಿಂಡಿ ಸುತ್ತಮುತ್ತಿನ ಮಾನವ ಗುಂಪನ್ನು ಸಂತೃಪ್ತಿಗೊಳಿಸುವ ಪ್ರಧಾನಲಕ್ಷ್ಯ ಲಕ್ಷಧಾರೆಗಳಲ್ಲಿ ಹರಿಯುವುದು ನಾರೀಶ್ರೀ ಹೃದಯ ಕುಂಡಲಿನಿಯಿಂದ....

“ಇಲ್ಲಿ ಕೇಳು ಮಗೂ, ನಾರೀಹೀನ ತಪಸ್ಯೆ ಶ್ರೀಹೀನ ತಪಸ್ಯೆ. ಶ್ರೀಹೀನತೆ ಜೀವನದ ಅಶುಭ ಚಿತ್ರ ಮಾತ್ರವಲ್ಲ. ಬೃಹತ್ ಜಗತ್ತಿನ ಅನನ್ಯ ಅಶುಭ ಕಲ್ಪನೆ. ಪ್ರಾಪಂಚಿಕ ಆಯೋಜನೆಗಳು, ಧರ್ಮಕರ್ಮಗಳು ಅನಿತ್ಯ

ವಾದುದು ಸ್ತ್ರೀ ಶ್ರೀಹೀನತೆಯಿಂದ. ಸ್ತ್ರೀಶಕ್ತಿ ಜಾಗೃತವಾಗದ ಹೊರತು 'ಜೀವನ ಸಿದ್ಧಿ' ಲಭಿಸದು."

ಆ ಸನ್ಮುಹೂರ್ತದಲ್ಲಿ ಕಾಂತಿಮತೀ ಸಂಧ್ಯೆಯಂತೆ, ಸ್ವರ್ಗೀಯ ದೇವತೆಯಂತೆ ಚಿನ್ಮುಖಿಯಾದಳು ಲ್ಯೂಸಿ.

* * * *

ದೂರ ದಿಕ್ತಟದಲ್ಲಿ ದಿನಮಣಿ ಬಾಸಿನಿಂದ ಭುವಿಯವರೆಗೆ ಹೊಂಗಿರಣಗಳ ಜಾಲವನ್ನು ಹರಡಿದ್ದ. ಸಂಜೆಯ ಸೊಂಪಿನಲ್ಲಿ ಮಿಂದು ನಾಡಿಗೆ ನಾಡು ಸಡಗರದಿಂದಿತ್ತು.

ಹೊತ್ತು ಉರುಳುತಿದ್ದಂತೆ ಅಂಗಡಿಯಲ್ಲಿ ಗಿರಾಕಿಗಳ ಒತ್ತಡವು ಹೆಚ್ಚುತಿತ್ತು. ಜನರ ಆಸಕ್ತಿಯೆಲ್ಲಾ ಭಾರತದ ಆನೆ, ಗಾಂಧೀ ಮೆಚ್ಚಿದ ಕೋತಿಗಳ ಕಡೆಗೆ. ಅನೇಕ ಕಲಾಕೃತಿಗಳು ಖರ್ಚಾದುವು. ಸಾಲಾಗಿ ಕಿವಿ, ಮೂಗು, ಬಾಯಿಗಳನ್ನು ಮುಚ್ಚಿ ಹಿಡಿದು ಕುಳಿತುಕೊಂಡ ಕೋತಿಗಳ ರೀತಿ ನೀತಿಗಳನ್ನು ತಿಳಿದುಕೊಳ್ಳುವುದರಲ್ಲಿ ಅತ್ಯಂತ ಆಸಕ್ತಿಯನ್ನು ತೋರಿದರು ಮಂದಿ. ಸಾಲಾಗಿ ನಿಂತ ಆನೆಗಳ ವೈಶಿಷ್ಟ್ಯ. ದೀಪದಾನಿಯನ್ನು ಹೊತ್ತ ಮರಿಯಾನೆಯ ಸೌಂದರ್ಯ ಜನ ಮನವನ್ನು ಆಕರ್ಷಿಸಿತು. ಅನೇಕ ಕುಮಾರಿಯರು ಅಭಿರಾಮ ಭಂಗಿಯಲ್ಲಿ ಸ್ವರ್ಗ ಲಕ್ಷ್ಮಿಯರಂತೆ ಆಗಮಿಸಿದರು. ಅವರ ನಡೆ ನುಡಿ ವೈವಿಧ್ಯಪೂರ್ಣವಾಗಿತ್ತು.

"ಹೂದಾನಿಯ ಬೆಲೆಯೆಷ್ಟು ?" ಲಾವಣ್ಯವತಿಯ ಪ್ರಶ್ನೆ.

"ಈ ಕೋತಿಗಳ ಬೆಲೆಯೆಷ್ಟು ಮಗೂ ?"

ಇಳಿ ವಯಸ್ಸಿನ ಗಂಭೀರ ವ್ಯಕ್ತಿ ಕೇಳಿದ.

"ಈ ಆನೆಮರಿಯ ಬೆಲೆಯೆಷ್ಟು ಶುಭೇ ?"

ಗೊಜ್ಜುಹೊಟ್ಟೆಯ ಕುಳ್ಳು ವ್ಯಕ್ತಿಯ ಪ್ರಶ್ನೆ.

ಅವರೊಡನೆ ವ್ಯವಹರಿಸುವಾಗ ಜೇಂಗೆನ್ನೆಗಳ ಮುದ್ದು ಮುದ್ದಾದ ಹೆಣ್ಣು ಮಗುವೊಂದು ಬೊಂಬೆಯೊಂದನ್ನು ತಿರುಗಿಸಿ ನೋಡುತ್ತಾ ಕೇಳಿತು "ಈ ಬೊಂಬೆಯ ಬೆಲೆಯೆಷ್ಟು ?"

ಅವರ ವ್ಯವಹಾರವನ್ನು ಮುಗಿಸಿದರೂ ಹೊರ ಹೋಗಿದ್ದ ವರ್ಜಿನಿಯಾ ಹಿಂದಿರುಗಲಿಲ್ಲ. ಲ್ಯೂಸಿ ಇದೇ ತಾನೆ ಅಂಗಡಿಯ ವ್ಯವಹಾರವನ್ನು ನೋಡಿ

ಕೊಳ್ಳುತ್ತಿರುವುದರಿಂದ ಆಕೆಗೆ ಸುಮಾರಾಗಿ ಅವುಗಳ ಬೆಲೆ ತಿಳಿಯುವು. ಸಿಲ್ವಿಯಾ ಎಲ್ಲರೊಡನೆ ಚಕ ಚಕ ವ್ಯವಹರಿಸಹತ್ತಿದಳು. ಗಿರಾಕಿಗಳ ಒತ್ತಡವಂತೂ ಕ್ಷಣೇ ಕ್ಷಣೇ ಹೆಚ್ಚುತ್ತಲೇ ಇತ್ತು.

ಶುಭ್ರಧವಳ ವರ್ಣದ ಸಣ್ಣ ಹುಡುಗಿಯೊಬ್ಬಳು ಮುದ್ದು ಮುದ್ದಾಗಿ ಮುಂದೆ ನಿಂತಳು. ಅವಳ ಅರಳಿದ ಕಣ್ಣುಗಳಲ್ಲಿ ಆಸಕ್ತಿಯು ನಲಿಯುತಿತ್ತು.

"ಈ ವಿಗ್ರಹದ ಬೆಲೆಯೆಷ್ಟು ?"

"ಎಂಟು ಪೌಂಡ್ ಮಗೂ."

"ನಾಲ್ಕು ಪೌಂಡ್‌ಗಳಿಗೆ ಕೊಡುವಿರಾ ?"

"ಇದು ಗಾಂಧಿಯ ಪ್ರತಿಮೆ. ಹಿತ್ತಾಳೆಯಿಂದ ಮಾಡಲ್ಪಟ್ಟಿದೆ. ಅಷ್ಟು ಕಡಿಮೆ ಬೆಲೆಗೆ ಕೊಡಲಾಗುವುದಿಲ್ಲ."

"ಆರು ಪೌಂಡ್‌ಗಳಿಗೆ...."

"ಉಹೂ, ಎಂಟು ಪೌಂಡ್‌ಗಳಿಗಿಂತ ಕಡಿಮೆಯಿಲ್ಲ."

ಆ ವ್ಯವಹಾರ ಮುಗಿಸಿ ಇತ್ತ ಕಣ್ಣು ಹೊರಳಿಸಿದಾಗ ಲಿಯೋನಾ ಜೊತೆಗೆ ವರ್ಜಿನಿಯಾ ಬರುತಿದ್ದುದು ಕಾಣಿಸಿತು. ಬಹುಶಃ ಇಬ್ಬರೂ ಯಾವುದೋ ವ್ಯವಹಾರಕ್ಕಾಗಿ ಹೋಗಿದ್ದರೇನೋ ಎಂದುಕೊಳ್ಳುತ್ತಾ ಕೆಲಸ ಮುಂದುವರಿಸಿದಳು ಸಿಲ್ವಿಯಾ.

* * * *

ಡೇವಿಡ್ ಒಳ ಬಂದಾಗ ಸಂಧ್ಯಾದೀಪಗಳು ಉರಿಯುತಿದ್ದುವು.

ಮನೆಯಲ್ಲಿ ಎಳ್ಳು ಬೀಳಿದರೂ ಕೇಳಿಸುವಂತಹ ನಿಶ್ಶಬ್ದ ; ನೀರವ.

ಅಗ್ಗಿಷ್ಟಿಕೆಯ ಬಳಿ ಅಡುಗೆ ಮಾಡುವುದರಲ್ಲಿ ಉದ್ಯುಕ್ತಳಾಗಿದ್ದ ಲಿಯೋನಾಳ ಮುಗುಳುನಗೆ ಸ್ವಾಗತ ನೀಡಿತು. ಡೇವಿಡ್ ಕೈ ತೊಳೆದು ಕೊಂಡು ಅವಳಿಗೆ ಸಹಾಯ ಮಾಡಲು ಮುಂದಾದ.

"ಫ್ಲಾರಿಡಾದಿಂದ ಬಂದ ಪಾರ್ಸಲ್ ಒಡೆದಿರಾ ?"

"ಇಲ್ಲ ಶುಭೇ !....ನೀನು ನೋಡಲೆಂದೇ ಸುಮ್ಮನಾದೆವು."

"ಒಡೆಯಬೇಕಾಗಿತ್ತು. ಇಂದು ತುಂಬ ತಲೆ ನೋಯುತಿದ್ದುದರಿಂದ

ಅಂಗಡಿಗೆ ಹೋಗಲಾಗಲಿಲ್ಲ."

"ಅದಕ್ಕೆ ಹಣ ಕೊಟ್ಟಾಗಿದೆಯೆ ?"

"ಇಲ್ಲ....ಮಾಲು ಖರ್ಚಾದಮೇಲೆ ಹಣ ಕಳುಹಿಸಿ ಎಂದಿದ್ದಾರೆ. ನಾವು ಭಾರತದಿಂದ ಬಂದ ಮಾಲಿಗೂ ಮಾಡಿದ್ದು ಇಷ್ಟೆ ತಾನೆ ?"

ಲಿಯೋನಾ ಅರ್ಧ ತಾಸಿನೊಳಗಾಗಿ ಅಡುಗೆ ಮುಗಿಸಿದಳು. ತೀವ್ರ ತಲೆನೋವಿನಿಂದ ಮುಖಮಂಡಲ ಬಾಡಿ ಸೊರಗಿತ್ತು. ಅವಳು ಕೈ ತೊಳೆದು ಕೊಂಡು ಬರುವಷ್ಟರಲ್ಲಿ ಡೇವಿಡ್ ಊಟದ ಮೇಜನ್ನು ಅಣಿಗೊಳಿಸಿದ್ದ.

"ನಿನಗೆ ಈಚೀಚೆಗೆ ವಿಶ್ರಾಂತಿಯೇ ಇಲ್ಲವಾಗಿದೆ. ಹೀಗಾದರೆ ಆರೋಗ್ಯ ಕೆಟ್ಟೀತು. ಸ್ವಲ್ಪಕಾಲ ಯಾವ ತೊಂದರೆಯನ್ನೂ ಹಚ್ಚಿಕೊಳ್ಳದೆ ಆರಾಮವಾಗಿದ್ದು ಬಿಡು."

ಲಿಯೋನಾ ನಸುನಕ್ಕು ದೃಢಕಂಠದಿಂದ ಹೇಳಿದಳು.

"ನನ್ನ ಅಂತರಂಗದ ಜಾಗೃತಾಗ್ನಿ ಎರಡರಿಂದ ನಂದಬಹುದು. ಒಂದು ಮೃತ್ಯುವಿನಿಂದ ...ಇನ್ನೊಂದು ಸತ್ಯ ಧರ್ಮಗಳ ಹರಣದಿಂದ."

"ಸತ್ಯಧರ್ಮಗಳ ನೇರ ಹಾದಿಯನ್ನು ಹಿಡಿದಾಗಿದೆಯಷ್ಟೆ ?"

"ಹಿಡಿದರೂ ಗಮ್ಯಸ್ಥಾನವನ್ನು ಕಂಡುಕೊಳ್ಳಲಿಲ್ಲ."

ಡೇವಿಡ್ ಯಾವುದೋ ಯೋಚನೆಯ ಭಾರದಿಂದ ನುಡಿದ "ಬರ ಬರುತ್ತಾ ನೀನು ಹಚ್ಚಿಕೊಂಡದ್ದು ಬಹಳ ಹೆಚ್ಚಾಯಿತು."

"ಕರ್ತವ್ಯ, ವಿಚಕ್ಷಣೆ, ಸಾಧನೆ ಇವು ಕೇವಲ ಗಂಡಸಿನದೇ ಸೊತ್ತು ಎಂದು ಭಾವಿಸಿದಿರಾ ?"

ಡೇವಿಡ್ ನಕ್ಕುಬಿಟ್ಟ.

ಲಿಯೋನಾ ಒಂದು ಘಳಿಗೆ ತಡೆದು ಮುಂದುವರಿದಳು "ಈ ವ್ಯಾಪಾರ ಕ್ಕಾಗಿ ದೇಶವಿದೇಶಗಳ ಯಾತ್ರೆ ಕೈಕೊಂಡುದುದರಿಂದ ಬ್ರಿಟನ್ ಯಾವ ನೀತಿಯಿಂದ ಹೊರದೇಶಗಳಲ್ಲಿ ತನ್ನ ಧೂರ್ತ ಸಾಮ್ರಾಜ್ಯವನ್ನು ಸ್ಥಾಪಿಸಿತು ಎಂಬುದು ಅರ್ಥವಾಗುತ್ತದೆ...."

ಡೇವಿಡ್ ನಡುವೆ ಬಾಯಿ ಹಾಕಿದ "ವಿಚಾರಹೀನರಿಗೆ, ಅಸಮರ್ಥರಿಗೆ, ಅವಿವೇಕಿಗಳಿಗೆ ಸ್ವರಾಜ್ಯ ಸ್ವಾತಂತ್ರ್ಯ ಇಲ್ಲದಿರುವುದೇ ಲೇಸು. ಬ್ರಿಟನ್ನಿನ ಕೈವಾಡದಿಂದ ಈಗ ಅಲ್ಲಿನ ಜನ ಜಾಗೃತರಾಗಿದ್ದಾರೆ....ಆಗ....?"

"ನೀವಿನ್ನೂ ಅವರ ವಿಚಾರವನ್ನು ಸಂಪೂರ್ಣ ಮನನ ಮಾಡಲಿಲ್ಲ. ಕೊರಿಯಾ ವಿಚಾರದಲ್ಲೂ ಸಹ ಜಪಾನ್ ಅನುಸರಿಸಿದ ನೀತಿ ಇದೇ. ಭಾರತ ದಿಂದ ಬರುವ ಕುಶಲ ಕೈಗಾರಿಕಾವಸ್ತುಗಳನ್ನು ನೋಡಿದರೆ ಅವರು ಕರ ಕುಶಲತೆಯನ್ನು ಬ್ರಿಟಿಷರ ಪ್ರಭಾವದಿಂದ ಕಲಿಯಲಿಲ್ಲ ಎಂಬುದು ಅರ್ಥ ವಾಗುತ್ತೆ. ಆ ಕಲಾನೈಪುಣ್ಯತೆಯನ್ನು ಅವರು ಆನುವಂಶೀಕವಾಗಿ ಪಡೆದು ಕೊಂಡ ಮಹಾನುಭೂತಿ. ಇನ್ನೊಮ್ಮೆ ಎಲ್ಲವನ್ನೂ ಸರಿಯಾಗಿ ಪರಾಂಬರಿ ಸಿರಿ." ಒಂದು ಘಳಿಗೆ ಯೋಚಿಸಿ, ಅತ್ಯಂತ ಗಂಭೀರತೆಯಿಂದ ಮುಂದು ವರಿದಳು ಲಿಯೋನಾ "ಏನೇ ಬಂದರೂ, ಧರ್ಮ ನೀತಿಗಳ ಚೌಕಟ್ಟನ್ನು ದಾಟಿ ಹೋಗುವುದು ಸರಿಯಲ್ಲ. ನಾನು ಸತ್ತರೂ ಸಹ ಧರ್ಮನೀತಿಗಳನ್ನು ಬಿಟ್ಟುಕೊಡಲಾರೆ."

ಡೇವಿಡ್ ಮುಗುಳುನಕ್ಕ.

* * * *

ಲಿಯೋನಾ ಡೇವಿಡ್ ಕಲಾಕೃತಿಗಳ ಅಂಗಡಿಯನ್ನು ತೆರೆದು 'ಬ್ರೈಟ್ ಕಾರ್ನರ್' ಎಂದು ಹೆಸರಿಸಿದಾಗ ಸ್ವಯಂ ಡೇವಿಡ್ಡನೇ ವಿರೋಧಿ ಸಿದ್ದ. ಅರ್ಥಾತ್ ಗೆಳೆಯ ಗೆಳತಿಯರೂ ವಿರೋಧಿಸಿದ್ದರು. ಆಗ ಅಂಗಡಿ ಸುಣ್ಣ ಬಣ್ಣವನ್ನು ಕಂಡು ಎಷ್ಟುಕಾಲವೋ. ಗೋಡೆಗಳಿಗೆ ಮಸಿಹತ್ತಿ, ಅಲ್ಲಲ್ಲಿ ಗಾರೆಯು ಕಳಚಿ ಬಿದ್ದು, ಇಟ್ಟಿಗೆಗಳು ವಿಲಕ್ಷಣವಾಗಿ ವೈದೋರಿ ಪ್ರಗತಿಗೆ ಅಪಕೀರ್ತಿಯಂತಿತ್ತು. ಗುಬ್ಬಚ್ಚಿಯ ಗೂಡುಗಳಿಗೂ, ಜೇಡನ ಬಲೆಗಳಿಗೂ, ಇಲಿಯ ಬಿಲಗಳಿಗೂ ಕೊರತೆಯಿರಲಿಲ್ಲ. ಯಾರ ಸಹಕಾರವೂ ದೊರೆಯದೆ ತಾನೊಬ್ಬಳೇ ಎಲ್ಲದರಲ್ಲೂ ಅದ್ಭುತ ಶಕ್ತಿಯಿಂದ ತಲೆಹಾಕ ಬೇಕಾಗಿ ಬಂದರೂ ಲಿಯೋನಾ ಹೆದರಲಿಲ್ಲ; ಬೆದರಲಿಲ್ಲ. ಮೊಟ್ಟ ಮೊದಲನೆಯದಾಗಿ ಅಂಗಡಿಯ ಸ್ವಚ್ಛತೆಗೆ ತಾನೊಬ್ಬಳೇ ಗಮನ ಕೊಡು ವಾಗ ಮುಂದೆ ಹೇಗೋ ಏನೋ ಎಂಬ ಅಳುಕು ಮೂಡಿದರೂ ತನಗೆ ತಾನೇ ಹುರಿದುಂಬಿಸಿಕೊಂಡಳು. ಮೊದಮೊದಲು ಬಂದವರೆಲ್ಲಾ ಅಂಗಡಿಯ ಸ್ಥಿತಿ ಗತಿಯನ್ನು ನೋಡಿ ಮೂಗು ಮುರಿಯುವವರೇ, ನಗೆ ಚಟಾಕಿ ಹಾರಿಸು ವವರೇ, ಆದರೂ ಲಿಯೋನಾ ಜಗ್ಗಲಿಲ್ಲ.

ಡೇವಿಡ್ಡನದು ಹಳೆಯ ಕಾರುಗಳ ವ್ಯಾಪಾರ. ಅದೃಷ್ಟ ಕೂಡಿದಾಗ ಕೈ

ತುಂಬ ಗಳಿಸಿ ಇತರ ಸಮಯಗಳಲ್ಲಿ ಸಪ್ಪೆ ಮೋರೆ ಹಾಕಿಕೊಳ್ಳುತಿದ್ದ. ಬದುಕು ಚದುರಂಗದಾಟವಾಡುವಾಗ ಒಮ್ಮೆ ಕೆಚ್ಚಾದರೂ ಇನ್ನೊಮ್ಮೆ ಹುಚ್ಚಾಗುತಿದ್ದ. ಲಿಯೋನಾ ತನ್ನ ವ್ಯವಹಾರದಲ್ಲೇ ಕೂಡಿದರೆ ತಾನು ಸೆಕ್ರೆಟರಿಗಾಗಿ ಖರ್ಚು ಮಾಡುವ ಹಣ ಉಳಿತಾಯವಾಗುತಿತ್ತು ಎಂಬಷ್ಟು ದೂರ ಓಡುತಿತ್ತು ಬುದ್ಧಿ. ಅಂತಹ ಸಂದರ್ಭದಲ್ಲಿ ಮಾತಿನ ಚಕಮುಕಿಯೂ ನಡೆದು ಕೋಪದ ಕಿಡಿಗಳೂ ಮೂಡುತಿದ್ದುವು. ಆದರೂ ಲಿಯೋನಾಳ ಮನಸ್ಸೆಲ್ಲಾ ಕಲಾವಂತಿಗೆಯ ಮೇಲೆ. ತಾವಂತೂ ಕಲೆಗಾರರಲ್ಲ; ಕಲೆಗಾರರಿಗಾದರೂ ನಮ್ಮಿಂದ ಅಲ್ಪಸ್ವಲ್ಪ ಪ್ರಯೋಜನವಾಗಲಿ ಎಂಬಷ್ಟು ಕಲೆಯಮೇಲೆ ಅಭಿಮಾನ. ಹಾಗೆಂದು ಅಭಿಮಾನದ ಹಾದಿಯಲ್ಲಿ ಪ್ರಥಮ ಹೆಜ್ಜೆ ಇಟ್ಟಾಗ ಏನೆನ್ನಿಸದಿದ್ದರೂ ಅನಂತರ ತನ್ನ ಹಾದಿಯಲ್ಲಿ ಸಾಕಷ್ಟು ಕಲ್ಲು ಮುಳ್ಳುಗಳಿವೆ ಎಂಬುದರ ಅರಿವು ಮೂಡಲು ಬಹಳ ಕಾಲ ಬೇಕಾಗಲಿಲ್ಲ. ದೇಶವಿದೇಶಗಳ ಕಲಾಕೃತಿಗಳನ್ನು ಸಂಗ್ರಹಿಸಲು ಯಾನ ಕೈಕೊಂಡ ಸಮಯದಲ್ಲೇ ಮಗಳು ಲ್ಯೂಸಿಯ ಹಿರಿಯ ಹೊರೆಯೂ ಹೆಗಲನ್ನೇರಿತು. ಮನಸ್ಸು ಹತ್ತಾರು ಚಿಂತನೆಗಳ ಬೀಡಾದರೆ ಹೆಗಲು ಹಲವಾರು ಹೊರೆಗಳ ಎತ್ತಾಯಿತು.

ಆದರೂ....

ಪೂರ್ವ ದಿಕ್ತಟದಲ್ಲಿ ಚಂದ್ರೋದಯವಾಗಿ ಗೂಢ ನಿಗೂಢ ಪಾಂಡುರ ಕಿರಣಗಳು ಉಕ್ಕೇರಿ ಬಂದಂತೆ ವ್ಯಾಪಾರ ಕ್ಷೇತ್ರ ಅದ್ಭುತ ಶಕ್ತಿಯ ಸಂಚಯನದಿಂದ ಬಿತ್ತರದ ಕ್ಷೇತ್ರವಾಗಿ ಅಜ್ಞಾತ ಸೌಭಾಗ್ಯ ಸಹಸ್ರ ಧಾರೆಗಳಲ್ಲಿ ಉಕ್ಕಿ ಹರಿಯತೊಡಗಿತು.

ಅಂದು ಮೂಗು ಮುರಿದವರೆಲ್ಲಾ ಇಂದು ಅಚ್ಚರಿಯಿಂದ ಮೂಗಿನ ಮೇಲೆ ಬೆರಳಿಟ್ಟರು. ಡೇವಿಡ್ ತನ್ನ ಉದ್ಯೋಗಕ್ಕೆ ಶರಣು ಹೊಡೆದು ಮಡದಿಗೆ ಭುಜಬಲವಾಗಿ ನಿಂತ. ಹಳೆಯ ಅಂಗಡಿಗೆ ಹೊಸರೂಪ ಬಂದು ಆಕ್ಸ್‌ಫರ್ಡಿಗೆ ಸತ್ಕೀರ್ತಿಯಂತೆ ಶೋಭಿಸಿ, ಸಿಲ್ವಿಯಾ ವರ್ಜಿನಿಯಾರವರಿಗೆ ಆಶ್ರಯ ನೀಡಿ ದೇಶವಿದೇಶಗಳ ಸ್ವಚ್ಛಂದ ವ್ಯವಹಾರದಲ್ಲಿ ಕೈ ಚಾಚಿತು "ಬ್ರೈಟ್ ಕಾರ್ನರ್."

* * * *

ಲಿಯೋನಾ ಅಂಗಡಿಗೆ ಬಂದಾಗ ಹುಡುಗಿಯರು ಅಂಗಡಿ ತೆರೆದು ಧೂಳು ಝಾಡಿಸಿದ್ದರು. ಕಲಾಕೃತಿಗಳನ್ನು ಓರಣವಾಗಿ ಜೋಡಿಸುತ್ತಾ

ಲಿಯೋನಾ ಹೇಳಿದಳು.

"ವ್ಯಾಪಾರಕ್ಕೆ ಚಟುವಟಿಕೆ ದಕ್ಷತೆಗಳು ಮಾತ್ರ ಪೂರಕವಲ್ಲ. ನಯ-ವಿನಯ-ಸತ್ಯ-ಧರ್ಮಗಳೂ ಅಗತ್ಯ."

ಹುಡುಗಿಯರು ಮಾತಾಡದೆ ಮಂದಹಾಸ ಬೀರಿದರು.

ಪೂರ್ವ ದಿಗಂತದ ಧೂಮ ನೀಲಿಮೆಯ ವಿರಾಟ್ ಸಾಗರದಲ್ಲಿ ನವೋದಿತ ಸೂರ್ಯಮಂಡಲ ಶೋಭಾ ಸಮುದ್ರವನ್ನು ಉಕ್ಕೇರಿಸುತಿತ್ತು. ಸುತ್ತ ಮುತ್ತಿನ ಮಂಜು ಮೋಡಗಳ ರಾಶಿಯಲ್ಲಿ ಅರುಣ ಕಿರಣಗಳ ಮಂಜುಳ ಧಾರೆ ಲೀಲಾ ಖೇಲನಗೈದು ಬಂಧುರ ಹೊನ್ನಿನ ಜಾಲವನ್ನು ನಿರ್ಮಿಸಿ, ಮನಮೋಹಕವಾಗಿ ಹರಿದು ಬಂದು ಅಂಗಡಿಯ ಒಳಗಡೆ ವ್ಯಾಪಿಸಿದುವು.

ಕಲಾಕೃತಿಗಳನ್ನು ನಯವಾದ ಹತ್ತಿಯ ಬಟ್ಟೆಯಿಂದ ಒರಿಸುತ್ತಾ ಲಿಯೋನಾ ನುಡಿದಳು.

"ದೇಶವಿದೇಶಗಳ ಕಲೆಗಳು ಅಲ್ಲಿಯ ಸಂಸ್ಕೃತಿಯನ್ನು ಎಷ್ಟು ಹೃದಯಂಗಮವಾಗಿ ಚಿತ್ತರಿಸುತ್ತವೆ....? ಇವುಗಳ ಮೂಲಕ ಆಯಾ ಜನಮನವನ್ನು ಅರಿತುಕೊಳ್ಳಬಹುದಾದ ಸಾಧ್ಯತೆಯನ್ನು ಗಮನಿಸಿದರೆ ನಿನಗೇ ನೆನಿಸುತ್ತೆ ಸಿಲ್ವೀ?"

"ನಿಜ....." ಶಿರದೂಗಿ ಮುಂದುವರಿದಳು ಸಿಲ್ವಿಯಾ "ಅವು ನಮ್ಮ ಜ್ಞಾನ ಮೂಲವನ್ನು ದೃಢಪಡಿಸುವುದಷ್ಟೇ ಅಲ್ಲ ಕುತೂಹಲವನ್ನೂ ಕೆರಳಿಸುತ್ತವೆ."

"ಖಂಡಿತ........ಗಾಂಧೀಜಿಯವರ ಹೃದಯವನ್ನು ಈ ಕೋತಿಗಳ ಮೂಲಕ ಅರಿತುಕೊಳ್ಳಬಹುದು." ಲಿಯೋನಾ ಶುಭ್ರ ಚಿತ್ತ ಪ್ರಸನ್ನತೆಯಿಂದ ನುಡಿದಳು. ಮುಖಮಂಡಲದಲ್ಲಿ ಯಾವುದೋ ಕಂಡರಿಯದ ಪ್ರತ್ಯಾಶಿತ ಲೀಲೆಯ ವರಪ್ರಭಾವ ಕಂಗೊಳಿಸುತಿತ್ತು. ದೀಪ್ತಕಂಠದಿಂದ ಮತ್ತೆ ಮುಂದುವರಿದಳು "ಗಾಂಧೀಜಿ ಸತ್ಯದ ಮೂಲಕ ಸಾಧಿಸಿದ ಮಹತ್ಸಾಧನೆ ಸಾಮಾನ್ಯವಲ್ಲ. ಭಾರತದ ಲಕ್ಷ್ಯಸಿದ್ಧಿಗಾಗಿ ಅವರು ತೊಟ್ಟ ಮಹಾಸಂಕಲ್ಪ ಅವರನ್ನು ಏಸು, ಬುದ್ಧರ ಶ್ರೇಣಿಯಲ್ಲಿ ಬೆಳಗಿಸಿತು."

"ಯಾವುದೇ ವ್ಯಕ್ತಿಯ ಆತ್ಮದಾನದಲ್ಲಿ ಆತನಿಗೆ ಮುಕ್ತಿ ಅಥವಾ ಆತ್ಮಶಾಂತಿ ಲಭಿಸುವುದಾದಲ್ಲಿ ಈ ಜೀವನ ಸತ್ಯ ಸರ್ವೋತ್ತಮ ಲಕ್ಷ್ಯಸಿದ್ಧಿ.

ಇಲ್ಲದಿದ್ದರೆ....?" ವರ್ಜಿನಿಯಾ ಅನುಮಾನಿಸುತ್ತಾ ನುಡಿದಳು

"ಆತ್ಮಜ್ಞಾನವೇ ಜೀವನ ಸಿದ್ಧಿ ಮಗೂ!"

* * * *

ವಿಧಿ ತನ್ನ ಸಂಕಲ್ಪ ಸಾಧನೆಗಾಗಿ ದುರ್ನಿಮಿತ್ತಗಳನ್ನು ಮಾಯಕತೆಯಿಂದ ಹೊಂಚಿಕೊಳ್ಳುತ್ತಲೇ ಇರುತ್ತದೆ. ಅಂತಹ ಸೂಕ್ಷ್ಮ ವ್ಯವಹಾರದಲ್ಲಿ ದುರ್ನಿಮಿತ್ತಗಳ ಮಹಾಜಾಲದಲ್ಲಿ ಬಹಳೇ ಸೂಕ್ಷ್ಮವಾಗಿ ಸಿಕ್ಕಿಕೊಂಡ ದುರ್ದೈವಿ ಲಿಯೋನಾ ಅನಿರೀಕ್ಷಿತವಾಗಿ ಹೇಳಿಕೇಳುವ ಮೊದಲೇ ಕೊನೆಯುಸಿರೆಳೆದುದರಿಂದ ಆ ಪುಟ್ಟ ಸಂಸಾರದಲ್ಲಿ ತಲೆದೋರಿದ ಮಹಾ ದುಃಖ, ಸಿಡಿದ ಬರಸಿಡಿಲು, ನಿಸ್ತಬ್ಧಸ್ಫೋಟ, ಸಾಮಾನ್ಯವೂ ಅಲ್ಲ; ಅಸಾಮಾನ್ಯವೂ ಅಲ್ಲ.

ಜೀವನ ಬಂಧ ಸಾಗರ ತಡಿಯ ಸೈಕತ ಸೇತುವಿನಂತೆ ಅಸ್ಥಿರ; ನೀಲ ಜಲರಾಶಿಯ ರೇಖಾವಿನ್ಯಾಸದಂತೆ ನಶ್ವರ; ಅನುದಿನವೂ ಸಂಭವಿಸುವ ಸುಖ ದುಃಖಗಳಂತೆ ಅನಿತ್ಯ.

ಶಾಲಾದಿನಗಳನ್ನು ಸಾನಂದದಿಂದ ಕಳೆದಿದ್ದ ಲ್ಯೂಸಿ ದುಃಖದ ಕಡಲಲ್ಲಿ ಮಿಂದೆದ್ದಳು. ಜೀವನದುದ್ದಕ್ಕೂ ಮಡದಿಯ ಆಶ್ರಯದಿಂದ ಬಾಳಿನ ಸವಿಯನ್ನುಂಡ ಡೇವಿಡ್ ಬರ ಸಿಡಿಲು ಬಡಿದವನಂತೆ ನಿಶ್ಚೇಷ್ಟನಾದ. ಹೃದಯ ಭರಿಸಲಾರದಷ್ಟು ದುಃಖದ ಕಡಲಾಯಿತು. ತುಂಡುಗಡಿದ ಕದಳಿಯಂತೆ ದೊಪ್ಪನೆ ಬಿದ್ದು ಮೂರ್ಛಿತನಾದ.

ಬಾಳ್ಬನದ ದಿವ್ಯದೇಗುಲದಲ್ಲಿ ಉರಿಯುತಿದ್ದ ನಂದಾದೀಪ ನಂದಿ ಹೋದಮೇಲೆ ಮೊದಲ ಹತ್ತು ದಿನಗಳು ದುಃಖಾರ್ಥವಾಗಿ ಕದವನ್ನು ಮುಚ್ಚಿಕೊಂಡಿತು ಬ್ರೈಟ್ ಕಾರ್ನರ್. ನಿಕಟವರ್ತಿಗಳು ಕಪ್ಪು ಬಟ್ಟೆ ಧರಿಸಿದರು. ದುಃಖಪೂರಿತ ಬಿಸುಸುಯ್ಲು ಬೀಸುಗಾಳಿಯಲ್ಲಿ ತೇಲಿ ಅನಂತಾನಂತದಲ್ಲಿ ಲೀನವಾಯಿತು. ಹರಿದ ಕಂಬನಿಯ ಕೋಡಿ ಮಣ್ಣಿನ ಹುಡಿಯಲ್ಲಿ ಬೆರೆತು ಬಿಸಿಲ ಕಾವಿಗೆ ತನಿಯನ್ನೂಡಿಸಿತು.

ಡೇವಿಡ್ ಅಂಗಡಿಗೆ ಬಂದಾಗ ಹುಡುಗಿಯರು ಅಂಗಡಿಯನ್ನು ತೆರೆದು ಧೂಳನ್ನು ಝಾಡಿಸುತಿದ್ದರು. ಡೇವಿಡ್ನ ದುಃಖಾಂತ ಶರೀರ ಸೊರಗಿ

ಸುಣ್ಣವಾಗಿತ್ತು. ಕಣ್ಣುಗಳು ಪರಸ್ಪರ ಸಂಧಿಸಲಾರದೆ ಸಂಧಿಸಿದುವು. ವರ್ಜಿನಿಯಾ ಕೇಳಿದಳು "ಲ್ಯೂಸಿ ಬರುತ್ತಾಳೆಯೆ ಅಂಕಲ್ ?"

"ಇಂದು ಬರಲಾರಳೇನೋ," ಬಹಳ ಕಷ್ಟದಿಂದ ನುಡಿದ ಡೇವೀಡ್. ಬೀರು ಶೆಲ್ಫ್‌ಗಳಲ್ಲಿನ ವಸ್ತು ವಸ್ತುಗಳೂ ಲಿಯೋನಾಳನ್ನು ಪ್ರತಿಬಿಂಬಿಸುತ್ತಿವೆ. ಪ್ರಕಾಶಮಯೀ ವಸ್ತುಗಳ ಪರಿಧಿಯಲ್ಲಿ ಮೆಚ್ಚಿನ ಮಡದಿಯ ಮುಖಮಂಡಲ ಸುಳಿಸುಳಿದು ಮಾಯವಾಯಿತು. ಥಳಥಳಿಸುವ ಹೂದಾನಿಗಳಲ್ಲಿ ಚಿತ್ರಮಯೀ ಶೋಭೆಯಂತೆ ಲಿಯೋನಾ ಮುಖಬಿಂಬ ಕಂಗೊಳಿಸುತಿತ್ತು. ಡೇವಿಡ್ ಅಲ್ಲಿ ಕೂರಲಾಗದೆ ಒಳಕೋಣೆಗೆ ಹೋದ. ದುಃಖ ಉಮ್ಮಳಿಸಿಬಂತು. ಅಳುವಷ್ಟು ಹೊತ್ತು ಅತ್ತು ಮುಖವನ್ನು ತೀಡಿಕೊಂಡು ಹೊರಬಂದ.

ಕಳೆದ ಹತ್ತು ದಿನಗಳಿಂದಲೂ ಲ್ಯೂಸಿಗೆ ಆಸರೆಯಾಗಿ ನಿಂತ ವರ್ಜಿನಿಯಾ ಮತ್ತು ಸಿಲ್ವಿಯಾರವರಿಗೆ ಇಂದು ಲ್ಯೂಸಿ ಅಂಗಡಿಗೆ ಬರುವುದಿಲ್ಲವೆಂದು ತಿಳಿದಿತ್ತು. ಅವಳಿಲ್ಲದೆ ಅಂಗಡಿ ತೆರೆಯಲು ಮನಸ್ಸಿರಲಿಲ್ಲವಾದರೂ ವಿಧಿ ಇರಲಿಲ್ಲ. ಅಂಗಡಿಯ ವ್ಯವಹಾರದಲ್ಲಿ ಗಮನವನ್ನು ತೊಡಗಿಸಿದರೆ ಸ್ವಲ್ಪವಾದರೂ ಮನಸ್ಸಿಗೆ ಶಾಂತಿಯನ್ನು ಪಡೆಯಬಹುದು, ಖಂಡಿತಾ ಬಾ ಎಂದು ಹೇಳಿಯೇ ಬಂದಿದ್ದರು. ಆದರೂ ಆ ಹುಡುಗಿ ಬರಲಿಲ್ಲ. ಇಷ್ಟರಲ್ಲೇ ಬರಬಹುದು ಎಂದು ಹಾದಿ ನೋಡುವುದರಲ್ಲೇ ಹೊತ್ತು ಉರುಳಿತು. ಈಗ ಡೇವಿಡ್ ಒಬ್ಬನೇ ಬಂದ ಮೇಲೆ ಉಳಿದ ಒಂದು ಆಶಾಕಿರಣವೂ ಬತ್ತಿ ಹೋಯಿತು. ವರ್ಜಿನಿಯಾ ಏನನ್ನೋ ಹೇಳಲು ತೊದಲಿ ಸುಮ್ಮನಾದಳು. ಆತನ ಶೋಣವರ್ಣದ ಮುಖ ಬೆಂಕಿಯಲ್ಲಿ ಬಾಡಿಸಿದಂತೆ ಬಾಡಿತ್ತು. ಸಿಲ್ವಿಯಾ ತುಟಿಗಳನ್ನು ನಾಲಿಗೆಯಿಂದ ಒರಸಿಕೊಳ್ಳುತ್ತಾ ನುಡಿದಳು. "ನೀವೇ ಹೋಗಿ ಕರೆತನ್ನಿ ಅಂಕಲ್. ಲ್ಯೂಸಿ ಒಬ್ಬಳೇ ಮನೆಯಲ್ಲಿ ಕೊರಗುತ್ತಾಳೆ."

"ಬಾ. ಎಂದೆ. ಬರಲಿಲ್ಲ. ನಾಳೆ ಬಂದಾಳೇನೋ...."

"ಆಗಲೇ ಹೊರಟು ಬಿಟ್ಟಿರಿ. ನೀವಿಬ್ಬರೂ ಇಲ್ಲದೆ ನಮಗೆ ಕೆಲಸ ಮಾಡುವುದೇ ಕಷ್ಟ."

ಎಷ್ಟೋ ಕಷ್ಟದಿಂದ ಆ ನುಡಿಯನ್ನು ಹೊರಹಾಕಿದಳು ವರ್ಜಿನಿಯಾ.

ಡೇವಿಡ್ ಭಾವವಿಷ್ಟನಾದ.

ಆ ಮುಹೂರ್ತದಲ್ಲಿ ಯಾರ ತುಟಿಯೂ ಬಿರಿಯಲಿಲ್ಲ. ಒಂದೆರಡು ಘಳಿಗೆ ಹಾಗೆ ನಿಂತಿದ್ದ ಡೇವಿಡ್ ಮತ್ತೆ ಬರುವುದಾಗಿ ಹೇಳಿ ಹೊರಬಿದ್ದ. ಭಾರವಾದ ತನುಮನಗಳನ್ನು ಹೊರಲಾರದೆ ಹೊತ್ತಂತೆ ನಡೆದು ಹೋದ ರೀತಿ ಮರುಕ ಮೂಡಿಸಿತು. ಹುಡುಗಿಯರಿಬ್ಬರೂ ಕಣ್ಣವೆ ಮಿಟುಕಿಸದೆ ಅವನನ್ನೇ ನೋಡಿದರು. ರಸ್ತೆಯಂಚಿನಲ್ಲಿ ಬಳ್ಳಿದೇಹ ಹೋಗುಹೋಗುತ್ತಾ ಸಣ್ಣದಾಗಿ ಕಡ್ಡಿಯಂತೆ ದೂರದ ತಿರುವಿನಲ್ಲಿ ಕಣ್ಮರೆಯಾಗುವವರೆಗೂ ನೋಡುತ್ತ ನಿಂತ ಅವರ ಎದೆಯಾಳದಲ್ಲಿ ಸಂತಾಪದ ಬಿಸಿಯುಸಿರು ಎಣೆಯಿಲ್ಲದೆ ಹರಿದಾಡಿತು.

"ಪಾಪ, ಅಂಕಲ್ ಬಹಳ ಪೆಚ್ಚಾಗಿದ್ದಾನೆ."

"ದುರ್ದೈವಿ ಆಂಟಿ."

*   *   *   *

ಹೊತ್ತು ಏರುವುದರೊಳಗಾಗಿ ಗಿರಾಕಿಗಳ ಒತ್ತಡ ಹೆಚ್ಚಿ ವ್ಯಾಪಾರ ಕೇಂದ್ರವಾಯಿತು ಅಂಗಡಿ. ಹಳೆಯ ಗಿರಾಕಿಗಳು ತಮ್ಮ ಅನುತಾಪವನ್ನು ವ್ಯಕ್ತಪಡಿಸುವಾಗ ವ್ಯಾಪಾರದೊಂದಿಗೆ ಶೋಕ ಸಭೆಯೂ ನಡೆಯಿತು. ವ್ಯಾಪಾರ ಹೇಗೆ ಸಾಗಿತ್ತೊ, ಹೊತ್ತು ಹೇಗೆ ಉರುಳಿತೋ ಎಂಬುದನ್ನು ಗಮನಿಸುವಷ್ಟು ವ್ಯವಧಾನವಿರಲಿಲ್ಲವಾದರೂ ಎಲ್ಲವೂ ಯಾಂತ್ರಿಕವಾಗಿ ನಡೆಯಿತು. ಬಿಸಿಲು ನಡುನೆತ್ತಿಗೇರುತ್ತಲೂ ಗಿರಾಕಿಗಳು ನಿಷ್ಕ್ರಮಿಸಿದರು. ಬ್ರೈಟ್ ಕಾರ್ನರ್ ಮಧ್ಯಾಹ್ನದ ಬಿಡುವಿಗಾಗಿ ಕದ ಮುಚ್ಚಿಕೊಂಡಿತು. ಇಬ್ಬರೂ ಒಳಕೋಣೆಯಲ್ಲಿ ಊಟದ ಕ್ಯಾರಿಯರನ್ನು ಬಿಚ್ಚಿದರು.

ಸಣ್ಣ ಮೇಜು. ಸುತ್ತಮುತ್ತ ನಾಲ್ಕು ಕುರ್ಚಿಗಳು. ಸಾಲಾಗಿನ ಶೆಲ್ಫ್‌ಗಳಲ್ಲಿ ಬಗೆ ಬಗೆಯ ಕಲಾಕೃತಿಗಳು, ಇನ್ನೂ ಪಾರ್ಸಲ್ ಒಡೆಯದ ಡಬ್ಬಗಳು, ಪತ್ರವ್ಯವಹಾರದ ಫೈಲ್‌ಗಳು, ಲೆಖ್ಖದ ಪುಸ್ತಕಗಳು, ಫ್ಲಾಸ್ಕ್, ಲೋಟ, ನೀರಿನ ಹೂಜಿ, ಟಿಫಿನ್ ಕ್ಯಾರಿಯರ್, ಸ್ವೆಟರ್, ಓವರ್ ಕೋಟು ಇತ್ಯಾದಿಗಳ ಅಮಿತ ಸಂಗ್ರಹಣೆಯಿಂದ ಪುಟ್ಟ 'ಮ್ಯೂಜಿಯಂ'ನಂತೆ ತೋರುತಿತ್ತು–ಒಳಕೋಣೆ.

ಮೇಜಿನ ಮಧ್ಯೆ ಕ್ಯಾರಿಯರನ್ನು ಬಿಚ್ಚಿ, ಬೆಂದ ಆಲೂಗೆಡ್ಡೆಯನ್ನು ಸುಲಿಯುತ್ತಾ ವರ್ಜಿನಿಯಾ ವಿಚಾರಮಗ್ನಳಾಗಿ ಕಳವಳ ತುಂಬಿದ ರುದ್ಧ ಕಂಠದಿಂದ ನುಡಿದಳು "ಆಂಟಿ ಸತ್ತರೂ ಸತ್ತಿದ್ದಾಳೆ ಅನಿಸುವುದೇ ಇಲ್ಲ....ಈಗ

ಬಂದಾಳು ; ಆಗ ಬಂದಾಳು ಎನಿಸುತ್ತೆ.”

“ನಿಜ. ಒಮ್ಮೆಯೂ ಕಾಹಿಲೆ ಬೀಳದ ಆಂಟಿ ಹೇಳದೆ ಕೇಳದೆ ಕೊನೆ ಉಸಿರೆಳೆದರೆ ಇನ್ನೇನೆನಿಸೀತು ?”

ಮಾತೃಭಾವದ ಆಸ್ವಾದ ಕಣ್ಣುಗಳಲ್ಲಿ ಕಂಬನಿಯನ್ನು ಮಿಡಿಸಿತು. ಒಂದು ವಿಧವಾದ ದುಃಖ....ಇನ್ನೊಂದು ವಿಧವಾದ ವಿಶ್ಲೇಷಣೆ.... ಮತ್ತೊಂದು ವಿಧವಾದ ಭವ್ಯ ಭವಿತವ್ಯದ ಪ್ರಶ್ನೆ. ನಾನಾಯೋಚನೆಗಳ ಅಪಾರ ಜಡಿಮೆಯಿಂದ ಭಾರಾಕ್ರಾಂತವಾಯಿತು ಹೃದಯ.

ಸುಲಿದ ಆಲೂಗೆಡ್ಡೆಗಳನ್ನು ತಟ್ಟೆಯಲ್ಲಿಟ್ಟು ಖಾದ್ಯಗಳನ್ನು ಬಡಿಸುತ್ತಾ ಅದೇ ಯೋಚನೆಯಲ್ಲಿ ನಿಮಗ್ನಳಾದಳು. ಪ್ರಯತ್ನಿಸಿದರೂ ಮಾತು ಹೊರಡಲಿಲ್ಲ ; ದುಃಖದ ಮಹಾನವಮಿಯಲ್ಲಿ ಮುಳುಗಿ ಹೋಗಿತ್ತು ಮನಸ್ಸು. ಈ ಕಲಾದೇವತೆಗಳ ಆವಾಸಸ್ಥಾನದಲ್ಲಿದ್ದರೂ, ಅನುಗಾಲವೂ ಅವುಗಳ ಆರಾಧನೆಗೈದರೂ ಆಂಟಿಗೆ ರಕ್ಷೆ ದೊರೆಯಲಿಲ್ಲವಲ್ಲಾ ಎನಿಸಿತೊಮ್ಮೆ.

ಆದರ್ಶ ಜೀವನದ ಘನಕೃಷ್ಣಕಾಂತರಕ್ಕೆ ವಿಧಿಯು ಸೇಡಿನ ಕಿಡಿರೂಪ ಸಹಾಯಕತೆಯಿಂದ ಬಿತ್ತೋ....

* * *

ಬಿಡುವಿನ ವೇಳೆಯನ್ನು ಕಳೆದು ಕದವನ್ನು ತೆರೆಯುವಷ್ಟರಲ್ಲಿಯೇ ಗಿರಾಕಿಗಳ ಭೇಟಿ ಆರಂಭವಾಯಿತು. ಇಬ್ಬರಿಗೂ ಬಿಡುವಿಲ್ಲದಷ್ಟು ಕೆಲಸ. ಈಗಲೂ ಡೇವಿಡ್ಸನಾಗಲೀ ಲ್ಯೂಸಿಯಾಗಲೀ ಅಂಗಡಿಗೆ ಬಾರದುದರಿಂದ ನಾವು ಅಂಗಡಿ ತೆರೆದುದೇ ತಪ್ಪು ಎಂದೆನಿಸಿತು. ಎಂದಿನಂತೆಯೇ ಇಂದೂ ಅಂಗಡಿಯಲ್ಲಿ ನಿಂತುಕೊಳ್ಳಲು ತಾವಿಲ್ಲದಷ್ಟು ಜನ ತುಂಬಿದರು. ಸಿಲ್ವಿಯಾ ಗಿರಾಕಿಗಳೊಂದಿಗೆ ವ್ಯವಹರಿಸುತ್ತಾ ನೋಟವನ್ನು ಬಾಗಿಲಕಡೆ ಹರಿಸಿದಾಗ ನಸು ಬೆನ್ನು ಬಾಗಿದ ಮುದುಕಿಯೊಂದು ಮೆಟ್ಟಿಲು ಹತ್ತುತಿತ್ತು. ಶೀರ್ಣಿತ ವೃದ್ಧ ಮುಖದಲ್ಲಿ ಕಣ್ಣಾಲಿಗಳು ಮಿನುಮಿನುಗುವ ಕಿರು ತಾರಗೆಗಳಂತಿವೆ. ತಲೆಗೂದಲು ಗಾಳಿಗೆ ಚದುರದಂತೆ ಅಂಗ ವಸ್ತ್ರವೊಂದನ್ನು ಕಟ್ಟಿದ್ದಾಳೆ. ಅವಳ ನಿಡಿಗಣ್ಣ ನೋಟದಲ್ಲಿನ ಆಸಕ್ತಿಯನ್ನು ನೋಡಿ ಒಳ್ಳೆಯ ಗಿರಾಕಿಯೊಂದು ದೊರಕಿತು ಎಂದುಕೊಂಡು ತಾನು ವ್ಯವಹರಿಸು

ತಿದ್ದ ವ್ಯವಹಾರ ಮುಗಿಸಿದನಂತರ ಆ ಕಡೆ ನೋಟ ಹೊರಳಿಸಿದಾಗ ವೃದ್ಧೆ ಒಳಗಿನ ಬೀರುವಿನೆಡೆ ನಿಂತು ಮೂಲೆಯಲ್ಲಿ ಜೋಡಿಸಿದ ಆನೆಗಳ ಸಾಲನ್ನೂ ಹೂದಾನಿಗಳನ್ನೂ ನಿಟ್ಟಿಸುತಿದ್ದುದು ಕಾಣ ಬಂತು.

ಅರೆ ! ಅವಳಿಗೆ ಅಲ್ಲೇನು ಕೆಲಸ? ಹೇಳದೆ ಕೇಳದೆ ಒಳ ಹೋಗಿ ಬಿಡುವುದೇ ? ಬಹುಶಃ ಲ್ಯಾಸಿ-ಅಂಕಲ್ ಇಲ್ಲದಿರುವುದನ್ನು ಕಂಡುಕೊಂಡೇ ಬಂದಿದ್ದಾಳೋ ಏನೋ....ಕಳ್ಳ ಮುದುಕಿಯರೇ ಹಾಗೆ. ಎಲ್ಲೀ ಆಗಲಿ, ಏನಾದರೂ ಪಾರುಪತ್ಯ ಮಾಡದಿದ್ದರೆ ಉಂಡಿದ್ದು ಜೀರ್ಣವಾಗುವುದಿಲ್ಲ.... ತುಟ್ಟಿ ಕಚ್ಚಿದಳು ಸಿಲ್ವಿಯಾ.

....ಆದರೆ ಎಲ್ಲೋ ನೋಡಿದಂತಿದೆ. ಯೋಚಿಸಿದರೂ ಊಹಿಸಲಾಗದ ಮಸುಕು ನೆನಹು. ಅಥವಾ ಹಳೆಯ ಗಿರಾಕಿ....? ಅಲ್ಲ ; ಅಲ್ಲ ; ಅವಳ ಬಿಳಿಯ ಹೂಗಳ ಹಸುರು ಫ್ರಾಕು....ಎಲ್ಲೋ ನಿನ್ನೆ ಮೊನ್ನೆ ನೋಡಿದ್ದೆ. ಯಾರಿರಬಹುದು ?....ಹಾಂ !

"ಈ ಹೂದಾನಿಯ ಬೆಲೆಯೆಷ್ಟು ಮಗಳೇ ?"

ಪ್ರೌಢೆಯ ಕಂಠಸ್ವನ ಗಮನವನ್ನು ಸೆಳೆದುಕೊಂಡಿತು. ಅವಳೊಂದಿಗೆ ವ್ಯವಹರಿಸಿ ಅತ್ತ ಕಣ್ಣು ಹೊರಳಿಸಿದರೆ ಅಜ್ಜಿ ಇರಲಿಲ್ಲ.

....ಆ ಅಜ್ಜಿ ಯಾರು ? ಆ ಚಿರಪರಿಚಿತವಾದ ಫ್ರಾಕು ಯಾರದು ? ಎಲ್ಲೋ ನೋಡಿದಂತಿದೆಯಲ್ಲಾ, ಎಲ್ಲಿ? ಆ ಕಾಲರ್, ಆ ನಿರಿ, ಆ ಬೋ, ಆ ಬೆಲ್ಟು.....ಓ ಹೋ ! ಈಗ ನೆನಪಾಯಿತು. ಲಿಯೋನಾ ಆಂಟಿ ತೊಡ್ತಿದ್ದ ಫ್ರಾಕು ! ಬಹುಶಃ ಆಂಟಿಯ ಮರಣಾನಂತರ ಲ್ಯಾಸಿ ಇವಳಿಗೆ ದಾನವಾಗಿ ಕೊಟ್ಟಿರಬಹುದೇ ? ಅಥವಾ ಒಂದೇ ಅಂಗಡಿಯಲ್ಲಿ ಕೊಂಡ ಫ್ರಾಕುಗಳಿದ್ದರೂ ಇರಬಹುದೇ ? ಅಂತೂ ಆಂಟಿ ಬಳಿ ವಿನಾ ಈ ಫ್ರಾಕು ಇನ್ನೆಲ್ಲೂ ನೋಡಿರಲಿಲ್ಲ.....ಯೋಚಿಸಿದಳು ಸಿಲ್ವಿಯಾ.

"ಈ ಕೋತಿಗಳ ಬೆಲೆಯೆಷ್ಟು ?"

ಅವು ಕಿವಿ, ಮೂಗು, ಬಾಯಿಗಳನ್ನು ಮುಚ್ಚಿಕೊಂಡು ಕುಳಿತ ನೀತಿಯನ್ನು ವಿವರಿಸಿ, ಅದರ ವ್ಯವಹಾರವನ್ನು ಮುಗಿಸುವಾಗಲೂ ಆ ಅಜ್ಜಿಯ ಹಸುರು ಫ್ರಾಕು ಅಕ್ಷಿಪಟಲದ ಮೇಲೆ ಸುಳಿಸುಳಿದಳಿಯುತಿತ್ತು. ಹೊತ್ತು ಉರುಳಿ ಜನ ಒತ್ತಡ ಕಡಿಮೆಯಾದ ಮೇಲೆ "ಜನೀ, ಆಗ ಮುದುಕಿ

ಯೊಂದು ಒಳ ಬೀರುವಿನೆಡೆಗೆ ಬಂದಿದ್ದಳಲ್ಲಾ ನೋಡಿದೆಯಾ ?"

"ಹಾಗೆಂದರೆ ಯಾರು? ಬೇಕಾದಷ್ಟು ಮಂದಿ ಮುದುಕಿಯರು ಬಂದು ಹೋದರು. ಯಾರೆಂದು ಊಹಿಸಲಿ?"

"ಆ ಬೀರುವಿನ ಬಳಿ ನಿಂತು ನೋಡುತಿದ್ದಳು. ನೀನು ನೋಡಿರ ಬಹುದೆಂದು ಭಾವಿಸಿದೆ."

"ಇಲ್ಲ. ಗಿರಾಕಿಗಳ ಒತ್ತಡದಲ್ಲಿ ಗಮನಿಸುವಷ್ಟು ಬಿಡುವಾದರೂ ಎಲ್ಲಿತ್ತು?"

"ಅದೇನೋ ನಿಶ್ಚಯ," ಸಿಲ್ವಿಯಾ ತುಸು ಅಚ್ಚರಿಗೊಂಡರೂ ದುಃಖ ಗರ್ಭಿತ ತನುಮನಗಳಲ್ಲಿ ಲಿಯೋನಾಳ ಉಜ್ವಲ ವ್ಯಕ್ತಿತ್ವ ತುಂಬಿ ಹೋಗಿತ್ತು.

* * * *

ಪ್ರಶಾಂತ ವಾತಾವರಣದಲ್ಲಿ ಪ್ರಕಾಶಮಯೀ ಸಂಧ್ಯಾದೀಪಗಳು ಉರಿಯುತಿದ್ದುವು.

ಇಂದೂ ಸಹ ಡೇವಿಡ್ಸನಾಗಲೀ ಲ್ಯೂಸಿಯಾಗಲೀ ಅಂಗಡಿಗೆ ಬಂದಿರ ಲಿಲ್ಲ. ಸಿಲ್ವಿಯಾ ಮತ್ತು ವರ್ಜಿನಿಯಾರವರೇ ಅಂಗಡಿಯ ವ್ಯವಹಾರವನ್ನು ನಡೆಸುತಿದ್ದರು. ಹೊತ್ತು ಏಳರ ಅಂಚನ್ನು ದಾಟುತ್ತಲೂ ಅನಿರೀಕ್ಷಿತ ವಾಗಿ ಜನರ ಗುಂಪಿನಲ್ಲಿ ಅದೇ ಮುದುಕಿ! ಅದೇ ಹಸುರು ಫ್ರಾಕು! ಅರವತ್ತಕ್ಕೂ ಮೀರಿದ ಹೆಣ್ಣು, ಸುಕ್ಕು ಗಟ್ಟಿದ ಚರ್ಮ, ಶೀರ್ಣಿತ ಮುಖ, ಬಿಲ್ಲಿನಂತೆ ಬಾಗಿದ ಬೆನ್ನು, ಹೊಳೆಹೊಳೆಯುವ ಕಣ್ಣುಗಳು.....ಆಶ್ಚರ್ಯ! ಪುನಃ ಆ ಬೀರುವಿನೆಡೆಗೆ ಹೋಗಿ, ಅಲ್ಲಿಂದ ಒಳಕೊಠಡಿಯಲ್ಲಿ ಹಣಿಕಿ ಕೆಲವೇ ಕೆಲವು ಕ್ಷಣಗಳೊಳಗಾಗಿ ಹಿಂತಿರುಗಿ ಹೊರಟಳು.

ಇಲ್ಲಿಂದಲೇ ಕೇಳಿದಳು ಸಿಲ್ವಿಯಾ "ನಿನಗೇನು ಬೇಕು ಆಂಟಿ?"

ಆಕೆ ಹಿಂತಿರುಗಿ ನೋಡದೆ ಹೊರಟಳು.

ಬಲಬದಿಯಲ್ಲಿ ಗಿರಾಕಿಗಳೊಂದಿಗೆ ವ್ಯವಹರಿಸುತಿದ್ದ ವರ್ಜಿನಿಯಾ ಸಿಲ್ವಿಯಾಳ ಧ್ವನಿಯನ್ನು ಕೇಳಿ ನೋಟವನ್ನು ಅವಳ ಕಡೆ ಹೊರಳಿಸಿದಳು. ಹಿಂದಿರುಗುತಿದ್ದ ಹಸುರು ಫ್ರಾಕು ತೊಟ್ಟ ವೃದ್ಧೆಯ ಅಪರ ಪ್ರಾಂತ

ದಿಟ್ಟಿಗೆ ಬಿತ್ತು. ತಟ್ಟನೆ ನೋಟ ಸಿಲ್ವಿಯಾಳ ಕಡೆ ಹರಿಯಿತು. ಗಿರಾಕಿಗಳೊಡನೆ ವ್ಯವಹರಿಸುತಿದ್ದುದರಿಂದ ಮಾತಾಡದೆ ಹುಬ್ಬೇರಿಸಿ ಮುಗುಳು ನಕ್ಕಳು ಸಿಲ್ವಿಯಾ.

ರವಿ ಅಸ್ತಂಗತನಾಗಿ ಒಂದು ತಾಸು ಉರುಳಿರಬಹುದೇನೋ....ಅಷ್ಟರೊಳಗಾಗಿ ಅಂಗಡಿ ಕದ ಮುಚ್ಚಿಕೊಂಡಿತು. ದಿನವೂ ಬಹಳ ಹೊತ್ತಿನವರೆಗೆ ವ್ಯಾಪಾರ ನಡೆಯುತಿದ್ದುದರಿಂದ ಇನ್ನೂ ಗಿರಾಕಿಗಳ ಒತ್ತಡವೂ ಸಹ ಇತ್ತು. ಆದರೂ ಹೊತ್ತಿಗೆ ಮುಂಚೆ ಮುಚ್ಚಿ ಹೊರಟರು. ಸಿಲ್ವಿಯಾ ದೀಪ್ತ ಲಲಾಟದ ಮೇಲೆ ಹರಿದಾಡುತಿದ್ದ ಹೊಂಗೂದಲನ್ನು ಹಿಂದಕ್ಕೆ ತಳ್ಳಿ ತುದಿ ಬೆರಳಿನಿಂದ ನೇವರಿಸಿ ನಯಗೊಳಿಸುತ್ತಾ ಆಶ್ಚರ್ಯಪೂರ್ವಕವಾಗಿ ಕೇಳಿದಳು "ಜನೀ, ನಿನಗೆ ಆ ಮುದುಕಿಯನ್ನು ನೋಡಿದರೆ ಏನೆನಿಸುತ್ತೆ ?"

"ನನಗಾಕೆ ಸರಿಯಾಗಿ ಕಾಣಿಸಲಿಲ್ಲ. ನಾನು ನೋಡಿದ್ದು ಬೆನ್ನು ಕಡೆಯಿಂದ."

"ಅದೇಕೋ ಅವಳನ್ನು ನೋಡಿದೊಡನೆ ಲಿಯೋನಾ ಆಂಟಿಯ ನೆನಪು ಮೂಡುತ್ತದೆ. ಇವಳಿಗೆ ತುಂಬ ವಯಸ್ಸಾಗಿ ಬೆನ್ನು ಬಾಗಿದೆ. ಸರಿಯಾಗಿ ಗಮನಿಸಿದರೆ ಇಬ್ಬರಿಗೂ ಇರುವ ಹೆಚ್ಚಿನ ವ್ಯತ್ಯಾಸ ಅಷ್ಟೇ."

"ಹಾಗಾದರೆ...."

ಅವಳನ್ನು ಮುಂದುವರಿಯಗೊಡದೆ ಉತ್ಸುಕತೆಯಿಂದ ನುಡಿದಳು "ಆ ಹಸುರು ಫ್ರಾಕು....ಗಮನಿಸಿದೆಯೇನು ?"

"ನೀನೆಂದದ್ದು ಸರಿ, ಲಿಯೋನಾ ಆಂಟಿ ತೊಡುತಿದ್ದುದು ಅಂತಹದೇ ಫ್ರಾಕು."

"ಆಂಟಿ ಕೊನೆಯುಸಿರೆಳೆದುದು ಅದೇ ಫ್ರಾಕಿನಲ್ಲಿ ತಾನೇ ?" ಯೋಚಿಸುತ್ತಾ ಕೇಳಿದಳು ಸಿಲ್ವಿಯಾ. ಆಶ್ಚರ್ಯ ತೃಷಿತ ಲೋಚನಗಳು ಪ್ರದೀಪ್ತವಾದುವು. ಭಯಮುದ್ರಿತ ಮುಖದ ಛಾಯೆ ತುಸು ಕಪ್ಪಾದರೂ ಗಂಭೀರ ಭಂಗಿಯಿಂದ ಕೂಡಿತ್ತು.

"ಲಿಯೋನಾ ಆಂಟಿಯೆಲ್ಲಿ ? ಇವಳೆಲ್ಲಿ ?"

"ನಿಜ, ಈಕೆ ಬಹಳ ಮುದುಕಿ, ಲಯೋನಾ ಆಂಟಿ ಇನ್ನು ಹತ್ತಿಪ್ಪತ್ತು ವರ್ಷ ಇದ್ದಿದ್ದರೆ ಹೀಗೇ ಆಗುತಿದ್ದಳೇನೊ...."

"ಆದರೂ...."

"ಏಕೆ ಅನುಮಾನ? ಆ ಫ್ರಾಕು....ಆ ನಡಿಗೆ....ಆ ನೋಟ. ನನಗಂತೂ ಸಂದೇಹವೇ ಇಲ್ಲ. ಇನ್ನೊಮ್ಮೆ ಬಂದರೆ ಸರಿಯಾಗಿ ನೋಡು." ಯೋಚಿಸುತ್ತಾ ಆಶ್ಚರ್ಯ ತೃಷಿತ ಲೋಚನಗಳನ್ನರಳಿಸಿ ನುಡಿದಳು ಸಿಲ್ವಿಯಾ. "ಲಿಯೋನಾ ಆಂಟಿ ಪ್ರಾಣ ಬಿಟ್ಟುದುದೂ ಸಹ ಅದೇ ಹೊತ್ತಿನಲ್ಲಿ. ನಿನ್ನೆ ಕಾಣಿಸಿಕೊಂಡದ್ದೂ ಸಹ ಇದೇ ಹೊತ್ತಿನಲ್ಲಿ. ಇಂದೂ ಕೂಡಾ.... ಒಂದಕ್ಕೊಂದು ತಾಳೆ ಹಾಕಿ ನೋಡಿದರೆ ಅನುಮಾನವೇ ತೋರುವುದಿಲ್ಲ. ನನಗೆ."

"ನನಗೆ ಇನ್ನೂ ಏನಾದರೂ ಹೇಳಿ ಭಯ ಹುಟ್ಟಿಸಬೇಡ." ಎನ್ನುತ್ತಾ ಗೆಳತಿಯನ್ನು ಭಯ ಭೀತಿಯಿಂದ ಬಿಗಿದಪ್ಪಿದಳು ವರ್ಜಿನಿಯಾ.

* * * *

ಮರುದಿನ ಲ್ಯೂಸಿ ಅಂಗಡಿಗೆ ಪದಾರ್ಪಣೆ ಮಾಡಿದಾಗ ಹುಡುಗಿಯರಿಬ್ಬರೂ ಕದ ತೆಗೆದು ಕಾರ್ಯನಿರತರಾಗಿದ್ದರು. ಹಿಂದಿನ ದಿನಗಳ ಅನುಭವವನ್ನು ಮುಂದಿಡಲು ಮನಸ್ಸು ಹಾತೊರೆಯುತಿದ್ದರೂ, ಲ್ಯೂಸಿಯ ಮ್ಲಾನವದನವನ್ನು ನೋಡುತ್ತಲು ಬಾಯ್ದೆರೆಯದಾದರು. ಲ್ಯೂಸಿ ಒಳ ಬಂದವಳೇ ಒಂದು ಘಳಿಗೆ ಮುಂದುವರಿಯದೆ ನಿಂತಳು. ತಾಯಿಯ ಉಜ್ವಲ ಪ್ರತಿಭೆಯನ್ನು ಪ್ರತಿಬಿಂಬಿಸುವ ವಸ್ತು ವಸ್ತುಗಳು ಕೇಳಿದುವು "ಲಿಯೋನಾ ಆಂಟಿಯೆಲ್ಲಿ?.... ಲಿಯೋನಾ ಆಂಟಿಯೆಲ್ಲಿ?"

ಅವುಗಳ ಮುಂದೆ ತನ್ನ ಸಂಕಟವನ್ನು ತೋಡಿಕೊಳ್ಳಲೇ ಎಂಬಷ್ಟು ಮಾರುಹೋಯಿತು ಮುಗ್ಧದುಗ್ಧ ಮನಸ್ಸು. ಆ ದಾರಣ ಘಟ ಯಾವ ಮುಹೂರ್ತದಲ್ಲಿ ಆರಂಭವಾಯಿತೋ ಮತ್ತು ಹೇಗೆ ಅದೇ ಮುಹೂರ್ತದಲ್ಲಿ ಪುರಾತನವಾಯಿತೋ ಎಂಬುದೂ ಸಹ ಅರ್ಥವಾಗುತ್ತಿಲ್ಲ. ದುಃಖದ ಮಹಾಪೂರದಲ್ಲಿ ಮುಳುಗಿ ತೇಲುತ್ತ–ತೀವ್ರ ಮಾನಸ ಸಂತಾಪದಿಂದ ಕಣ್ಣುಗಳಿಗೆ ಕಗ್ಗತ್ತಲೆ ಕವಿದಂತೆ ಒಂದೆರಡು ಕ್ಷಣ ತತ್ತರಿಸಿ ಒಳಗಡೆ ಹೋದಳು. ಓವರ್ ಕೋಟನ್ನು ಯಾಂತ್ರಿಕವಾಗಿ ಗೂಟಕ್ಕೆ ತಗಲು ಹಾಕಿ ಒಂದೆರಡು ಘಳಿಗೆ ಶಿಲಾ ಪ್ರತಿಮೆಯಂತೆ ಕುಳಿತುಕೊಂಡಳು. ನರನರವನ್ನೂ ಹಿಂಡುವಂತೆ ಚಿತ್ತಕ್ಷೋಭೆ ವಿಕ್ಷುಬ್ಧವಾಗಿತ್ತು. ಪೌರವೀಥಿಗಳಲ್ಲಿ ಹರಿದಾಡುವ

ನಾಹನಗಳು ಎದೆಯಮೇಲೆ ಹರಿದಾಡುತ್ತಿರುವಂತೆ ಭಾಸವಾಯಿತು. ದುಃಖ ಸಂಕಟ ಯೋಚನೆಗಳ ಸಮುದಾಯದಲ್ಲಿ ಕಣ್ಣುಗಳ ಕಟ್ಟೆಯೊಡೆದಂತೆ ಕಂಬನಿಗಳುಕ್ಕಿದುವು. ಕರವಸ್ತ್ರದಿಂದ ತೀಡಿಕೊಂಡು ಹಾಗೇ ಕುಳಿತುಕೊಂಡಳು.

ಹಾಗೆ ಅದೆಷ್ಟು ಹೊತ್ತು ಉರುಳಿತೋ....

ಡೇವಿಡ್ ಬಂದಾಗ ಅಂಗಡಿಯಲ್ಲಿ ಚಟುವಟಿಕೆ ಆರಂಭವಾಗಿತ್ತು. ಆದರೆ, ಅಲ್ಲಿ ಉಳಿಯಲಾಗಲೀ ಮುಂದಿನ ವ್ಯವಸ್ಥೆಯ ಬಗ್ಗೆ ತಿಳಿಯ ಹೇಳಲಾಗಲೀ ಮಾನಸ ಸಂತಾಪದಿಂದ ಸಾಧ್ಯವಾಗದೇ ಹೋದುದರಿಂದ ಚರ್ಚಿನ ಕಡೆ ಹೊರಟ.

"ಆಗಲೇ ಹೊರಟು ಬಿಟ್ಟರಾ ಅಂಕಲ್ ?"

"ಅನಂತರ ಬರುವೆ."

"ನೀವೇ ಹೀಗಾದರೆ ನಾವಾದರೂ ಹೇಗೆ ಉಸಿರು ಹಿಡಿಯಬೇಕು ?"

ನುಡಿ ಎದೆಯಾಳಕ್ಕಿಳಿಯಿತು. ಏನಾದರೂ ಹೇಳೋಣವೆಂದರೆ ತುಟಿಗಳು ಬಿರಿಯದಾದುವು-ಶೋಕ ವ್ಯಾಕುಲತೆಯಿಂದ ಕಂಠವು ಗದ್ಗದವಾಯಿತು; ಆಕಾಶವೇ ಕಳಚಿ ಬಿದ್ದಂತೆ ಶಿರೋದೇಶವು ಭಾರಾಕ್ರಾಂತವಾಗಿತ್ತು. ಒಂದು ಘಳಿಗೆ ಹಾಗೇ ನಿಂತಿದ್ದು ಮೆಟ್ಟಲಿಳಿದ.

"ಮನೆಯಲ್ಲಿ ಏನು ಮಾಡುತ್ತೀರಿ ಅಂಕಲ್? ಇಲ್ಲೇ ಇದ್ದರೆ ಹೊತ್ತು ಕಳೆಯಬಹುದು...." ಹೇಳಲಾರದೆ ಹೇಳಿದಳು ಸಿಲ್ವಿಯಾ.

"ಮತ್ತೆ ಬರುವೆ."

ಡೇವಿಡ್ಡನ ಚಿತ್ತ ಸ್ವರ್ಗೀಯ ಮಡದಿ ಲಿಯೋನಾಳಲ್ಲಿ ಮುಳುಗಿ ಹೋಗಿತ್ತು ; ಆಕೆಯಿಲ್ಲದ ಜಗತ್ತನ್ನು ಊಹಿಸಿಕೊಳ್ಳುವುದೂ ಸಹ ಕಷ್ಟ. ಅಂತಿರುವಾಗ ತಾನು ಅನುಭವಿಸುತ್ತಿರುವ ವಿಯೋಗವು ಲೋಕೋತ್ತರವಾದುದು. ಅವಳನ್ನು ಸೆಳೆದೊಯ್ದು ಭಗವಂತ ತನ್ನನ್ನೇಕೆ ಬಿಟ್ಟುಹೋದ ಎಂಬ ಯೋಚನೆಯಲ್ಲೇ ಸಾಗಿತು ಹಾದಿ.

* * * *

ಹಗಲು ಉರುಳಿತು.

ಬೆಳಿಗ್ಗೆಯೆಲ್ಲಾ ಒಳಕೋಣೆಯಲ್ಲಿ ಕುಳಿತು ಕಾಗದ ಪತ್ರಗಳ ವ್ಯವಹಾರದಲ್ಲಿ ಹಾಗೂ ಹೀಗೂ ತೊಡಗಿದ್ದ ಲ್ಯೂಸಿ ಈಗ ಅಂಗಡಿಗೆ ಬಂದು ವ್ಯಾಪಾರದ

ವ್ಯವಹಾರದಲ್ಲಿ ತೊಡಗಿದಳು. ಗಿರಾಕಿಗಳ ಒತ್ತಡ ಕ್ಷಣೇ ಕ್ಷಣೇ ಹೆಚ್ಚುತಿತ್ತು. ಹುಡುಗಿಯರು ಕಾರ್ಯತತ್ಪರರಾದರು. ಕೆಲಸದ ಒತ್ತಡ ಎಷ್ಟೇ ಇದ್ದರೂ ಆಸಕ್ತ ಚಿತ್ತ ಏಳು ಗಂಟೆಯಾಗುವುದನ್ನೇ ಗಮನಿಸುತಿತ್ತು. ಸಿಲ್ವಿಯಾ ವೈ ಯೆಲ್ಲಾ ಮನಸ್ಸಾದಳು. ಗಡಿಯಾರದ ಮುಳ್ಳು ಏಳರ ಅಂಚನ್ನು ನಿರಾತಂಕ ವಾಗಿ ದಾಟಿ ಮುನ್ನಡೆಯಿತು. ಹತ್ತು–ಹನ್ನೆರಡು ಕ್ಷಣಗಳು ಉರುಳಿದ್ದು ವೇನೋ....ಆ ಮುಹೂರ್ತದಲ್ಲಿ ಹಠಾತ್ತನೆ ಗಿರಾಕಿಗಳ ಗುಂಪಿನಲ್ಲಿ ಅಜ್ಜಿ....!

ಎಂತಹ ಆಶ್ಚರ್ಯ ?

ಅದೇ ಫ್ರಾಕು, ಅದೇ ಕಾಲರು, ಅದೇ ಬೆಲ್ಟು, ಅದೇ ಬೋ ಅದೇ ನಡಿಗೆ.

ಕುತೂಹಲ ಮಿಶ್ರಿತ ನೋಟವನ್ನು ಬೀರುವಿನೆಡೆಗೆ ಹರಿಸಿ ಮುಂದು ವರಿದಳು ವೃದ್ಧೆ. ವರ್ಜಿನಿಯಳ ನೋಟವೂ ಅವಳೆಡೆಗೆ ಹರಿಯಿತು. ಲ್ಯೂಸಿಯ ನೋಟ ಅತ್ತ ಹರಿಯುವುದರೊಳಗಾಗಿ ಮುದುಕಿ ಮುಂದುವರಿ ದಳು. ಜನಗಳ ಒತ್ತಡದಲ್ಲಿ ಅಲ್ಲಿ ನಿಲ್ಲಲೂ ತಾವಿರಲಿಲ್ಲ. ಮುದುಕಿ ಲ್ಯೂಸಿ ಇದ್ದೆಡೆಗೆ ಬಂದು ಬೀರುವಿನ ಮೂಲೆಯಲ್ಲಿ ಜೋಡಿಸಿಟ್ಟ ಆರು ಹೂದಾನಿ ಗಳು ಆರು ಆನೆಗಳ ಕಡೆ ಕೈ ತೋರಿ–"ಇವನ್ನು ಕೊಂಡು ಕೊಂಡವರು ಮರೆತು ಬಿಟ್ಟು ಹೋಗಿದ್ದಾರೆ. ಅವರೆಂದಾದರೂ ಬರಬಹುದು. ಯಾರಿಗೂ ಕೊಡದೆ ಹಾಗೇ ಎತ್ತಿಡು, ಮಗೂ !"

ಅರರೆ ! ಅದು ನನಗೇನೇ ಗೊತ್ತಿಲ್ಲದ ವಿಷಯ ; ಇವಳಿಗೆ ಹೇಗೆ ಗೊತ್ತು ? ಆಶ್ಚರ್ಯಚಕಿತಳಾದಳು ಲ್ಯೂಸಿ

ನೋಟ ಅತ್ತ ಹೊರಳಿತು. ಅವುಗಳನ್ನು ಪ್ರತ್ಯೇಕವಾಗಿ ಇಟ್ಟುದುದು ಗೋಚರಿಸಿತು. ಅವು ಅತ್ಯಂತ ಬೆಲೆಯುಳ್ಳ ವಸ್ತುಗಳಾಗಿದ್ದುವು. ಅವ ಳಿಂದ ವಿಷಯವನ್ನು ಖಚಿತಗೊಳಿಸಿಕೊಳ್ಳಬೇಕೆನ್ನುವಷ್ಟರಲ್ಲಿ ಗಿರಾಕಿಯೊಬ್ಬ ಎದುರಾದ. ಅವನೊಡನೆ ಒಂದೆರಡು ಮಾತಾಡಿ ಅತ್ತ ಕಣ್ಣು ಹೊರಳಿ ಸುವುದರೊಳಗಾಗಿ ಮುದುಕಿ ಹೋಗಿದ್ದಳು. ಗಿರಾಕಿಗಳ ಒತ್ತಡ ಕಡಿಮೆ ಯಾಗುವವರೆಗೆ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುವಷ್ಟು ಬಿಡುವು ಸಹ ದೊರೆಯಲಿಲ್ಲ. ಲ್ಯೂಸಿ ಅಷ್ಟಾಗಿ ಗಮನಿಸದಿದ್ದರೂ ವರ್ಜಿನಿಯಾ ಸಿಲ್ವಿಯಾರವರ ಕಣ್ಣುಗಳಲ್ಲಿ ಅಚ್ಚರಿಯ ನೆರೆಯುಕ್ಕುತಿತ್ತು. ಸಹನಾತೀತ

ವಾದ ಭಯಾಶ್ಚರ್ಯಗಳ ರುದ್ರ ಒತ್ತಡದಲ್ಲಿ ಹೃದಯ ಬಿರಿಯು ವಂತಾಯಿತು.

* * * *

"ಹಸುರು ಫ್ರಾಕಿನ ಅಜ್ಜಿಯನ್ನು ನೋಡಿ ನಿನಗೇನೆನಿಸಿತು ಲ್ಯೂಸಿ?"

"ನನಗೆ....?"

"ಹೌದು ...ನಿನಗೇನೆ."

"ಅದರಲ್ಲಿ ವಿಶೇಷವೇನು ?"

"ಇನ್ನೊಮ್ಮೆ ಯೋಚಿಸಿ ನೋಡು, ಅವಳಲ್ಲಿ ಏನಾದರೂ ವಿಶೇಷ ಕಾಣಿಸುತಿತ್ತೇ?"

"ಅಮ್ಮ ತೊಡುತಿದ್ದುದು ಅದೇ ಬಗೆಯ ಫ್ರಾಕು ಅನಿಸುತ್ತದೆ."

"ಅದನ್ನು ಯಾರಿಗಾದರೂ ಕೊಟ್ಟಿಯಾ ?"

"ಇಲ್ಲ."

"ಅವಳಲ್ಲಿ ನೀನು ಇನ್ನೇನೂ ಗಮನಿಸಲಿಲ್ಲವೇ ?"

"ಇನ್ನೇನು ಇಲ್ಲವಲ್ಲಾ."

"ನಾನು ಮೂರಾವರ್ತಿ ನೋಡಿದ್ದೇನೆ. ಅವಳು ಬಹಳ ಮಟ್ಟಿಗೆ ನಿನಗಾಗಿಯೇ ಹುಡುಕಿಕೊಂಡು ಬಂದಂತಿತ್ತು. ನಿನ್ನೆ–ಮೊನ್ನೆಯೂ ಬಂದಿದ್ದಳು. ನಮ್ಮೊಂದಿಗೆ ಏನೂ ಹೇಳಲಿಲ್ಲ. ನಾವು ಮೊದಲೇ ನಿನಗೆ ಸೂಚನೆ ಕೊಟ್ಟಿದ್ದರೆ ಚೆನ್ನಾಗಿತ್ತು. ಇಂದೂ ಸಹ ಅಷ್ಟು ಬೇಗನೆ ಕಣ್ಮರೆಯಾಗುತ್ತಾಳೆಂದು ನಾನು ಭಾವಿಸಿರಲಿಲ್ಲ."

ಒಂದು ಘಳಿಗೆ ಯೋಚಿಸಿದಳು ಲ್ಯೂಸಿ. ವಿಷಯ ಒಗಟಾಗಿ ತೋರಿತು. ಅವಳನ್ನೇ ನಿಟ್ಟಿಸುತ್ತಾ ಅಚ್ಚರಿ ತುಂಬಿದ ಧ್ವನಿಯಲ್ಲಿ– ನೀನಂದದ್ದು ನನಗೆ ಅರ್ಥವೇ ಆಗಲಿಲ್ಲ ಸಿಲ್ವೀ."

"ನಮಗೂ ಇದು ಆಶ್ಚರ್ಯ...."ಒಣಗಿದ ತುಟಿಯನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ ಮುಂದುವರಿದಳು ಸಿಲ್ವಿಯಾ "ನೀನು ಸರಿಯಾಗಿ ಗಮನಿಸಿದ್ದರೆ ಅರ್ಥವಾಗುತಿತ್ತು. ಅವಳಿರುವುದೆಲ್ಲಾ ಲಿಯೋನಾ ಆಂಟಿ ಇದ್ದ ಹಾಗೆಯೆ."

ಲ್ಯೂಸಿ ಮೂಕ ವಿಸ್ಮಿತಳಾಗಿ ಒಂದು ಘಳಿಗೆ ಯೋಚಿಸುತ್ತಾ ಹಾಗೇ ನಿಂತು ಬಿಟ್ಟಳು. ಅವಳ ಮುಖ ನಿರಿಗಟ್ಟಿ, ಬೆನ್ನು ಬಾಗದಿದ್ದಲ್ಲಿ ಹಾಗೆನ್ನ

ಬಹುದಾಗಿತ್ತೇನೋ....ಎಂಬ ಭಾವನೆ ಮನಸ್ಸಾಗರದಲ್ಲಿ ಸುಳಿ ಸುತ್ತುತಿತ್ತು.

"ಲ್ಯೂಸಿ, ಇದು ಖಂಡಿತಾ ಉತ್ಪ್ರೇಕ್ಷೆಯಲ್ಲ."

ಲ್ಯೂಸಿ ಹೂದಾನಿಗಳ ಕಡೆ ಗಮನವನ್ನು ಹರಿಸಿದಳು. ಅವುಗಳನ್ನು ಒಂದಡೆ ಪ್ರತ್ಯೇಕವಾಗಿ ಯಾರಿಟ್ಟರೆಂಬುದು ತಿಳಿಯದು. ವಿಷಯ ಹೌದೋ ಅಲ್ಲವೋ ಅದೂ ಸಹ ಊಹಿಸುವಂತಿಲ್ಲ.

"ನೀವ್ಯಾರಾದರೂ ಎತ್ತಿಟ್ಟಿರಾ ?" ಕೇಳಿದಳು ಲ್ಯೂಸಿ.

ಗಂಭೀರ ಮುಖಮುದ್ರೆಯಲ್ಲಿ ಅಂತರಂಗದ ಭಾವತರಂಗಿಣಿಗಳು ಅಲೆಯಲೆಯಾಗಿ ಸುಳಿಸುಳಿದುಳಿದುವು. ಎಷ್ಟೇ ಯೋಚಿಸಿದರೂ ವಿಷಯ ಒಗಟಾಗಿ ತೋರಿತು. ಅವರಿಬ್ಬರೂ ತಾನಿಡಲಿಲ್ಲವೆಂಬುದಕ್ಕೆ ತಲೆಯಾಡಿ ಸುತ್ತಾ ಸಾಕ್ಷೀ ಭೂತವಾಗಿ ನಿಂತರು.

"ಯೋಚಿಸಿ ನೋಡು ಲ್ಯೂಸಿ, ಇದರಲ್ಲಿ ಏನೋ ಇದೆ."

ಸ್ವಲ್ಪ ಹೊತ್ತು ರುದ್ರ ಗಂಭೀರ ನಿಶ್ಯಬ್ದ ರಾಜ್ಯಭಾರ ನಡೆಸಿತು.

"ಒಂದುವೇಳೆ ಇವಳು ಕೊಂಡುಕೊಂಡವರ ಕಡೆಯವಳಿರಬಹುದೇ?"

"ಹಾಗಿದ್ದಲ್ಲಿ ಎಲ್ಲ ವಿಚಾರವನ್ನೂ ಸ್ಪಷ್ಟವಾಗಿ ಹೇಳಬಹುದಿತ್ತಲ್ಲ..?"

"ನಿಜ...."

"ಆದರೂ....ಸಹ...." ಮುಂದೆ ಮಾತು ಹೊರಡದೆ ಸುಮ್ಮನಾದಳು ಲ್ಯೂಸಿ.

"ಇದೇ ಅಜ್ಜಿ ಹತ್ತಿಪ್ಪತ್ತು ವರ್ಷ ಚಿಕ್ಕವಳಾಗಿದ್ದಿದ್ದರೆ ಹೇಗಿದ್ದಿರ ಬಹುದು ಎಂಬುದನ್ನು ಊಹಿಸಿ ನೋಡು. ಅವಳು ಮುದುಕಿಯಾಗಿರು ವುದರಿಂದ ನೀನು ಗೊತ್ತು ಹಚ್ಚಲಾರೆ."

"ಹೌದು ! ಅವಳೆನ್ನುವುದರಲ್ಲಿ ಅರ್ಥವಿದೆ." ಎಂದು ಯಾರೋ ಕಿವಿಯ ಸನಿಹದಲ್ಲಿಯೇ ಕೂಗಿ ಹೇಳುತ್ತಿರುವಂತಿದೆ.

ಪರಿಸ್ಥಿತಿ ನುಂಗಲಾರದ ತುತ್ತಿನಂತಾಗಿ ಗಂಭೀರವಾಯಿತು.

* * * *

ಬಾಳಿನ ಬಾನಿನ ಶ್ರೀಹೀನ ದಿನಗಳೂ ಸಹ ಎಂದಿನಂತೆಯೇ ಸುಲಲಿತವಾಗಿ ಓಡುತ್ತಿವೆ – ಕಂಬನಿಯ ಕೋಡಿಯುಸ್ಸಾಗಲೀ ಎದೆಯ

ಬಿಸುಸುಯ್ಲನ್ನಾಗಲೀ ಲೆಕ್ಕಿಸದೆ.

ಇಂದು ತಂದೆ ಮಗಳು ಒಟ್ಟಿಗೆ ಅಂಗಡಿಗೆ ಬಂದರು. ಅದೇತಾನೇ ಕದ ತೆರೆದು ಕಾರ್ಯನಿರತರಾಗಿದ್ದ ಹುಡುಗಿಯರ ಗಂಭೀರ ಮುಖ ಸ್ವಾಗತ ನೀಡಿತು. ಸಮಸ್ತ ಕಲಾಕೃತಿಗಳ ದಿವ್ಯಪ್ರಭೆ ಚೆಲ್ಲಿ ಸೂಸುತಿದ್ದರೂ ಅನಿರ್ವಚನೀಯವಾದ ಶ್ರೀದುರಂತತೆ ದರಿದ್ರಲಕ್ಷ್ಮಿಯಂತೆ ಮೂಳೆಮೂಳೆ ಯಾಗಿ ತಲೆಕೆದರಿ ವೈದೋರಿದಳು.

ಹಿಂದೆ ಯಾರಾದರೂ ಈ ಜೀವನ ಕ್ಷಣಭಂಗುರವೆಂದು ಸಾರಿ ಹೇಳಿ ದ್ದರೂ ನಂಬುತ್ತಿರಲಿಲ್ಲವೇನೋ. ಇಂದು ಡೇವಿಡ್ ತಲೆಬಾಗಿ ಮೆಟ್ಟಲು ಹತ್ತಿದ. ಲ್ಯೂಸಿ ತಂದೆಯ ತೋಳಾಶ್ರಯ ಪಡೆದು ಮುಂದಡಿಯಿಟ್ಟಳು.

ಒಳಕೋಣೆಗೆ ಬರುತ್ತಲೂ ಲ್ಯೂಸಿ ಕೇಳಿದಳು “ಈ ಹೂದಾನಿಗಳು ಮತ್ತು ಆನೆಗಳ ಕತೆಯೇನು ? ಇವುಗಳನ್ನೇನು ಮಾಡೋಣ ?”

“ನನಗೂ ಈ ವಿಷಯ ಒಗಟಾಗಿ ತೋರುತ್ತಿದೆ, ಲೆಖ್ಖ ಪತ್ರಗಳನ್ನು ಪರಿಶೀಲನೆ ಮಾಡಿ ನೋಡುವುದು ಒಳ್ಳೆಯದು.”

“ಅವುಗಳ ಮೇಲೆ ಗಿರಾಕಿಗಳಿಗೆ ಕಣ್ಣಿದೆ.”

“ಒಳ್ಳೆಯ ಮಾಲು ಖರ್ಚಾಗುವುದು ದೊಡ್ಡದಲ್ಲ. ಕೆಲವು ದಿನ ಕಾದು ನೋಡೋಣ.”

ಡೇವಿಡ್ ಆಳವಾದ ಯೋಚನೆಯಲ್ಲಿ ಮುಳುಗಿದ. ಮೂರು ಬಾರಿ ಬಂದು ಹೋದ ಮುದುಕಿಯ ವಿಚಾರ ತಲೆಯಲ್ಲಿ ತುಂಬಿ ಹೋಗಿತ್ತು. ಅಳಿದ ನೆಚ್ಚಿನ ಮಡದಿಯ ಸುತ್ತಮುತ್ತ ಹರಿದಾಡುತಿತ್ತು – ಶೋಕ ವ್ಯಾಕುಲಿತ ಚಿತ್ತ. ಕಣ್ಣುಗಳಂಚಿನಲ್ಲಿ ಬೆಳ್ಳಿಯ ಗೆರೆಯಂತೆ ಸಣ್ಣಗೆ ನೀರಾಡಿತು. ಕರವಸ್ತ್ರದಿಂದ ಮುಖವನ್ನು ತೀಡಿಕೊಳ್ಳುತ್ತಾ ನುಡಿದ “ರಶೀದಿ ಪುಸ್ತಕ ತೆಗೆದು ನೋಡು ಮಗೂ!”

ಡೇವಿಡ್ ನೋಟವನ್ನು ಹೊರ ಜಗತ್ತಿನಲ್ಲಿ ನೆಟ್ಟು ಬಾಗಿಲಿಗೊರಗಿ ಭಾವಾವಿಷ್ಟನಾಗಿ ನಿಂತ. ಮನಸ್ಸು ಗತಕಾಲವನ್ನು ಹೊಕ್ಕು ದಿನಚರಿಯ ಕರಾವಳಿಯಲ್ಲಿ ಸಂಚರಿಸುತಿತ್ತು. ಒಮ್ಮೆ ಲಿಯೋನಾ ಲೆಖ್ಖ ಪತ್ರವನ್ನು ಪರಿಶೀಲಿಸುತಿದ್ದಾಗ ಪ್ರಾಸಂಗಿಕವಾಗಿ ನುಡಿದಿದ್ದಳು “ನೀತಿ ನಿಯತ್ತು ಗಳಿಲ್ಲದಿದ್ದರೆ ನಮ್ಮ ಉದ್ದಿಮೆ ಇಷ್ಟು ಬೇಗನೆ ಊರ್ಜಿತಗೊಳ್ಳುತ್ತಿರಲಿಲ್ಲ.

ಒಂದು ವೇಳೆ ನಾನು ಸತ್ತರೂ ನನ್ನ ನೀತಿ ನಿಯಮಗಳಿಗೆ ಚ್ಯುತಿ ಬರ ಬಾರದು ಡೇವಿಡ್ !"

ಆತನ ಆತ್ಮವೊಂದೇ ಅಲ್ಲ; ಅಲ್ಲಿನ ವಸ್ತು ವಸ್ತುಗಳೂ ಅದಕ್ಕೆ ಸಾಕ್ಷಿ.

ಯಾವುದೋ ಕಾಣದ ಕೈ ಹೃದಯವನ್ನು ಮೆಲ್ಲಮೆಲ್ಲನೆ ಹಿಂಡುತಿತ್ತು. ಅದೇನುಡಿ ಕಿವಿಯಲ್ಲಿ ಮತ್ತೆಮತ್ತೆ ಮಾರ್ನುಡಿದು ನರನರಗಳಲ್ಲೂ ಮರು ಪ್ರಸಾರ ಹೊಂದಿತು. ಮರುಗಳಿಗೆಯಲ್ಲಿ ಸುಯ್ಯನೆ ಸುಯ್ದು ಬರುವ ತಂಗಾಳಿಯಲ್ಲೂ....ಬಗೆಬಗೆಯ ಪಕ್ಷಿಗಳಿಂಚರದಲ್ಲೂ ಅದೇ ನುಡಿ ಭಾವ ಪೂರ್ಣವಾಗಿ ಹೊರಹೊಮ್ಮುವಂತಿದೆ. ಪ್ರಭಾವೋತ್ಪಾದಕವಾದ ಆ ಮಧುರ ಸ್ವನ ಯಾವ ಲೋಕದ ಸಂದೇಶವೊ.....

ಲಿಯೋನಾ ಅದೆಂತಹ ಹೆಣ್ಣು ? ಸಲವತ್ತರ ಹೊಸ್ತಿಲನ್ನು ದಾಟುವ ಮುನ್ನ ಬಾಳಿನ ಬಾನ್‌ಬಯಲ ಹೊಸ್ತಿಲನ್ನೇ ದಾಟಿದ ಪುಣ್ಯವತಿ. ದುರ್ವಿಧಿ ಪ್ರೇಮದ ನದಿಯಲ್ಲಿ ದುಃಖದ ಮಹಾಪೂರವನ್ನು ತುಂಬಿ ಹರಿಸ ದಿದ್ದರೆ ಬಾಳು ಇನ್ನೆಂತಿರುತಿತ್ತೋ ?

ಡೇವಿಡ್ ಒಳಹೋಗಿ ಕುಳಿತುಕೊಂಡ. ಶ್ರಾಂತ–ಕ್ಲಾಂತ ತನುಮನ ಗಳು ವಿಶ್ರಾಂತಿಯನ್ನು ಬಯಸಿದ್ದುವು. ಸ್ವರ್ಗೀಯ ಮಡದಿಯ ಚಿಂತೆ ಯನ್ನುಳಿದು ಇನ್ನಾವ ವ್ಯವಹಾರವನ್ನೂ ಒಲ್ಲೆನೆನ್ನುತಿತ್ತು ಚಿತ್ತ. ಲ್ಯಾಸಿ ಮೇಜಿನ ಬಳಿ ಕುಳಿತು ಪತ್ರವ್ಯವಹಾರಗಳ ಕಡೆ ಗಮನವನ್ನು ಪ್ರಯತ್ನ ಪೂರ್ವಕವಾಗಿ ಹರಿಸಿದಳು. ಕಳೆದ ಎರಡುವಾರಗಳ ಕಾಗದ ಪತ್ರಗಳು ಟ್ರೇಯಲ್ಲಿ ತುಂಬಿ ಹೋಗಿದ್ದುವು. ಎಲ್ಲವೂ ಸ್ವಾಮಿನಿ ಲಿಯೋನಾಳ ಹೆಸರಿಗೆ.

ಡೇವಿಡ್ ಭಾರವಾದ ನಿಟ್ಟುಸಿರೆಳೆದ.

* * * *

"ಗಾಂಧಿ ಮೆಚ್ಚಿದ ಕೋತಿ !"

ವರ್ಜಿನಿಯಾ ಮೂರು ಕೋತಿಗಳ ವಿಗ್ರಹವನ್ನು ಮುಂದಿಟ್ಟಳು. ಅದು ಕೈಯಿಂದ ಕೈಗೆ ಚಲಿಸಿ ಬಹುಜನ ಮಾನ್ಯತೆಯನ್ನು ಪಡೆಯಿತು.

"ಗಾಂಧಿ ಕೋತಿ ! ಗಾಂಧಿ ಕೋತಿ !!"

ಮಗುವೊಂದು ಕೋತಿಗಳನ್ನು ಹಿಡಿದುಕೊಂಡು ಕುಣಿ ಕುಣಿದಾಡಿತು.

ಜಪಾನೀ ಕೋತಿಗಳಷ್ಟೇ ಭಾರತದ ಆನೆಗಳು ಮಾನ್ಯತೆಯನ್ನು ಪಡೆದುವು.

ಹೊರಗಡೆ ವ್ಯಾಪಾರ ನಡೆಯುತಿತ್ತು.

ಒಳಗಡೆ ತಂದೆ ಮಗಳು ಕುಳಿತಿದ್ದರು. ಟ್ರೇಯಲ್ಲಿ ತುಂಬಿದ್ದ ಕಾಗದ ಪತ್ರಗಳಕಡೆ ಗಮನ ಹರಿದಿತ್ತು. ಹಾಗೆ ಅದೆಷ್ಟು ತಾಸು ಉರುಳಿತೋ....

ಸಂಜೆಯ ತನಿಯಿಂಪಿನಲ್ಲಿ ಲ್ಯೂಸಿ ಕಾಗದವೊಂದನ್ನು ತಂದೆಯ ಕೈಯ್ಯಲ್ಲಿಟ್ಟು "ಈ ಕಾಗದ ನೋಡಿದಿರಾ ಅಪ್ಪಾ?" ಎಂದಳು, ವಿಸ್ಮಯ ಚಕಿತಳಾಗಿ.

"ಇಲ್ಲ ಮಗೂ!" ಎನ್ನುತ್ತ ಡೇವಿಡ್ ಕೈ ನೀಡಿದ.

ನೋಡಿದರೆ ಹೂದಾನಿಗಳ ಒಡೆಯರಿಂದ ಬಂದ ಪತ್ರ. ಅವರು ಕೊಂಡುಕೊಂಡ ವಸ್ತುಗಳ ವಿವರವನ್ನೂ, ಮರೆತು ಬಂದ ಬಗೆಯನ್ನೂ ವಿವರಿಸಿ, ತಾವು ಬಂದು ತೆಗೆದುಕೊಳ್ಳುವ ತಾರೀಖನ್ನು ನಮೂದಿಸಿದ್ದರು. ಎಂದೋ ಬರೆದ ಪತ್ರ ದೇಶದಾದ್ಯಂತ ಸಂಚರಿಸಿ, ನಾನಾ ಅಂಚೆ ಕಛೇರಿಗಳ ಮುದ್ರೆಗಳನ್ನು ಹೊತ್ತು ಸುರಕ್ಷಿತವಾಗಿ ಅಂಗಡಿಗೈತಂದಿತ್ತು.

ಡೇವಿಡ್ ಬೆಕ್ಕಸ ಬೆರಗಾಗಿ ನಿಂತ.

ಸಿಲ್ವಿಯಾ ಒಂದೇ ಉಸುರಿಗೆ ನುಡಿದಳು "ಅಂಕಲ್! ನಿನ್ನೆ, ಮೊನ್ನೆ, ಆಚೆಮೊನ್ನೆ ಕಾಣಿಸಿಕೊಂಡಿದ್ದು ಇನ್ನಾರೂ ಅಲ್ಲ; ಲಿಯೋನಾ ಆಂಟಿ!"

ವರ್ಜಿನಿಯಾ ಮೂಕ ವಿಸ್ಮಿತಳಾಗಿ ಹೌದೆಂಬಂತೆ ಕಲೆದೂಗಿ– "ಅಯ್ಯೊ, ಎಷ್ಟು ಸೊರಗಿದ್ದಾಳೆ!"

ಡೇವಿಡ್ನನ ಬಾಯಿಯಲ್ಲಿ ಮಾತುಗಳು ಹೊರಡದಾದುವು. ಅವಳು ಬಂದ ಸಮಯದಲ್ಲಿ ನಾನು ಇಲ್ಲೇ ಇದ್ದಿದ್ದರೆ ಕಣ್ತುಂಬ ನೋಡಬಹುದಾಗಿತ್ತು ಎಂದುಕೊಂಡ. ದುಃಖ ದಗ್ಧ ಹೃದಯವನ್ನು ಸಂತಾಪಭರಿತ ಮನಸ್ಸನ್ನು ಕರುಣಾಯಿತ ಚಿತ್ತಾರ ವಿನೂತನ ಶಕ್ತಿಯಿಂದ ತುಂಬಿತು.

ಸ್ವರ್ಣ ಪುತ್ಥಳಿಯಂತೆ ನಿಂತ ಲ್ಯೂಸಿಯ ಕಣ್ಣುಗಳಲ್ಲಿ ಕಂಬನಿಗಳುಕ್ಕಿದುವು.

— o —

# ಕಾಲಿನ್ ವಿಲ

ಕರ್‍ರನೆ ಕಾಳೋರಗದಂತೆ ಹರಿದ ಹೆದ್ದಾರಿಯಲ್ಲಿ ಬಸ್ಸು ನಿಂತಿತು. ಆಗ ಇನ್ನೂ ಬೆಳಗಿನ ಒಂಭತ್ತರ ಸಮಯ.

ವಿಲಿಯಂ-ನೊಡನೆ ಜಾನಿ ಬಸ್ಸಿನಿಂದ ಇಳಿದ. ಇಬ್ಬರ ಕೈಯಲ್ಲೂ ತಂತಮ್ಮ ಬ್ಯಾಗುಗಳಿದ್ದುವು. ಜಾನಿ ದೂರ ದಿಗಂತದವರೆಗೂ ನೋಟವನ್ನಟ್ಟಿ ನಿಂತ. ಬಹುಶಃ ಅವನು ತನ್ನ ಜೀವಮಾನದಲ್ಲೇ 'ಸ್ಯಾಂಡರ್‍ಲಿ' ಯಂತಹ ಸುಂದರ ಸಾನು ಪ್ರದೇಶವನ್ನು ಕಂಡಿರಲಿಲ್ಲವೇನೋ. ತಾನಿಂದು ಯಾವುದೋ ಶುಭಘಳಿಗೆಯಲ್ಲಿ ಎದ್ದಿರುವೆ ಎಂಬಷ್ಟು ಉತ್ಸಾಹ ಮನಃ ಪ್ರಾಣಗಳಿಗೆ. ನೋಟ ಮತ್ತೆ ಮತ್ತೆ ಸುತ್ತಮುತ್ತ ಹರಿದಾಡಿತು—ಭ್ರಮಿತ ಮೃಗ ಶಿಶುವಿನಂತೆ. ಹೆದ್ದಾರಿಯಿಂದ ಬಲಭಾಗಕ್ಕೆ ಹರಿದ ಕರಿಯ ರಸ್ತೆ ನೋಟದ ನೇರಕ್ಕೆ ಚೂಪಗೆ ಸೂಜಿಯ ಮೊನೆಯಂತೆ ಕಾಣಿಸುತಿತ್ತು. ಹಾಗೆ ಅದೆಷ್ಟು ಮೈಲಿ ಹರಿದಿದೆಯೆಂಬುದನ್ನು ಊಹಿಸುವುದೂ ಕಷ್ಟ. ಲಂಡನ್ ನಗರದ ಯಾವ ರಸ್ತೆಯೂ ಇಷ್ಟೊಂದು ಸುಂದರವಾಗಿಲ್ಲವೆಂಬುದು ಅನುಭವ ವೇದ್ಯ. ಎಡ ಬಲಗಳಲ್ಲಿ ಸಾಲಾಗಿ ಫಾರಂ-ಗಳು. ಅವು ಸಾಕಷ್ಟು ವಿಶಾಲವಾಗಿದ್ದು ತನುಮನುಗಳನ್ನು ಆಕರ್ಷಿಸುವಂತಿವೆ. ಕೆಲವಕ್ಕೆ ಮುಳ್ಳಿನ ಬೇಲಿಗಳಿವೆ. ಇನ್ನೂ ಕೆಲವು ಕಾಂಪೌಂಡು ಗೋಡೆಗಳನ್ನು ಹೊಂದಿವೆ. ಮಧ್ಯೆ ಮಧ್ಯೆ ಅರಮನೆಗಳಂತಹ ವೈವಿಧ್ಯಮಯ ಮಹಲುಗಳು. ಪ್ರಪ್ರಥಮ ನೋಟಕ್ಕೆ ಹೃದಯ ಸಮುದ್ರ ಆನಂದಾತಿರೇಕದ ಹೆದ್ದೆರೆಗಳಿಂದ ತುಂಬಿ ತುಯ್ಯಲಾಡಿ ಕುಂಡಲಿನಿಯ ಕಮಂಡಲುವಿಗೆ ತಟ ತಟನೆ ತೊಟ್ಟಿಕ್ಕಿ ನರನಾಡಿಗಳಲ್ಲಿ ಸರ್‍ರನೆ ಹರಿದಾಡಿತು.

ಜಾನಿ ಮುಗ್ಧ ಶಿಶುವಿನಂತೆ ಪುಳಕಿತನಾದ.

ಇಬ್ಬರೂ ಹೆದ್ದಾರಿಯಿಂದ ಸ್ಯಾಂಡರ್‍ಲಿಯ ನೇರ ರಸ್ತೆಗೆ ಪದಾರ್ಪಣೆ ಮಾಡಿದರು.

ದೇವನಗರಿಯಂತೆ ವಿಜೃಂಭಿಸುವ ಸ್ಯಾಂಡರ್‍ಲಿಯ ವೈಭವವನ್ನು ನಿರ್ನಿಮೇಶ ನಯನಗಳಿಂದ ಈಕ್ಷಿಸುತ್ತಾ ಕೇಳಿದ ಜಾನಿ "ಈ ರಸ್ತೆ ಕಿಂಚಿತ್ತೂ ಅತ್ತಿತ್ತಾಗದೆ ಗೆರೆ ಹಾಕಿದಂತೆ ಎಲ್ಲಿಯವರೆಗೆ ಹರಿದಿದೆ ? ಇದೇನು ಸಗ್ಗದ

ವರೆವಿಗೂ ಹೋಗುತ್ತೋ ಹೇಗೆ ?"

ವಿಲಿಯಂ ಬಾಲಕನಂತೆ ಹರ್ಷೋದ್ಗಾರ ಮಾಡಿದ. ಆತನ ಅಂಗ-ಪ್ರತ್ಯಂಗಗಳಿಂದ ಆನಂದದ ಶೀತಲ ಸ್ನಿಗ್ಧ ಲಹರಿಗಳು ಹೊಮ್ಮಿದುವು.

"ನಡೆ. ಆ ಕೊನೆಯವರೆವಿಗೂ ಹೋದರೆ ಸ್ವರ್ಗ ಮುಟ್ಟಿದಂತೆಯೆ!"

ಎಷ್ಟೇ ನಡೆದರೂ, ಈಗಲೂ, ಇನ್ನೊಂದು ಘಳಿಗೆಗೂ, ಸೂಜಿಯಷ್ಟು ನೇರವಾಗಿದೆ ಆ ಹಾದಿ! ಎಲ್ಲಿಲ್ಲದ ಆ ವಿಶೇಷದೊಂದಿಗೆ ಎಡಬಲಗಳಲ್ಲಿನ ಫಾರಂ-ಗಳ ಇಂದ್ರ ವೈಭವವನ್ನು ಸವಿಯುತ್ತಾ ಮುಂದುವರಿದ ಜಾನಿ. ಮನೆ ಮನೆಗಳಲ್ಲೂ ಸ್ತ್ರೀ ಪುರುಷರು ಹೊಂಬಿಸಿಲಿಗೆ ಮೈಗೊಟ್ಟು ಕೆಲಸ ಕಾರ್ಯಗಳಲ್ಲಿ ನಿಮಗ್ನರಾಗಿರುವುದು ಕಾಣಬಂತು. ಮನೆಗಳು ಬಹಳ ಹಿಂಬದಿಯಲ್ಲಿರುವುದರಿಂದ ರಸ್ತೆಗೂ ಮನೆಗಳಿಗೂ ನೂರಾರು ಮಾರು ಅಂತರವಿದೆ. ಕೆಲವು ಮನೆಗಳಲ್ಲಿ ಮನೆಯ ಮುಂಭಾಗಗಳಲ್ಲಿ ಕೇಲೀ ವನ ಗಳಿವೆ. ಮಕ್ಕಳು ಮಾತ್ರ ಎಲ್ಲೂ ದೃಷ್ಟಿಗೆ ಬೀಳಲಿಲ್ಲ. ಅಲ್ಲಿನ ಸಕಲ ವಿದ್ಯ ಮಾನಗಳನ್ನು ಗಮನಿಸುತ್ತಾ ಕೇಳಿದ ಜಾನಿ "ಎಲ್ಲಿಂದ ಎಲ್ಲಿಯವರಗೆ ನೋಡಿದರೂ ಮಕ್ಕಳಾಗಲೀ ಹುಡುಗ ಹುಡುಗಿಯರಾಗಲೀ ಕಾಣಿಸುವುದೇ ಇಲ್ಲ. ಎಲ್ಲಾ ಬರೀ ದೊಡ್ಡವರೇ....?"

ಎಲ್ಲರೂ ಲಂಡನ್ ನಗರ ಸೇರಿದ್ದಾರೆ. ಚಿಕ್ಕವರಿಗೆ ವಿದ್ಯಾಭ್ಯಾಸ. ದೊಡ್ಡವರಿಗೆ ನಗರದ ಹುಚ್ಚು."

ಇಬ್ಬರ ಮುಖದಲ್ಲೂ ಮುಗುಳ್ನಗು ಮೂಡಿತು.

ನಿಷ್ಪಂದ....ನೀರವ....ನಿಶ್ಶಬ್ದ....

ಆ ಸದ್ದಿಲ್ಲದ ಮಹಾ ಶಾಂತಿಯಲ್ಲಿ ಅವಿರಳ ರುದ್ರ ಪದಧ್ವನಿ ನಿಶ್ಶಬ್ದ ತೆಯ ಮೇಲೆ ಸುತ್ತಿಗೆಯ ಪೆಟ್ಟಿನಂತೆ ಬೀಳುವಾಗ ಯಾವುದೋ ಮಧುರ ವೀಣೆ ವಿಷಾದ ಗೀತೆಯನ್ನು ಹಾಡಿದಂತಾಯಿತು. ಜಾನಿ ಮನದಲ್ಲೇ ತರ್ಕಿ ಸುತ್ತ ಯಾವುದೋ ಅಪಚಾರವೆಸಗಿದಂತೆ ಅವಿಷ್ಟ ಉದ್ಭ್ರಾಂತತೆಯಿಂದ ಭ್ರಮಿತನಾದ. ಒಂದೆರಡು ಘಳಿಗೆ ಮಿನುಮಿನುಗುವ ಕಣ್ಣುಗಳಲ್ಲಿ ಅಸಾ ಧಾರಣವೂ ಅಸ್ವಾಭಾವಿಕವೂ ಆದ ಗುರುತ್ವವಿತ್ತು. ಸ್ವಲ್ಪ ಯೋಚಿಸಿ ಕರುಣಕಾತುರ ಕಂಠದಿಂದ ನುಡಿದ ಜಾನಿ "ನಗರಗಳಲ್ಲಿನ ಆಮೋದ

ಪ್ರಮೋದಗಳು ಜನಮನವನ್ನು ಆಕರ್ಷಿಸುವುದು ಸರ್ವೇಸಾಮಾನ್ಯ. ಆದರೆ ರಜೆ ದಿನಗಳಲ್ಲೂ ಇಲ್ಲಿಗೆ ಬಂದು ಹೋಗುವುದಿಲ್ಲವೇ ?"

"ಅಪರೂಪ."

"ವಿಶಾದಕರ !"

ವಿಲಿಯಂ ನಕ್ಕು ಬಿಟ್ಟ.

"ಏಕಪ್ಪಾ ?"

"ನಮ್ಮ ಮನಸ್ಸೆಲ್ಲಾ ಲಂಡನ್ ನಗರದ ಮೇಲೆ !"

"ಹಾಗಿದ್ದರೆ ನಿನ್ನ ಫಾರಂ–ನನಗೆ ಬಿಟ್ಟುಕೊಡು !"

"ಕೊಡಬಹುದಾಗಿತ್ತು, ಅಪ್ಪ ಅಮ್ಮ ಇನ್ನೂ ಇದ್ದಾರೆ."

ಇಬ್ಬರ ಅಧರೋಷ್ಠಗಳಲ್ಲಿ ಸರಳ ಸರಸ ನಗುವಿನ ಧಾರೆ ಹರಿದು ಬಂತು.

ಆ ನೇರ ರಸ್ತೆಯಲ್ಲಿ ಇಬ್ಬರೂ ಅದೆಷ್ಟು ಹೊತ್ತು ನಡೆದರೋ.... ಅಂತೂ ಆ ಕೊನೆಯನ್ನು ಮುಟ್ಟಿದಾಗ ವಿಲ್ಲಿ ಅಂದ ಮಾತು ಕಿವಿಯಲ್ಲಿ ಮರ್ಮರಿಸಿತು.

"ನಡೆ, ಆ ಕೊನೆ ಮುಟ್ಟಿದರೆ ಸ್ವರ್ಗ ಮುಟ್ಟಿದಂತೆಯೆ !"

ಅತ್ತ ನೋಡಿದೊಡನೆಯೇ ದುಷ್ಯತ್ರಾಸಿತಳಾದ ಸ್ವರ್ಗಲಕ್ಷ್ಮಿ ಘೂರ್ಣ ಉದ್ಭ್ರಾಂತತೆಯಿಂದ ಪ್ರಕೃತಿಯ ಉಡಿಯನ್ನಾಶ್ರಯಿಸಿ ಮುಂಡಿಯೂರಿ ಕುಳಿತಂತೆ ಭಾಸವಾಯಿತು! ಒಂದೆರಡು ಕ್ಷಣ ಅಲ್ಲೆ ನಿಂತು ನೋಡಿದ. ಪುರಾತನ ಬೌದ್ಧಿಕಸ್ತರದಲ್ಲಿ ಆವಿರ್ಭವಿಸಿ ವಿಜೃಂಭಿಸುವ ಭವನದ ಬಂಧುರತೆ ಕೈಬೀಸಿ ಕರೆಯುತ್ತಿದೆ! ಜಾನಿ ಪುಳಕಿತನಾಗಿ ಎಳೆಯ ಅಣುಗನಂತೆ ತೀವ್ರ ಗತಿಯಲ್ಲಿ ಮುಂದುವರಿದ. ತಲೆ ಬಾಗಿಲಲ್ಲಿ ಗೃಹಿಣಿ ಎದುರಾದಳು. ಅರವತ್ತು ವಸಂತಗಳ ಸೊಂಪನ್ನುಂಡ ಸ್ವಾಮಿನಿಯನ್ನು ತನ್ನ 'ತಾಯಿ' ಎಂದು ಪರಿಚಯ ಮಾಡಿ ಕೊಟ್ಟ ವಿಲಿಯಂ. ಜಾನಿ ಹಾರ್ದಿಕವಾಗಿ ಕೈ ಕುಲುಕಿದ. ಪರಸ್ಪರ ಕುಶಲ ಪ್ರಶ್ನೆಗಳಾದುವು. ವಿಲಿಯಂ ಒಳ ಹೋಗಿ ಚಹದ ಬಸಿ ಬಟ್ಟಲುಗಳನ್ನು ಜೋಡಿಸಿ ಬ್ರೆಡ್ಡು ಬಿಸ್ಕತ್ತುಗಳ ಸಹಿತ ಚಹವನ್ನು ತಂದ. ಮೂವರೂ ಕುಳಿತು ಸಾನಂದದಿಂದ ಸವಿದರು.

ಅನಂತರ ಜಾನಿ ಕೇಳಿದ "ಇಂದೇನಪ್ಪಾ ಕಾರ್ಯಕ್ರಮ ?"

"ಒಂದು ಸುತ್ತು ತಿರುಗಾಡಿ ಬರೋಣ, ಇಲ್ಲೇ ಹತ್ತಿರದಲ್ಲಿ ಒಂದು

ಸಣ್ಣ ಹೊಳೆಯಿದೆ. ಅಲ್ಲಿ ಮೀನು ಹಿಡಿಯಬಹುದು. ಹೆದ್ದಾರಿಯ ಕಡೆ ಹೋದರೆ ಒಂದು ದೊಡ್ಡ ಕೆರೆಯಿದೆ. ಅಲ್ಲಿ ನೀರ್ಕೋಳಿಗಳನ್ನು ಹೊಡೆಯಬಹುದು. ಯಾವ ಕಡೆ ಹೋಗೋಣ ?"

"ನೀನು ಹೇಗೆ ಹೇಳಿದರೆ ಹಾಗೆ"

"ನಿನ್ನಿಷ್ಟವೇನು ಹೇಳು ?"

"ಈ ಸ್ಥಳದ ವಿದ್ಯಮಾನ ನನಗೇನೂ ತಿಳಿಯದು. ಆದ್ದರಿಂದ ನಿನ್ನಿಷ್ಟವೇ ನನ್ನಿಷ್ಟ."

"ಹಾಗಿದ್ದರೆ ಸರಿ ; ಹೊಳೆಯ ಕಡೆ ಹೋಗಿ ಬರೋಣ. ಒಂದೆರಡು ಮೀನುಗಳನ್ನು ಹಿಡಿಯಬಹುದು. ಕೆರೆಯಿರುವುದು ಬಹಳ ದೂರದಲ್ಲಿ ; ಅಲ್ಲಿಗೆ ಮಧ್ಯಾಹ್ನ ಹೋಗಿ ಬಂದರಾಯಿತು."

ವಿಲಿಯಂ ಒಳ ಹೋಗಿ ಮೀನಿನ ಗಾಳವನ್ನೂ ಕೋಲನ್ನೂ ತೆಗೆದುಕೊಂಡು ಬಂದ. ಮೊದಲು ಕುದುರೆಗಳ ಉಸ್ತುವಾರಿಯಲ್ಲಿ ನಿಮಗ್ನನಾಗಿದ್ದ ತಂದೆಯನ್ನು ನೋಡುವುದಿತ್ತು. ಅಲ್ಲಿಗೆ ಗೆಳೆಯನನ್ನು ಕರದೊಯ್ದು ಪರಿಚಯ ಮಾಡಿಸುವಾಗ ಅಲ್ಲೇ ಇದ್ದ ನಾಯಿ 'ಬ್ಲಾಕಿ' ಅಪರಿಚಿತನನ್ನು ದುರುಗುಟ್ಟಿ ನೋಡಿ ಬಗುಳ ತೊಡಗಿತು. ಅದರ ತಲೆಯನ್ನು ನೇವರಿಸಿ ಮುದ್ದುಗೈದು ಗೆಳೆಯನೊಂದಿಗೆ ಹೊರಟ ವಿಲಿಯಂ.

ಸ್ಯಾಂಡರ್ಲ್ಲಿಯ ಪ್ರಕೃತಿದತ್ತವಾದ ಸೌಂದರ್ಯವನ್ನು ಮನದಣಿಯೆ ಹೀರುತ್ತ ಈ ಭಗವಂತನ ಸಾನಿಧ್ಯದ ಮುಂದೆ ಲಂಡನ್ ನಗರ ಯಾವ ಲೆಖ್ಖ? ಎಂದು ಕೊಂಡ. ಉಬ್ಬಿದ ಹೃದಯ ಆನಂದದ ಆಗರವಾಯಿತು. ವಿಸ್ಫಾರಿತ ಸುನೀಲ ನೇತ್ರಗಳಲ್ಲಿ ಸ್ಫೂರ್ತಿಯ ಮಿಂಚನ್ನು ಚೆಲ್ಲಿ ನುಡಿದ ಜಾನಿ "ಅಗಾಧವಾದ ಪ್ರಕೃತಿಯ ಪರಮ ಸತ್ಯದ ಮುಂದೆ ಯಾಂತ್ರೀಕೃತ ಜೀವನವೊಂದು ಜೀವನವೇ ? ನನಗೆ ಇಲ್ಲಿಗೆ ಬಂದಾಗಿನಿಂದ ದೊರೆತ ಆನಂದ ಹುಟ್ಟಿದಾರಭ್ಯ ದೊರೆತಿರಲಿಲ್ಲ."

ವಿಲಿಯಂ ಚಕಿತ ಮುಗ್ಧಶಿಶುವಿನಂತೆ ಕೇಳಿದ "ನೀನು ಈ ಹಿಂದೆ ಎಂದೂ ಸ್ಯಾಂಡರ್ಲ್ಲಿಗೆ ಬಂದೇ ಇರಲಿಲ್ಲವೇ ?"

ಶೀತಗೆಡ್ಡೆಯ ಶೈತ್ಯಕ್ಕಿಂತಲೂ ಶೀತಲ ಉತ್ತರ ಜಾನಿಯದು. "ಅದಕ್ಕೂ ಲಭ್ಯವಿರಬೇಕಪ್ಪಾ. ಸುಮ್ಮನೆ ಬರುತ್ತದೆಯೆ ?"

"ಇಲ್ಲಿ ಮೂವತ್ತಕ್ಕಿಂತ ಫಾರಂ-ಗಳು ಹೆಚ್ಚಿಲ್ಲ. ಆದರೆ ಲಂಡನ್ ನಗರ ಸಮೀಪವಿರುವುದರಿಂದ ಸ್ಯಾಂಡರ್ಲಿಗೆ ಬಹಳ ಮಹತ್ವವಿದೆ. ಇಲ್ಲಿರುವ ಮನೆಗಳೆಲ್ಲಾ ನೂರಾರು ವರ್ಷಗಳ ಹಿಂದಿನವೆಂದು ಇಲ್ಲಿಯ ಇತಿಹಾಸ ಹೇಳುತ್ತದೆ."

ಜಾನಿ ತಲೆದೂಗಿದ. ನೋಟ ಎಡಬಲಗಳ ಫಾರಂ-ಗಳ ಕಡೆ ಹರಿದಾಡಿತು.

"ಇಲ್ಲಿ ನನಗೇನಾದರೂ ಒಂದು ಫಾರಂ ಸಿಕ್ಕುವಂತಿದ್ದರೆ ಖಂಡಿತ ಕೊಡಿಸು. ನಾನಿಲ್ಲೇ ಇದ್ದು ಬಿಡುವೆ."

"ಬಹಳ ಕಷ್ಟ." ಗೋಣು ಆಡಿಸುತ್ತಾ ನುಡಿದ ವಿಲಿಯಂ.

ಬೃಹದ್ ಪ್ರಕೃತಿಯೊಡನೆ ಸ್ಪರ್ಧೆ ಹೂಡಿದ ಮಾನವ ಶ್ರದ್ಧೆಯ ಭೀಷಣ ಶಕ್ತಿಯನ್ನು ಮನದಲ್ಲೇ ತರ್ಕಿಸುತ್ತಾ ಜಾನಿ ಹೆಜ್ಜೆ ಹಾಕಿದ. ಸರಳ ಉಡುಪಿನಿಂದ ಸಮಾವೃತವಾದ ಸೊಬಗು, ಧೀರ ಪ್ರಸನ್ನ ಭಾವ, ರುದ್ರ ಮನೋಹರ ಸಂಸ್ಕೃತಿಗೆ ಕಳಶವಿಟ್ಟಂತಿವೆ. ಹಾಸ ವಿಲಾಸಗಳಲ್ಲಿ ಸುಖ ಸಂತೋಷಗಳಲ್ಲಿ ಆನಂದ ಪ್ರಮೋದಗಳಲ್ಲಿ ನಲಿಯುವ ತರುಣ ಬುದ್ಧಿಗೆ ಭಾವವಿಭಾವಗಳ ಸೂಕ್ಷ್ಮಾತಿಸೂಕ್ಷ್ಮ ತಂತುಗಳಲ್ಲಿ ಹರಿದಾಡುವ ಚಪಲತೆಯೂ ಸಹ.

ಗೆಳೆಯನ ಭುಜವನ್ನು ಅದುಮಿ ಹಿಡಿದು ನುಡಿದ "ಹೇಗಾದರೂ ಮಾಡಿ ನನಗಿಲ್ಲಿ ಒಂದು ಫಾರಂ ಕೊಡಿಸು. ಇಲ್ಲಿರುವವರೆಲ್ಲ ಬಹಳ ಮಟ್ಟಿಗೆ ವಯಸ್ಸಾದವರೇ. ಯಾರಾದರೂ ಮಾರಲಿದ್ದಾರೋ ತಿಳಿದು ನೋಡಿದರೆ ಅನುಕೂಲ."

ವಿಲಿಯಂ ಕೆಲವು ಕ್ಷಣ ಯೋಚಿಸಿ "ಇಲ್ಲೊಬ್ಬ ಮುದುಕ ಇದ್ದಾನೆ. ಅವನೇನಾದರೂ ಮಾರುವುದಾದರೆ...." ಮಾತನ್ನು ಅಷ್ಟಕ್ಕೆ ನಿಲ್ಲಿಸಿ ಹೊಳಪು ಗಣ್ಣುಗಳಲ್ಲಿ ಮಿಂಚಿನಂತಹ ಬೆಳಕನ್ನು ಚೆಲ್ಲಿ ಮಂದಸ್ಮಿತದೊಡನೆ ಗೆಳೆಯನನ್ನು ನಿಟ್ಟಿಸಿದ.

"ಅದೇಕೆ ಅರ್ಧಕ್ಕೆ ನಿಲ್ಲಿಸಿದೆ?"

"ಆ ಮುದುಕ ಬಹಳ ಚಾಣಾಕ್ಷ ಕಣಯ್ಯಾ, ಹೆಂಡತಿಯಿಲ್ಲ; ಮಕ್ಕಳಿಲ್ಲ; ಆದರೂ ಅವನ ದೃಢತೆ ಎಂತಹವರೂ ಡಂಗು ಬಡಿಯುವಂತಿದೆ. ಒಂದು ವೇಳೆ ಫಾರಂ ಅವನ ಕೈಬಿಡುವುದಾದರೆ ಎರಡು ಕಾರಣ

ಗಳಿಂದ....ಒಂದನೆಯದು ನಿನ್ನ ಅದೃಷ್ಟ ಹಣ್ಣಾಗಿರಬೇಕು! ಇಲ್ಲವೇ ಆತನಿಗೆ ಮೃತ್ಯುವಿನ ಕೃಪಾಕಟಾಕ್ಷ ಬೀಳಬೇಕು!"

ತರುಣರ ಅಧರೋಷ್ಠಗಳಲ್ಲಿ ಆದ್ರ್ರಹಾಸದ ರೇಖೆಯು ಮಿಂಚಿನಂತೆ ಹರಿದಾಡಿತು.

ವಿಲಿಯಂ ಮುಂದುವರಿದ "ಮುಖ್ಯವಾಗಿ ಆ ಮುದುಕ ಯಾರೊಂದಿಗೂ ಬೆರೆಯುವುದಿಲ್ಲ. ಬಹಳಮಟ್ಟಿಗೆ ಇಲ್ಲಿಯವರಾರಿಗೂ ಆತನ ಪರಿಚಯವಿಲ್ಲ. ಅಂದಮೇಲೆ ಅವನ ಮುಂದೆ ಈ ವಿಷಯವನ್ನು ಇಡುವುದೂ ಸಹ ಕಷ್ಟವೇ."

"ನನಗಾಗಿ ಸ್ವಲ್ಪ ಪ್ರಯತ್ನಪಡು."

"ಕಷ್ಟ ಕಣಯ್ಯಾ."

ಸಾಲಾಗಿನ ಫಾರಂ-ಗಳ ವೈಶಿಷ್ಟ್ಯಗಳನ್ನು ಗಮನಿಸುತ್ತಾ ಜಾನಿ ಮುಂದುವರಿದ. ಹೃದಯ ಕುಂಡದಲ್ಲಿ ಮೊಳೆತ ಆನಂದಧಾರೆ ಶಾಂತಿ ಹನಿಗಳಂತೆ ಮುಖಬಿಂಬದಲ್ಲಿ ತೊಟ್ಟಿಕ್ಕುತಿತ್ತು. ಅಂತರಂಗ ಭವ್ಯ ಭವಿತವ್ಯದ ಹೊಂಗನಸುಗಳನ್ನು ನೇಯುತಿದ್ದರೂ ನಿರಾಕಾರತೆಯ ಸ್ವರೂಪ, ನಿಶ್ಶಬ್ದತೆಯ ಪದಧ್ವನಿ ಅನನ್ಯ ಸ್ವರ್ಗೀಯ ಭಾವದಿಂದ ವಿಚಿತ್ರ ಪರಿಮಳವನ್ನು ಹೊಮ್ಮಿಸುತಿತ್ತು.

ವಿಲಿಯಂ ನೇರಹಾದಿಯನ್ನು ಬಿಟ್ಟು ಎಡಭಾಗದ ಕಾಲು ಹಾದಿ ಹಿಡಿದ. ಸ್ವಲ್ಪದೂರ ನಡೆಯುವುದರೊಳಗಾಗಿ ಹೊಳೆಯೆಡೆಗೆ ಹರಿಯಿತು ಹಾದಿ. ತಟಾಕದಲ್ಲಿ ಹಲವಾರು ದಪ್ಪನ್ನ ಬಂಡೆಗಳು ನೀರೊಳಗೆ ಮೈ ಚಾಚಿ ಮಲಗಿದ್ದುವು. ವಿಲಿಯಂ ಅದರ ಮೇಲೆ ಕುಳಿತು ಮೀನುಗಳಿಗೆ ಗಾಳ ಒಡ್ಡಿದ.

ನೀರು ಶುಭ್ರವಾಗಿತ್ತು. ಸಣ್ಣ ದೊಡ್ಡ ಕಲ್ಲುಗಳ ಸಂಧಿಯಲ್ಲಿ ಹರಿಯುವಾಗ ಹೊಮ್ಮುವ ಜುಳು ಜುಳು ಶೃತಿಯ ಮಧುರ ನಿನಾದವನ್ನು ಆಲೈಸುತ್ತಾ ತಲೆದೂಗಿದ ಜಾನಿ. ಶೈವಾಲರಹಿತ ಪುಷ್ಕರಣಿಯಂತೆ ಆತನ ಚಿತ್ತ ಪ್ರಸನ್ನವಾಯಿತು. ಆನಂದ ಪ್ರಮತ್ತನಾಗಿ ಹಾಡಿದ.

*Lives of great men all remind us,*
*We must make our own sublime,*
*And departing leave behind us,*
*Footprints on the sands of time.*

"ಸ್ಯಾಂಡರ್ಲಿ ನಿನ್ನನ್ನು ರಸ ಋಷಿಯನ್ನಾಗಿ ಮಾಡುವಂತಿದೆ....!"

ವಿಲಿಯಂ ತುಂಟ ನಗೆ ಬೀರಿದ.

"ನಿಜವಾಗಿಯೂ ಯೋಚಿಸಿ ನೋಡು. ಯಾವ ಘನೋದ್ದೇಶದಿಂದ ಕವಿ ಈ ಕೃತಿಯನ್ನು ನೇಯ್ದನೋ ಆ ಉದ್ದೇಶ ಸಾಧನೆಗೆಂದೇ ಇಂತಹ ಶಾಂತ ಸುಂದರ ವಲಯಗಳಿವೆಯೋ ಏನೋ.... ಲಂಡನ್ ನಗರವಾಸಿಗಳಿಗೆ ಯಾವುದೇ ಶ್ರೀಶುಭಚರಣಗಳ ಚಿನ್ಹೆ ಕಾಣಿಸಬಲ್ಲುದೇ ?"

"ಒಳ್ಳೆ ಸಂನ್ಯಾಸಿ ಮಾತಾಡಿದಂತೆ ಮಾತಾಡುತಿದ್ದಿ !"

"ನೀನಿನ್ನೂ ಎಳೆಯ. ಯೋಗ್ಯತೆಯ ಬೆಲೆಯನ್ನು ತಿಳಿದುಕೊಳ್ಳ ಬೇಕಾದರೆ ನಿನಗೆ ಬಹಳ ಕಾಲಬೇಕು."

"ನಾನು ನಿನ್ನನ್ನಿಲ್ಲಿಗೆ ಎಳೆತಂದದ್ದು ಒಳ್ಳೆಯದೇ ಆಯಿತಲ್ಲ ?"

ಗಾಳಕ್ಕೆ ಕಚ್ಚಿದ ಮೀನೊಂದನ್ನು ಚಕ್ಕನೆ ಎಳೆದ ವಿಲಿಯಂ. ಕೂಡಲೇ ಅದನ್ನು ಕಳಚಿ ಒಂದೆಡೆ ಇಟ್ಟು ಗಾಳವನ್ನು ಇನ್ನೊಮ್ಮೆ ಇಳಿಯ ಬಿಟ್ಟ. ಸತದೃಷ್ಟ ಮೀನುಗಳು ಒಂದೊಂದಾಗಿ ಬೀಳುತ್ತಲೇ ಇವೆ. ಅವನು ಅಷ್ಟೇ ಉತ್ಸಾಹದಿಂದ ಪುನಃ ಪುನಃ ಗಾಳ ಹಾಕುತ್ತಲೇ ಇದ್ದಾನೆ. ಮೀನಿನ ಬೇಂಟೆಯತ್ತ ನೋಡುತ್ತಾ ಕುಳಿತ ಜಾನಿಯ ಕೆಂಪುವರ್ಣದ ಮುಖದ ಮೇಲೆ ಬಿದ್ದ ನೆರಳು ಬಿಸಿಲಿನ ಬಲೆಯಲ್ಲಿ ನಿಮೀಲಿತ ನಯನದ್ವಯಗಳು ಮಿಂಚಿನಂತೆ ಹೊಳೆಯುತಿದ್ದುವು.

ವಿಲಿಯಂ ಏಳೆಂಟು ಮೀನುಗಳನ್ನು ಒಂದು ದಾರದಲ್ಲಿ ಪೋಣಿಸಿ ಕಟ್ಟಿ ತೆಗೆದುಕೊಂಡು ಹೊರಡಲಣಿಯಾದ. ಜಾನಿ ಹಿಂಬಾಲಿಸಿದ. ಇಬ್ಬರೂ ಮನೆ ಮುಟ್ಟಿದಾಗ ಹೊತ್ತು ನೆತ್ತಿಗೇರಿದ್ದರೂ, ಊಟ ಕರಿದ ಮೀನಿನಿಂದಲೇ ಆರಂಭವಾಯಿತು. ನಾಲ್ವರೂ ಕೂಡಿ ಊಟ ಮುಗಿಸಿದರು. ವಿಶ್ರಾಂತಿ ತೆಗೆದು ಕೊಳ್ಳುತ್ತ ವಿಲಿಯಂ ಅಂದ "ಮಧ್ಯಾಹ್ನ ಕೆರೆಯ ಕಡೆ ಹೋಗಿ ಬರೋಣ. ಆ ಕಡೆ ಇರುವ ಫಾರಂ-ಗಳು ಅಪೂರ್ವ ಶೋಭೆಯಿಂದ ಕೂಡಿವೆ."

ಜಾನಿ ಸಮ್ಮತಿ ನೀಡಿದ. ಕಣ್ಣುಗಳು ಆಶಾಭಾವನೆಯಿಂದ ಉಲ್ಕೆ ಗಳಂತೆ ಮಿನುಗಿದುವು. ಹೊತ್ತು ಮೂರರ ಅಂಚನ್ನು ದಾಟುವುದನ್ನೇ ಕಾಯುತಿದ್ದ ಜಾನಿ ಅವಸರಿಸಿದ "ಹೊರಗಡೆ ಹೋಗೋಣ ವಿಲ್ಲೀ."

ವಿಲಿಯಂ ಸಗುಮುಖದಿಂದ ಒಪ್ಪಿಗೆ ಸೂಸಿದ. ಇಬ್ಬರೂ ಮುಖ

ಮಜ್ಜನ ಮಾಡಿ ಹೊರಡಲಣಿಯಾದರು. ಚಹ ಪಾನ ಮಾಡಿ ಕೋವಿಯನ್ನೂ ಕೆಲವು ತೋಟಗಳನ್ನೂ ತೆಗೆದುಕೊಂಡು ಗೆಳೆಯನೊಡನೆ ವಿಲಿಯಂ ಹೊರಟ. ಮತ್ತೆ ಅದೇ ನೇರ ರಸ್ತೆ. ಎಡಬಲಗಳಲ್ಲಿ ಫಾರಂ-ಗಳು. ಬಿಸಿಲು ಪ್ರಖರವಾಗಿದ್ದರೂ ತಂಗಾಳಿ ತೀಡುತಿತ್ತು. ಜಾನಿ ಫಾರಂಗಳ ಚೆಲುವನ್ನು ಮೆಲ್ಲುತ್ತ "ನನಗಿಲ್ಲೊಂದು ಫಾರಂ ಸಿಕ್ಕಿದ್ದರೆ ಸ್ವರ್ಗವೂ ಸಹ ನನಗೆ ಬೇಡವಾಗಿತ್ತು ಎಂದ. ಮನಸ್ಸು ಪ್ರಕೃತಿಯ ಶೋಭಾ ಸಮುದ್ರದಲ್ಲಿ ಸಂಪೂರ್ಣ ತಲ್ಲೀನವಾಗಿತ್ತು. ಗೆಳೆಯನ ಆಸೆಯನ್ನು ನೋಡಿ ವಿಲಿಯಂ-ನಿಗೂ ಸಹ ಹೇಗಾದರೂ ಒಂದು ಫಾರಂ ದಕ್ಕಿಸಿಕೊಂಡರೆ ಗೆಳೆಯನನ್ನು ಇಲ್ಲೆ ಇರಿಸಿಕೊಳ್ಳಬಹುದು ಎಂಬ ಆಶಾಭಾವನೆ ಮನವನ್ನು ಆಕ್ರಮಿಸಿತು. ಆದರೆ, ಕಾಲಾನುಕಾಲದಿಂದ ಇಲ್ಲೆ ಇದ್ದು, ಕೈತುಂಬ ಗಳಿಸಿ, ಸುಖ ಸಂತೋಷಗಳನ್ನು ಪಡೆದುಕೊಂಡು, ಸಮೃದ್ಧಿಯಿಂದ ಬಾಳುವ ಅನನ್ಯ ಅನುಭವೀ ಮಂದಿ ಇಂಥ ಭೂಮಿಯನ್ನು ಬಿಟ್ಟು ಕೊಟ್ಟಾರೆಯೆ ? ಎಂದು ಮನದಲ್ಲೆ ತರ್ಕಿಸುತ್ತ ವಿಲಿಯಂ ನುಡಿದ "ಒಂದು ವೇಳೆ ಇಲ್ಲಿರುವವರಲ್ಲಿ ಮಾರುವುದಾದರೆ 'ಬರ್ಚ್‌ವುಡ್' ಮಾಲೀಕನೇ ಸೈ. ಒಂದು ಕಾಲದಲ್ಲಿ ಅವನೂ ಕುದುರೆಗಳನ್ನಿಟ್ಟಿದ್ದ. ಆಗ ಅವನ ಹೆಂಡತಿಯ ಸಹಾಯದಿಂದ ಫಾರಂ ನಡೆಯುತಿತ್ತು. ಈಗ ಯಾರೂ ಇಲ್ಲ. ಯಾವ ಹವ್ಯಾಸವನ್ನೂ ಹಚ್ಚಿಕೊಳ್ಳದೆ ಆರಾಮವಾಗಿದ್ದಾನೆ. ಬರಿಯ ವಾಸಕ್ಕಾಗಿ ಇಷ್ಟು ದೊಡ್ಡ ಫಾರಂ ಬೇಕಿಲ್ಲ. ಕೇಳಿದರೆ ಕೊಟ್ಟಾನೇನೋ....

"ಕೇಳಿ ನೋಡು."

"ಅದೊಂದು ವಿಚಿತ್ರ ವ್ಯಕ್ತಿ. ಗೊತ್ತು ಗುರಿಯಿಲ್ಲದೆ ಕೇಳುವುದೂ ಸಹ ಕಷ್ಟವೇ,"

"ಏನು ಹೇಳು....?"

"ಆತನ ವಿಶ್ಲೇಷಣೆ ಅಸಾಧ್ಯ. ಆಗಲೇ ಹೇಳಿದೆನಲ್ಲಾ, ಅವನು ಯಾರೊಡನೆಯೂ ಬೆರೆಯುವವನಲ್ಲ ; ಕೊನೆಯ ಪಕ್ಷ ಯಾರಿಗಾದರೂ 'ಹಲೋ' ಎನ್ನುವವನೂ ಅಲ್ಲ. ಒಬ್ಬೊಂಟಿಗ ; ಆಳು ಕಾಳು ಸಹ ಇಲ್ಲ. ಏಳೆಂಟು ಭಯಂಕರ ನಾಯಿಗಳನ್ನು ಸಾಕಿಕೊಂಡಿದ್ದಾನೆ. ಅವೇ ಅವನ ಗೆಳೆಯರು. ಅವನು ಆಗಾಗ ನಗರಗಳಿಗೆ ಹೋಗಿ ಬರುವುದುಂಟು. ಜೊತೆಗೆ ಒಂದೆರಡು ನಾಯಿಗಳನ್ನು ಕರೆದೊಯ್ಯುತ್ತಾನೆ. ಉಳಿದವು ಮನೆಗೆ ಕಾವಲಾಗಿರುತ್ತವೆ. ಅವನ ದಿನಚರಿಯನ್ನಾಗಲೀ ಮುಂದಿನ ಗುರಿಯನ್ನಾಗಲೀ

ಯಾರೂ ಕಂಡರಿಯರು. ಇಲ್ಲಿಂದ ಲಂಡನ್ನಿಗೆ ಒಬ್ಬನೇ ಓಡಾಡುವುದನ್ನು ನೋಡಿದರೆ ಆ ಅಜ್ಜ ಅಲ್ಲೇ ಏಕಿರಬಾರದು ಎನ್ನಿಸುತ್ತೆ....ಅವನ ಸತಿ ಬದುಕಿದ್ದಾಗಲೇನೋ ಇಬ್ಬರಿಗೂ ಫಾರಂ–ಮಿನ ಅವಶ್ಯಕತೆಯಿತ್ತು ಈಗ?"

"ಏನಾದರೂ ಉದ್ದೇಶವಿರಬಹುದೇನೋ...."

"ಇನ್ನೆಂಥ ಉದ್ದೇಶ ? Withering Tree !"

ದೀಪ್ತ ಕಂಠ ಮೌನವಾಗಿದಾಗ ತುಟಿಗಳಲ್ಲಿ ಸಣ್ಣ ತಿರಸ್ಕಾರದ ನಗೆ ಅರಳಿತು. ಸ್ವಲ್ಪದೂರ ಮುಂದುವರಿಯುತ್ತಲೂ ಬಲಭಾಗದ ಫಾರಂ ಕಡೆ ಕಣ್ಣು ಹೊರಳಿಸಿ ಇದೇ 'ಬರ್ಚ್ ವುಡ್' ಎಂದ ವಿಲಿಯಂ. ಇಬ್ಬರ ನೋಟವೂ ಅತ್ತ ಹೊರಳಿತು. ಹೆಸರಿಗೆ ತಕ್ಕಂತೆ ಬರ್ಚ್ ಮರಗಳಿಂದ ತುಂಬಿ ಹೋಗಿದೆ. ಗೇಟಿನಿಂದ ಏನಿಲ್ಲೆಂದರೂ ಅರ್ಧ ಫರ್ಲಾಂಗಿನಷ್ಟು ದೂರದಲ್ಲಿ ಮರಗಳ ಮಧ್ಯೆ ಅಲ್ಪ ಸ್ವಲ್ಪ ಕಾಣಿಸುತಿತ್ತು ಮಹಲು.

"ಸತಿಯಿದ್ದಾಗ ಆತನ ಜೀವನ ಮೋದಪ್ರದವಾಗಿತ್ತು. ಈಗ ಕಸ ಬಳಿಯುವವರೂ ಇಲ್ಲವಾಗಿದೆ. ಎಂದಾದರೊಮ್ಮೆ ರಘುನಾಥವಾಲಿ ಗುಡಿಸಿ ಹೋಗುತ್ತಾನೆಂದು ತೋರುತ್ತೆ. ಈಗ ಅವನು ಇಲ್ಲಿ ಹೊಂದಿರುವ ಮಾನವ ಸಂಪರ್ಕ ಅಷ್ಟೆ."

ಜಾನಿಯ ಸುನೀಲ ನಯನಗಳು ಆಸಕ್ತಿಯಿಂದ ವಿಸ್ಫಾರಿತವಾದುವು. ಬರ್ಚ್ ಮರಗಳ ಸುಂದರ ವನವನ್ನು ಪುನಃ ನಿಟ್ಟಿಸಿದ. ಒಂದು ವೇಳೆ ಆ ಫಾರಂ ಸಿಕ್ಕಿದರೆ ನಾನು ಪುಣ್ಯವಂತನೇ ಸರಿ ಎಂಬ ಯೋಚನೆಯೂ ಬಂತು. ಅದೇ ಕ್ಷಣದಲ್ಲಿ ರಸ್ತೆಯ ನೇರಕ್ಕೆ ಕಪ್ಪು ಕಾರು ಸರ್ರನೆ ಬರುತ್ತಿರುವುದು ಕಾಣಿಸಿತು. ಆ ಕೂಡಲೆ ವಿಲಿಯಂ ಅಂದ "ನೋಡು, ನೋಡು !.... ಅವನೇ !"

ದೃಷ್ಟಿಯ ನೇರಕ್ಕೆ ನಯನ ಪಕ್ಷ್ಮಗಳು ನಿಮಿರಿ ನಿಂತುವು. ರೊಯ್ಯನೆ ಬಂದ ಕಾರು ವಿಶಾಲವಾದ ಆ ಗೇಟನೊಳಹೊಕ್ಕು ಬರ್ಚ್ ಮರಗಳ ತಪ್ಪಲಿನ ಹಾದಿ ಹಿಡಿದು ಮಹಲಿನೆಡೆಗೆ ಹೋಯಿತು. ಗೇಟಿನ ಬಳಿ ಕಾದಿದ್ದ ಭಯಂಕರ ದೊಡ್ಡ ದೊಡ್ಡ ನಾಯಿಗಳು ಕಾರನ್ನು ಹಿಂಬಾಲಿಸಿ ಓಡಿದುವು. ನಿರ್ನಿಮೇಷ ನಯನಗಳು ಒಂದು ಘಳಿಗೆ ಅತ್ತಲೇ ನಿಟ್ಟಿಸಿ ಹಿಮ್ಮರಳಿದುವು. ಮನಸ್ಸು ತಾನೊಬ್ಬ ಒಳ್ಳೆಯ ಫಾರಮ್ಮಿನ ಒಡೆಯನಾಗಿ

ಬಾಳುವ ಯೋಗವನ್ನು ಕುರಿತು ಹೊಂಗನಸುಗಳನ್ನು ನೇಯುತಿತ್ತು. ಜಾನಿ ಅದೇ ಚಿಂತನೆಯಲ್ಲಿ ಹೆಜ್ಜೆ ಹಾಕಿದ. ಸ್ವಲ್ಪದೂರ ಹೋದಮೇಲೆ ಹಾದಿ ಎಡಕ್ಕೆ ತಿರುಗಿ ವಿಶಾಲವಾದ ಪುಷ್ಕರಿಣಿಯೆಡೆಗೆ ಹರಿಯಿತು. ನೋಡೆ, ನೀರ್ಕ್ಕೋಳಿಗಳ ಹಿಂಡೇ ಅಲ್ಲಿವೆ. ಬಹುಶಃ ಅದೃಷ್ಟವೇ ಇರಬೇಕು. ದಿನವೂ ಒಂದೆರಡು ಇರುತಿದ್ದ ಅವು ಇಂದು ಸಮಯಕ್ಕೆ ಸರಿಯಾಗಿ ಬಂದಿವೆ.... ತರುಣರು ಉತ್ಸಾಹದಿಂದ ಸದ್ದುಮಾಡದೆ ತೀರಕ್ಕೆ ಹೋಗಿ ಗುಂಡು ಹಾರಿಸಿದರು. ನಾಲ್ಕಾರು ಹಕ್ಕಿಗಳು ಬಿದ್ದುವು. ಉಳಿದ ಪಕ್ಷಿಗಳು ಪ್ರಾಣಭಯದಿಂದ ಆ ಕ್ಷಣ ಹಾರಿ ಹೋದುವು. ಬಿದ್ದ ಹಕ್ಕಿಗಳನ್ನೆತ್ತಿಕೊಂಡು ಇಬ್ಬರೂ ಮನೆಯ ಹಾದಿ ಹಿಡಿದರು. ಜಾನಿ ಗಗನಾಂಗಣದ ನೀಲಿ ಪುಷ್ಕರಣಿಯ ತಿಳಿ ನೀರಿನಲ್ಲಿ ಮೈ ಚಾಚಿರುವುದನ್ನು ಗಮನಿಸುತ್ತಾ ಹೆಜ್ಜೆ ಹಾಕಿದ. ಆನಂದ ವರ್ಷಣದಿಂದ ಚಿತ್ತ ಪ್ಲಾವಿತಗೊಂಡಿತು. ನಾನಾ ದಿಕ್ಕುಗಳಲ್ಲಿ, ನಾನಾ ರಮಣೀಯ ಸನ್ನಿವೇಶಗಳಲ್ಲಿ ತರಂಗಿತವಾಗುವ ಭಾವಲಹರಿಗಳಿಂದ ತನುಮನಗಳು ಪುಟಪುಟಿದುವು.

ಹೆದ್ದಾರಿಯನ್ನು ಹಿಡಿದು ಸ್ವಲ್ಪದೂರ ಹೋಗುವುದರೊಳಗಾಗಿ ಅದೇ ಬರ್ಚ್‌ವುಡ್ಡಿನ ಗೃಹಸ್ಥ ಹೆಗಲ ಮೇಲೆ ಕೋವಿಯನ್ನಿಟ್ಟುಕೊಂಡು ನಾಯಿಗಳೊಡನೆ ಇತ್ತಲೇ ಬರುತಿದ್ದಾನೆ. ಅವನು ಎಂದೂ ಹಾಗೆ ಬಂದವನಲ್ಲ. ಅವನು ಬೇಟೆಗೆ ಹೋದುದಾಗಲೀ ಗಾಳಿ ಸವಾರಿಗೆ ಹೋದುದಾಗಲೀ ಎಂದೂ ಇಲ್ಲ. ಮಡದಿ ಇದ್ದಾಗ ಕೆಲವೊಮ್ಮೆ ಹೊರಡುತಿದ್ದ....ಬಹುಶಃ ಆಕೆ ಸ್ವರ್ಗಸ್ಥಳಾದ ಮೇಲೆ ಹೀಗೆ ಕಾಲ್ನಡಿಗೆಯಲ್ಲಿ ಹೊರಟಿರಲಿಲ್ಲವೇನೋ.... ಇಂದಂತೂ ಆಶ್ಚರ್ಯಕರ ರೀತಿಯಲ್ಲಿ ಎದುರಾಗಿದ್ದಾನೆ. ಜಾನಿಯ ಅದೃಷ್ಟವೇ ಅದೃಷ್ಟ !

ವಿಲಿಯಂ ಆನಂದೋತ್ಸಾಹದಿಂದ ಪುಳಕಿತನಾದ. ಉತ್ಸಾಹದ ಝುರಿ ಹೃದಯ ಕುಂಡದಿಂದ ಉಕ್ಕಿ ನರನಾಡಿಗಳಲ್ಲಿ ಉನ್ಮತ್ತವೇಗದಿಂದ ಹರಿದಾಡಿತು. ಅಚ್ಚರಿಯ ವಿಭ್ರಮ ವೇಗದಲ್ಲಿ ಯೋಚಿಸಲೂ ಅವಕಾಶವಿಲ್ಲದಷ್ಟು ಬುದ್ಧಿ ಮಸುಕಾಯಿತು. ಮೆಲ್ಲನೆ ಪಿಸುಗುಟ್ಟಿದ "ಅದೋ ಅವನೇ!"

ಆತನನ್ನು ಇದುವರೆವಿಗೂ ಸರಿಯಾಗಿ ಗಮನಿಸಿರದ ವಿಲಿಯಂ ಚಕಿತ ಮೃಗಶಿಶುವಿನಂತೆ ನಿಟ್ಟಿಸಿನೋಡಿ ಆತನೊಡನೆ ಮಾತಾಡುವ ಚಪಲಕ್ಕೆ

ಸಜ್ಜಾಗತೊಡಗಿದ.

ಸುಮಾರು ಇಪ್ಪತ್ತು ಗಜಗಳಷ್ಟು ದೂರದಲ್ಲಿ ಪ್ರಶಸ್ತವಾದ ಹೆಜ್ಜೆಗಳ ಗಂಭೀರ ಧ್ವನಿ ಗಂಭೀರಸ್ವಭಾವಗಳ ಸಮುದಾಯದಿಂದ ಹರಿದು ಬಂದಂತೆ ರುದ್ರ ಗಂಭೀರವಾಗಿ ಕೇಳಿಸುತ್ತ ಹತ್ತಿರಹತ್ತಿರಕ್ಕೈತರುತಿತ್ತು ; ಕಾಂತಿಯುಕ್ತವಾದ ಕಂಗಳು ನೀಲ ಮಣಿಗಳನ್ನು ಹೊಂದಿಸಿದಂತೆ ಹೊಳೆ ಹೊಳೆಯುತ್ತಿವೆ ; ಮಾಟವಾಗಿ ಕತ್ತರಿಸಿದ ಗಡ್ಡ ಮೀಸೆಗಳು ; ನೋಡಿದ ಪ್ರಥಮ ನೋಟಕ್ಕೆ ಯಾರಾದರೂ ತಲೆಬಾಗಿ ಗೌರವಿಸುವಂತಹ ಭವ್ಯರೂಪವನ್ನು ಹೊತ್ತ ಉದ್ದಂಡ ದೇಹ ; ಆಜಾನು ಬಾಹು : ಹೊಂದಾವರೆಯ ಬಣ್ಣ....

ಇನ್ನು ಕೆಲವು ಕ್ಷಣಗಳೊಳಗಾಗಿ ಪರಸ್ಪರ ಸನಿಹಕ್ಕೈತಂದಾಗ ತರುಣರಿಬ್ಬರೂ ಏಕೀಭವಿಸಿದಂತೆ ಒಂದೇ ಬಾರಿಗೆ ವಂದನೆಯನ್ನರ್ಪಿಸಿದರು. “ಗುಡ್ ಈವ್ನಿಂಗ್” ವೃದ್ಧಮಹಾಶಯ ಪ್ರತಿನಮಿಸಿದ. ತುಂಟಿಗಳಂಚಿನಲ್ಲಿ ಸಣ್ಣ ತಿಳಿನಗು ಮೂಡಿ ಮಾಯವಾಯಿತು. ಒಡನೆ ತಾನೆ ತನ್ನ ಪರಿಚಯ ಮಾಡಿದ ಜಾನಿ- “ನಾನು ‘ಎಡಿನ್ ಬರೋ’ದಿಂದ ಬಂದ ಪ್ರವಾಸಿ. ನನಗೆ ಇಲ್ಲಿಯ ಫಾರಂ–ಗಳನ್ನೂ ಮಹಲುಗಳನ್ನೂ ನೋಡುವುದರಲ್ಲಿ ತುಂಬ ಆಸಕ್ತಿ.”

“ನೋಡು ! ಬೇಕಾದಂತೆ ನೋಡು !”

ವಿಲಿಯಂ ತನ್ನ ಪರಿಚಯವನ್ನು ಹೇಳಿಕೊಂಡ. ನಾನು ಸ್ಕ್ಯಾಂಡರ್ಲ್ಲಿಯ ನಿವಾಸಿ. ಈತ ನನ್ನ ಗೆಳೆಯ ಜಾನಿ.” ಮರುಕ್ಷಣದಲ್ಲೇ ಜಾನಿ ತನ್ನ ಬೇಡಿಕೆಯನ್ನು ಮುಂದಿಟ್ಟ- “ತಾವು ಕೋಪಿಸಿಕೊಳ್ಳುವುದಿಲ್ಲವಾದರೆ ತಮ್ಮ ಫಾರಂ ನೋಡಬೇಕೆನಿಸಿದೆ.”

“ನನ್ನದರಲ್ಲೇನುಂಟು ? ನಾನು ಅದಾವುದನ್ನೂ ತಲೆಗೆ ಹಚ್ಚಿಕೊಂಡಿಲ್ಲ.”

“ಇದ್ದದ್ದೇ ಸಾಕು.”

“ಆಗಬಹುದು ; ನಾಳೆ ಬೆಳಗ್ಗೆ ಬನ್ನಿ.”

“ನೀವು ನೀರ್ನ್ಕೋಳಿಗಾಗಿ ಹೊರಟದ್ದೀರಾ ?”

“ಹೌದು. ಲಂಡನ್ನಿಂದ ಕೋಳಿ ತರುವುದನ್ನು ಮರೆತು ಬಿಟ್ಟೆ.”

“ನಮ್ಮಲ್ಲಿ ನಾಲ್ಕಾರಿದೆ. ಇದರಲ್ಲೇ ಕೆಲವನ್ನು ತೆಗೆದುಕೊಳ್ಳಿ.”

ಎನ್ನುತ್ತ ಮುಂದೆ ಹಿಡಿದ ವಿಲಿಯಂ. ವೃದ್ಧ ಮಹಾಶಯ ಮುಗುಳು ನಗುತ್ತ ಅವುಗಳಲ್ಲಿ ಎರಡನ್ನು ತೆಗೆದುಕೊಂಡು 'ಥ್ಯಾಂಕ್ಸ್' ಎಂದ. ಮೂವರೂ ಹಾದಿಯ ನೇರಕ್ಕೆ ಹೆಜ್ಜೆ ಹಾಕಿದರು. ಹೆಚ್ಚು ಮಾತುಕತೆ ಯಿಲ್ಲದೆ ಹಾದಿ ಸಾಗಿತು. ಬರ್ಚ್‌ವುಡ್ ಗೇಟಿನೊಳಗೆ ಪದಾರ್ಪಣೆ ಮಾಡುವ ಮುನ್ನ "ಬಾಯ್!" ಎಂದಷ್ಟು ನುಡಿದು ಒಳಹೋದ ಅವನನ್ನು ಕುತೂಹಲ ತೃಷಿತಲೋಚನಗಳು ಮಿಟುಕಿಸದೆ ನಿಟ್ಟಿಸಿದುವು.

"ಪರವಾಗಿಲ್ಲ. ಇಲ್ಲಿ ನಾವೇ ಬರ್ಚ್ ವುಡ್–ಗೆ ಭೇಟಿ ನೀಡುವ ವೊಟ್ಟ ಮೊದಲಿಗರು!" ವಿಲಿಯಂ ಹರ್ಷೋನ್ಮತ್ತನಾಗಿ ವಿಜಯೋತ್ಸಾಹ ದಿಂದ ನುಡಿದ.

"ನೋಡು! ನಿನಗೇನೇ ಪರಿಚಯ ಮಾಡಿಸಲು ಅವಕಾಶ ಕೊಟ್ಟಿದ್ದಿ ದ್ದರೆ 'ಈತ ನನ್ನ ಗೆಳೆಯ' ಅಂದು ಮುಗಿಸಿ ಬಿಡುತ್ತಿದ್ದೆಯೋ ಏನೋ. ಅದರಿಂದಾಗಿಯೇ ನಾನು 'ಪ್ರವಾಸಿ' ಎಂದು ಹೇಳಿಕೊಂಡುದುದು. ನಾಳೆ ಆತನ ಭವಿಷ್ಯವನ್ನು ಕುರಿತು ಮಾತಾಡುವಂತೆ ಮಾತಾಡುತ್ತ ನನ್ನ ಅಭಿ ಲಾಷೆಯನ್ನು ಮುಂದಿಟ್ಟು ನಾಳೆಯೇ ನನ್ನ ಭವಿಷ್ಯವನ್ನು ನಿರ್ಧರಿಸುವೆ!"

"ಸ್ವಲ್ಪ ಎಚ್ಚರಿಕೆಯಿಂದಿರಪ್ಪಾ!"

"ನಯ-ವಿನಯಾದಿಗಳಲ್ಲೇ ನನ್ನ ಕಾರ್ಯಕ್ರಮ!"

ಇಬ್ಬರ ಮುಖಮಂಡಲಗಳೂ ಪ್ರಫುಲ್ಲವಾದುವು. ಆನಂದ-ಕುತೂಹಲ-ಸಂಭ್ರಮ-ಉತ್ಸಾಹ-ಹೆಬ್ಬಯಕೆಗಳಿಂದ ಮನೋಮಂದಿರವು ತುಂಬಿಹೋಯಿತು.

ಮರುದಿನ ಗಡಿಯಾರದ ಮುಳ್ಳು ಒಂಭತ್ತರ ಸಂಖ್ಯೆಯನ್ನು ದಾಟು ತ್ತಲೂ ಇಬ್ಬರೂ ಬರ್ಚ್ ವುಡ್ ಕಡೆ ಹೊರಟರು. ಗೇಟಿನ ಬಳಿ ಕಾದಿದ್ದ ದೈತ್ಯ ನಾಯಿಗಳನ್ನು ನಿವಾರಿಸಿ ಮುಂದುವರಿಯುವುದು ಸಾಧ್ಯವಾಗಲಿಲ್ಲ. ನಾಯಿಗಳ ಬೊಗಳುವಿಕೆಯನ್ನು ಕೇಳಿ ಹೊರಬಂದ ಗೃಹಸ್ಥನ ನೋಟ ಮೊದಲು ಗಡಿಯಾರದ ಮೇಲೆ ಹೊರಳಿ, ಅನಂತರ ತರುಣರೆಡೆಗೆ ಹರಿ ಯಿತು. ನಾಯಿಗಳನ್ನು ತಡೆಗಟ್ಟಿ ಅವುಗಳನ್ನು ಸಮಾಧಾನಗೊಳಿಸಿ ಅತಿಥಿ ಗಳನ್ನು ಬರಮಾಡಿಕೊಳ್ಳುವುದೂ ಸಹ ಪ್ರಯಾಸವೇ ಆಯಿತು. ವೃದ್ಧ ಮಹಾಶಯ ತನ್ನ ಪರಿಚಯವನ್ನು ತಾನೇ ಹೇಳಿಕೊಂಡ; "ನನ್ನನ್ನು

'ಮ್ಯಾಕ್ಸ್ ಮಿಲ್ಲರ್ ಕಾಲಿನ್' ಎಂದು ಕರೆಯುತ್ತಾರೆ. ನಾನೊಬ್ಬ...."

ಮುಂದೆ ಮಾತು ಹೊರಡದೆ ಅಷ್ಟಕ್ಕೆ ತುಂಡುಗಡಿಯಿತು, ಸುಪರಿಚಯ ಸರಣಿ.

ತರುಣರಿಬ್ಬರೂ ಜಗಲಿಗೆ ಹೆಜ್ಜೆಯಿಟ್ಟರು. ಪುರಾತನ ಬೌದ್ಧಿಕಸ್ತರದಲ್ಲಿ ಆವಿರ್ಭವಿಸಿದ ಮಹಲಿನ ಬಂಧುರ ಭವ್ಯತೆ ಮನಃಪ್ರಾಣಗಳನ್ನು ಒಮ್ಮಿಂದೊಮ್ಮೆಲೇ ಸೂರೆಗೊಂಡಿತು. ಆ ಪುರಾತನ ಮಹಲು ನೂತನ ಶೈಲಿ, ಪ್ರತಿಭೆ, ಸ್ವಚ್ಛತೆಗಳ ಉಗ್ರಾಣದಂತೆ ಶೋಭಿಸುತ್ತಿದೆ. ಜಾನಿ ಉಸಿರಿಡಿದು ಒಳ ಹೆಜ್ಜೆಯಿಟ್ಟ. ಏಕಾಂಗಿಯಾದರೂ ಅಂದಿನಂತೆಯೇ ಅಚ್ಚುಕಟ್ಟಾಗಿ ನಡೆಸಿಕೊಂಡು ಬಂದ ರೀತಿಯಂತೂ ಆಶ್ಚರ್ಯಕರವೇ ಸೈ. ಮಧ್ಯೆ ವಿಶಾಲವಾದ ಡ್ರಾಯಿಂಗ್ ರೂಮ್. ಹಳೆಯ ಕಾಲದ ಕೂಡುವ ಸುಪ್ಪತ್ತಿಗೆಗಳು. ವಿಕ್ಟೋರಿಯಾ ರಾಣಿಯ ಆಳೆತ್ತರದ ಭವ್ಯ ತೈಲ ಚಿತ್ರ. ಗೃಹಾಲಂಕಾರದ ಪರಿಕರಣಗಳ ಸುಂದರ ಜೋಡಣೆ. ಎಡ ಬಲಗಳಲ್ಲಿ ಅತ್ಯಂತ ವಿಶಾಲವಾದ ಕೊಠಡಿಗಳು. ಕಿಟಕಿ ಬಾಗಿಲುಗಳಿಗೆ ರೇಶಿಮೆಯ ಪರದೆಗಳು. ಸ್ವಚ್ಛವಾದ ನೆಲ. ಒಂದೊಂದೂ ನೂರು ಬಗೆಯ ಆಶ್ಚರ್ಯವನ್ನು ಮೂಡಿಸುವಂತಿವೆ. ಎಡಪಕ್ಕದ ಕೊಠಡಿಯಲ್ಲಿ ದೊಡ್ಡ ದೊಡ್ಡ ಬೀರುಗಳಲ್ಲಿ ಕಾಗದದ ಕಡತಗಳ ಜೋಡಣೆ. ಪುಸ್ತಕಗಳ ಶೇಖರಣೆ. ಎಲ್ಲವನ್ನೂ ಗಂಭೀರ ಮುದ್ರೆಯಿಂದ ತೋರುತಿದ್ದ ಗೃಹಸ್ಥ ಒಂದೆರಡು ಕಾಗದಗಳ ಕಡತವನ್ನು ಹೊರ ತೆರೆದು ತೋರುತ್ತ ನುಡಿದ "ಇಲ್ಲಿ ಕೀಟ್ಸ್ ಕವಿ ಕೆಲ ಕಾಲ ತಂಗಿದ್ದನೆಂದು ಹೇಳುತ್ತಾರೆ. ಇದು ಆತನ ಹಸ್ತಾಕ್ಷರ!"

"ಅಹಾ....!"

"ಅದರ ಬಗ್ಗೆ ನಿಜವಾದ ಮಾಹಿತಿ ಪಡೆಯಲು ಎಲ್ಲಾ ಕಡತಗಳನ್ನು ಪರಿಶೋಧಿಸಿದರೂ ಆತನ ಸಹಿ ದೊರೆಯಲಿಲ್ಲ. ಆದರೆ ಅಕ್ಷರಗಳು ಮಾತ್ರ ಆತನವೇ ಇರಬಹುದೆಂಬಷ್ಟು ಹೋಲಿಕೆ ಇದೆ. ಬಹುಶಃ ಇವು ಪ್ರಾರಂಭದಲ್ಲಿ ಬರೆದ ಕೃತಿಗಳಿದ್ದರೂ ಇರಬಹುದು. ಯಾವುದಕ್ಕೂ ತುದಿ ಬುಡ ಇಲ್ಲ. ಆದರೂ ಅವನ್ನು ಕಳೆಯಲು ಮನಸ್ಸು ಬರುವುದಿಲ್ಲ. ಈ ಮಹಲನ್ನು ವಿಕ್ಟೋರಿಯಾ ರಾಣಿ ಕಟ್ಟಿಸಿದಳೆಂದೂ ಇಲ್ಲಿ ಆಕೆ ಆಗಾಗ ವಿಶ್ರಾಂತಿಗಾಗಿ ಬಂದು ನೆಲಸುತಿದ್ದಳೆಂದೂ ಪ್ರತೀತಿ ಇದೆ. ಅದಕ್ಕೂ ಸಹ ಯಾವ ಪುರಾವೆ

ಗಳು ದೊರೆತಿರುವುದಿಲ್ಲ. ಇಲ್ಲಿರುವ ಆಕೆಯ ತೈಲ ಚಿತ್ರ ಆಕೆಯ ಕಾಲದ್ದೇ ಎಂದು ಹೇಳಲ್ಪಟ್ಟಿದೆ. ಆದರೆ ಅದೆಷ್ಟರ ಮಟ್ಟಿಗೆ ಸತ್ಯವೋ ಹೇಳುವುದು ಕಷ್ಟ."

ವಿಲಿಯಂ ಅಂದ "ಹೌದು. ಈ ವಿಚಾರಗಳು ಇಲ್ಲಿ ಎಲ್ಲರ ಬಾಯಿಯಲ್ಲೂ ಕೇಳಿ ಬರುತ್ತವೆ. ನಾನೂ ಸಹ ಕೇಳಿರುವೆ."

"ಇರಬಹುದು ಅಥವಾ ಇಲ್ಲದಿರಲೂಬಹುದು. ಅದರಿಂದ ಯಾರಿಗೂ ಬಾಧಕವಿಲ್ಲ." ಎನ್ನುತ್ತ ಕಾಲಿನ್ ಮಂದಹಾಸ ಬೀರಿದ.

ತರುಣರು ಭಾವಾವಿಷ್ಟರಾಗಿ ತಲೆದೂಗಿದರು. ನಿರಂತರ ವಜ್ರ ಮನೋಹರ ಶೋಭೆಗೆ ಆ ನೀಲವರ್ಣಾಚ್ಛಾದಿತ ಗೋಡೆಗಳೇ ಉಪಮಾನವೋ ಅಥವಾ ಶುಭ್ರ ಸ್ಫಟಿಕ ಸ್ವಚ್ಛತೆ ಉಪಮಾನವೋ ಎಂಬುದನ್ನು ಊಹಿಸುವುದೂ ಸಹ ಅಸಾಧ್ಯ.

ವೃದ್ಧ ಮಹಾಶಯ ಒಂದೊಂದನ್ನೂ ತೋರುವುದರೊಂದಿಗೆ ಅವುಗಳ ವಿವರಣೆಯನ್ನೂ ನೀಡುತ್ತಾ ಮುಂದುವರಿದ–ಪರ್ವತರಾಜ ಗಾಂಭೀರ್ಯದಿಂದ. ಅವನು ಅಷ್ಟು ಸ್ನೇಹ ಮೇದುರ ವಾತ್ಸಲ್ಯದೊಡನೆ ತಮ್ಮನ್ನು ಮಾತಾಡಿಸಿಯಾನೆಂದಾಗಲೀ ಇಂತಹ ಸಹಕಾರ ತೋರಿಯಾನೆಂದಾಗಲಿ ಭಾವಿಸಿರದ ವಿಲಿಯಂ ತಾನು ಯಾವುದೋ ಅನಿರ್ವಚನೀಯ ಸ್ವರ್ಗಧಾಮದಲ್ಲಿ ಸಂಚರಿಸುತ್ತಿರುವವನಂತೆ ಮುಗ್ಧಭಾವದಿಂದ ನಿಟ್ಟಿಸುತಿದ್ದ.

ಬಲ ಪಕ್ಕದಲ್ಲೊಂದು ಭವ್ಯ ಕೊಠಡಿ. ಅದರ ವಿಸ್ತೀರ್ಣವೂ ಸಹ ಗಣನೀಯವಾದುದೇ. ಗೋಡೆಯ ಮಗ್ಗುಲಲ್ಲಿದ್ದ ಸಾಲಾಗಿನ ಶೆಲ್ಫುಗಳಲ್ಲಿ ಸಾಲಾಗಿ ಜೋಡಿಸಿದ ಹಸುರು ವರ್ಣರಂಜಿತ ಪಿಂಗಾಣಿ ಭರಣಿಗಳು, ಇನ್ನೊಂದೆಡೆ ಬಿಗಿಯಾಗಿ ಬಿರಡೆ ಹಾಕಿದ ದ್ರಾವಕ ಭರಿತ ಶೀಶೆಗಳು, ಪಿಂಗಾಣಿಯ ಬಗೆ ಬಗೆಯ ಬಟ್ಟಲುಗಳು, ದ್ರಾವಕ, ಗಂಧಕ, ಚೂರ್ಣ, ಆಸಿಡ್, ಮೇಲಾಗಿ ಪ್ರಯೋಗ ಶಾಲೆಗೆ ಬೇಕಾದ ಪರಿಕರಣಗಳು, ಕುರ್ಚಿ ಮೇಜುಗಳು, ಫೈಲುಗಳ ಜೋಡಣೆ, ಬರೆಯುವ ಸಾಧನ, ಬರೆದು ಹೊಂದಿಸಿದ ದಸ್ತಕತ್ತುಗಳು....

ನೋಡು ನೋಡುತಿದ್ದಂತೆ ಇಬ್ಬರೂ ಡಂಗಾಗಿ ಮೂರ್ತಿವತ್ತಾಗಿ ನಿಂತರು. ಏನಾದರೂ ಕೇಳಬೇಕೆಂದರೆ ಬುದ್ಧಿಯೇ ಓಡದು. ಏನಿರಬಹುದು?

ಏನು ವಿಶೇಷ? ಎಂಬ ಪ್ರಶ್ನೆ ಮನಮಂಡಲವನ್ನೆಲ್ಲಾ ಮೇಘಾಚ್ಛಾದಿತ ಗಗನದಂತೆ ಆವರಿಸಿ ಬಿಟ್ಟಿದೆ. ಪ್ರಯತ್ನಿಸಿದರೂ ನಾಲಿಗೆ ಕದಲದು. ಪ್ರಥಮ ಮೇಘ ಘರ್ಜನೆಯಿಂದ ಕಂಗಾಲಾದ ಮೃಗಶಿಶುವಿನಂತೆ ನೋಟ ವೃದ್ಧ ಮಹಾಶಯನನ್ನು ನಿಟ್ಟಿಸಿತು. ಒಂದು ಘಳಿಗೆ ಗಂಭೀರವಾಗಿ ಯೋಚಿಸುತಿದ್ದು ನಂತರ ನುಡಿದ ಗೃಹಸ್ಥ "ಇದು ನನ್ನ ಪ್ರಯೋಗ ಶಾಲೆ. ನಾನು ಪೋರ್ಟನ್ ಡೌನ್ ಪ್ರಯೋಗ ಶಾಲೆಗೆ ಸಂಬಂಧ ಪಟ್ಟವನು. ಶತ್ರುಗಳ ಪ್ರಚಂಡ ಮಾರಕ ಶಕ್ತಿಯುಳ್ಳ ವಿಷಾನಿಲ ನಿರೋಧಕ ಔಷಧಿಯನ್ನು ಕಂಡು ಹಿಡಿಯಲು ಸತತ ಶ್ರಮಿಸುತ್ತಿರುವೆ. ಒಂದು ವೇಳೆ ನಾನು ಇದರಲ್ಲಿ ಯಶಸ್ವಿಯಾದರೆ ಮಾನವ ಕುಲದ ಸನ್ಮಿತ್ರನಾಗುವೆ....ಸಕಲ ಜೀವ ಕೋಟಿಯ ಆಜೀವ ಬಂಧುವಾಗುವೆ....

"೧೯೨೫ರ ಜಿನೀವಾ ಒಪ್ಪಂದವೇ ಆಗಲೀ, ಅಂತರ್ರಾಷ್ಟ್ರೀಯ ಒಪ್ಪಂದಗಳೇ ಆಗಲೀ, ಬೃಹದ್ ರಾಷ್ಟ್ರಗಳನ್ನು ಹತೋಟಿಯಲ್ಲಿಡುವುದು ಅಸಾಧ್ಯ. ಆ ಒಪ್ಪಂದಗಳ ಪ್ರಕಾರ, ಇಂದು ಯಾವುದೇ ರಾಷ್ಟ್ರ ವಿಷಾನಿಲ ರೋಗಾಣು ಸಮರೋಪಕರಣಗಳನ್ನು ಪ್ರಯೋಗಿಸುವುದು ನಿಷಿದ್ಧ; ಆದರೆ ಅದರ ಮೇಲಿನ ಹತೋಟಿ ಯಾರಿಗಿದೆ? ಬೃಹದ್ ರಾಷ್ಟ್ರಗಳು ಆತ್ಮ ರಕ್ಷಣೆಯ ಸೋಗಿನಲ್ಲಿ ಒಂದಕ್ಕಿಂತ ಮತ್ತೊಂದು ಉಗ್ರವಾದವುಗಳನ್ನು ತಯಾರಿಸುತ್ತಲೇ ಇವೆ. ಈ ಅತೀವ ಸ್ಪರ್ಧೆ ಶಕ್ತಿ ಸಾಮರ್ಥ್ಯಗಳಿಗೆ ದ್ಯೋತಕ. ಅಂದಮೇಲೆ ಅಗ್ನಿಯನ್ನು ಅಗ್ನಿಯಿಂದಲೇ ಆರಿಸುವ ಪ್ರಯೋಗಕ್ಕಿಂತ ನೀರಿನಿಂದ ನಂದಿಸುವ ಪ್ರಯೋಗ ಶ್ರೇಷ್ಠವಲ್ಲವೇ?"

ಹಾ.....!

ಹೃದಯ ಬನದಲ್ಲಿ ಉದಿಸಿದ್ದ ಹುಚ್ಚು ಆಸೆಯ ಕಿಚ್ಚು ಬೃಹದ್ ಮೇಘ ವರ್ಷಿತ ಶೈತ್ಯವಾರಿಯಿಂದ ನಂದಿ ಹೋಯಿತು. ಆ ಮಹಾನುಭಾವನಿಗೆ ಹೇಗೆ ವಂದಿಸಬೇಕೋ ಇನ್ನೆಂತು ಅಭಿನಂದಿಸಬೇಕೋ ಹೊಳೆಯಲಿಲ್ಲ. ಒಂದು ಘಳಿಗೆ ತಬ್ಬಿಬ್ಬಾಗಿ ಸಾವರಿಸಿಕೊಳ್ಳುತ್ತ, ದೇವಪುರುಷನ ಪರಮ ಪವಿತ್ರ ಹಸ್ತಗಳಂತೆ ಕಣ್ಗೆಸೆವ ಆ ಅಭೂವತಪೂರ್ವ ಹಸ್ತಗಳನ್ನು ಅದುಮಿ ಹಿಡಿದು ಸಂದರ್ಭೋಚಿತವಾಗಿ ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸುವಾಗ ಹೃದಯ ಸಮುದ್ರ ಆನಂದದ ಹೆದ್ದೆರೆಗಳಿಂದ ತುಂಬಿ ತುಯ್ಯಾಡುತಿತ್ತು.

"ಅಭಿನಂದನೆ!"

"ಥ್ಯಾಂಕ್ಯೂ!"

"ಬಹಳ ಅಭಿನಂದನೆಗಳು!"

"ಥ್ಯಾಂಕ್ಯೂ!"

ಜಾನಿ ಭಾವಪೂರ್ಣಲೋಚನಗಳನ್ನರಳಿಸಿ ಅತ್ಯಂತ ವಿನಮ್ರತೆಯಿಂದ "ನಿಮಗೇನಾದರೂ 'ಅಸಿಸ್ಟ್' ಬೇಕಾಗಿದ್ದಲ್ಲಿ ನಾನು ಮಾಡಲು ಸಿದ್ಧ...."

ಒಡನೆ ವಿಲ್ಲಿಯೂ ಹಾಗೇ ಅಂದ.

"ಅಂತಹ ಅಗತ್ಯವೇನೂ ಬೀಳುವುದಿಲ್ಲ. ಬಿದ್ದರೆ...."

"ನೀವು ಗೃಹಕೃತ್ಯಕ್ಕೂ ಯಾರನ್ನೂ ನೇಮಿಸಿಕೊಳ್ಳದೆ ಸ್ವತಃ ಮಾಡಿಕೊಂಡು ಪ್ರಯೋಗ ನಡೆಸುವುದು ಕಷ್ಟವಲ್ಲವೇ?"

ವ್ಯಾಯಾಮಕ್ಕೋಸ್ಕರ ಮನೆಗೆಲಸ ಮಾಡುವೆ. ಅದು ಮುಗಿಯು ವಷ್ಟರಲ್ಲಿ ಒಲೆಯಮೇಲೆ ಖಾದ್ಯಗಳು ತಯಾರಾಗುತ್ತವೆ. ಅದೆಲ್ಲ ಕೇವಲ ಅರ್ಧಗಂಟೆಯ ಕೆಲಸ. ಲಂಡನ್ ಮತ್ತು ಪೋರ್ಟಿನ್ ಡೌನ್ ಕಡೆ ಹೋದಾಗ ನನಗೆ ಬೇಕಾದ ವಸ್ತುಗಳನ್ನು ತಂದು ಫ್ರಿಜ್‌ನಲ್ಲಿ ದಾಸ್ತಾನು ಇಟ್ಟು ಕೊಳ್ಳುವೆ. ಗೆಳೆತನಕ್ಕಾಗಿ ನಾಯಿಗಳಿವೆ. ಬೆಂಗಾವಲಾಗಿ ನನ್ನ ಮನೆ ಯೊಡತಿ ಇದ್ದಾಳೆ. ಉಳಿದ ಹೊತ್ತನ್ನು ಪ್ರಯೋಗಶಾಲೆಗೆ ಮೀಸಲಿಡುವೆ." ಎನ್ನುತ್ತ ಮೇಜಿನ ಮೇಲೆ ವಿರಾಜಿಸಿದ್ದ ಮಡದಿಯ ಚಿತ್ರಪಟದೆಡೆಗೆ ಕಣ್ಣು ಹೊರಳಿಸಿದ. ಚೌಕಟ್ಟಿನಲ್ಲಿ ಬಂದಿಯಾದ ಚಿತ್ರವಾಸಿನೀ ಶೋಭೆಯಂತೆ ಕಂಗೊಳಿಸುತಿದ್ದ ಮಡದಿ ಲೋಕದಿಂದ ಲೋಕಾಂತರಕ್ಕೆ ಅದಾವುದೋ ದಿವ್ಯ ಸಂದೇಶವನ್ನು ಒಯ್ದಿದ್ದು ಇಂದು ನಾಳೆಯೊಳಗಾಗಿ ಹಿಮ್ಮರಳಿಯಾಳೇನೋ ಎಂಬಂತಿದೆ....

ತರುಣರು ಮರವಟ್ಟು ನಿಂತರು. ಕಾಲಿನ್ ಮಹಾಶಯ ದೃಢಕಂಠ ದಿಂದ ಮುಂದುವರಿದ. "So....ಇನ್ನು ಹೇಳಬೇಕಾದುದು ಏನೂ ಉಳಿ ದಿಲ್ಲ. ಬಹಳ ವಂದನೆಗಳು ತರುಣರೇ!"

"ದೇವರು ನಿಮಗೆ ಯಶಸ್ಸನ್ನು ನೀಡಲಿ."

"ಬಹಳ ವಂದನೆಗಳು!"

"ಭಗವಂತ ನಿಮಗೆ ಒಳ್ಳೆಯದನ್ನು ಮಾಡಲಿ!"

"ತುಂಬ ವಂದನೆಗಳು! Bye....Bye!"

ತರುಣರು ಹೊರಟರು.

ಅವರನ್ನು ನಾಯಿಗಳು ಛೇಡಿಸದಂತೆ ಬಾಗಿಲವರೆವಿಗೂ ಬಂದು ಬೀಳ್ಕೊಟ್ಟು ವೃದ್ಧಮಹಾಶಯ ನಿಷ್ಕ್ರಮಿಸಿದ. ಬಾಗಿಲ ಬಳಿ ನಿಂತ ಭಯಂಕರ ನಾಯಿಗಳು ಮಿಂಚಿನಂತಹ ನೋಟದಿಂದ ಇತ್ತಲೇ ನೋಡು ತಿದ್ದುವು. ಮುಂದೆ ಹೆಜ್ಜೆ ಯಿಡುತ್ತ ಒಮ್ಮೆ ಹಿಂದಿರುಗಿ ನೋಡಿದಾಗ ಮಹಲಿನ ಬಾಲ್ಕನಿಯಲ್ಲಿ ತೂಗು ಬಿದ್ದ ನಾಮ ಫಲಕ ಕಣ್ಣಿಗೆ ಬಿತ್ತು "ಕಾಲಿನ್ ವಿಲ."

ಜಾನಿ ಅಚ್ಚರಿಯಿಂದ ಕೇಳಿದ "ಇದೇನಪ್ಪಾ, ನೀನು 'ಬರ್ಚ್ ವುಡ್' ಎಂದು ಕರೆಯುತಿದ್ದೆ ?"

ಒಂದು ಕ್ಷಣ ಯೋಚಿಸಿ ಮುಗುಳು ನುಗುತ್ತ—"ಬಹುಶಃ ಈ ಬರ್ಚ್ ಮರಗಳಿಂದ ಆ ಹೆಸರು ಬಂತೋ ಏನೋ, ಮರಗಳಿಂದಾವೃತವಾದ ಮಹಲಿನ ನಾಮ ಫಲಕ ರಸ್ತೆಗಾಗಲೀ ಎಡಬಲಗಳಲ್ಲಿರುವವರಿಗಾಗಲೀ ಕಾಣಿ ಸಿದರಷ್ಟೇ ? ಹೊರಗಿನವರಾರೂ ಈ ಕಡೆ ಬಂದೂ ಇಲ್ಲ, ನೋಡಿಯೂ ಇಲ್ಲ."

ಇಬ್ಬರ ಮುಖದಲ್ಲೂ ಮಂದಹಾಸ ಮಿನುಗಿತು.

ಜಾನಿ ಒಂದು ಘಳಿಗೆ ಯೋಚಿಸಿ ಗಂಭೀರ ಮುದ್ರೆಯಿಂದ ನುಡಿದ "ವಿಜ್ಞಾನಿ ಪ್ರಯೋಗ ಶಾಲೆಯನ್ನು ತೋರಿದ್ದು ಕೊನೆಗೆ. ಅದರೊಳಗಾಗಿ ನಾನೇನಾದರೂ ಹುಚ್ಚು ಆಸೆಯಿಂದ "ನಿಮ್ಮ ಫಾರಂ ನಾರುವಿರಾ ?" ಎಂದು ಕೇಳಿದ್ದರೆ ಹಗ್ಗ ಕಿತ್ತ ಗೂಳಿಯಂತಾಗುತ್ತಿದ್ದ !"

"ನಿಜ ; ಎಂಥ ಅಪಹಾಸ್ಯಕರ !"

"ದೇವರೇ ನನ್ನ ತವಕವನ್ನು ತಡೆ ಹಿಡಿದು ಉಪಕಾರ ಮಾಡಿದ."

ವಿಲಿಯಂ ಮಾತಾಡದೆ ತಲೆದೂಗಿದ. ಮನದಾಗಸದಲ್ಲಿ ಸೆಳೆಮಿಂಚು ವಿಭ್ರಮದಿಂದ ಸುಳಿದುಹೋದಂತೆ ಭಾಸವಾಯಿತು.

ಆಶ್ಚರ್ಯ ತೃಷಿತ ನೋಟವನ್ನು ಪುನಃ ಅತ್ತ ಹೊರಳಿಸಿದಾಗ 'ಕಾಲಿನ್ ವಿಲ' ಬರ್ಚ್ ಮರಗಳ ನೆಲೆಯಲ್ಲಿ ಮರೆಯಾಗಿತ್ತು.

"ಆ ಮರಗಳಾದರೂ ಕಡಿಮೆ ಇವೆಯೇನು ? 'ಬರ್ಚ್ ವುಡ್' ಎಂದು ಕರೆದಿರುವುದು ತಪ್ಪೇನಲ್ಲ." ಎಂದ ಜಾನಿ.

ಕಾಲ್ನಡಿಗೆ ಸದ್ದಿಲ್ಲದೆ ಸಾಗುತಿತ್ತು.

ಹೆಜ್ಜೆ ಹೆಜ್ಜೆಗೂ ಕಾಲಿನ್ ವಿಲ ದೂರದೂರವಾದರೂ ನಾಯಿಗಳ ಬೊಗಳುವಿಕೆಯ ರುದ್ರ ಗಂಭೀರ ಧ್ವನಿ ಕಿವಿಗಳಿಗೆ ಬೀಳುತ್ತಲೇ ಇತ್ತು.

— o —

# 'ರೀತಾ'

"ಅಂಕಲ್....!"

"ಏನಮ್ಮಾ?"

"ಇಲ್ಲಿ ನೋಡಿ ಅಂಕಲ್... ಹಿಹಿಹಿಹೀ !"

ಆ ಸಮ್ಮೋಹನಕರವಾದ ನಗು ತನುಮನಗಳನ್ನು ಮುಚ್ಚಿತು.

ಯಾವುದನ್ನು ವಿಷಾದದಿಂದ ಬಣ್ಣಿಸಬೇಕೋ ಅದನ್ನು ಸಮಾಧಾನ ಪೂರ್ವಕವಾಗಿ ನಗುನಗುತ್ತಾ ಆತ್ಮಾನಂದ ಪಡೆದ ಮಹಾನುಭೂತಿಯಂತೆ ಸಮರಸವಾಗಿ ಬಣ್ಣಿಸುವುದು ಅವಳ ಸ್ವಭಾವ. ಇನ್ನೂ ಚಿಕ್ಕವಳು ಹದಿನಾಲ್ಕರ ಮುಗುದೆ, ಎಂದು ಆವಾಗೆಲ್ಲಾ ಭಾವಿಸಿಕೊಂಡಿದ್ದೆ. ಆದರೆ ಈ ಸಲ ಬಂದಾಗಲೂ ಅವಳ ಚೆಂದುಟಿಗಳಲ್ಲಿ ಮಿನುಗುವ ಅದೇ ಅಮಾಯಕ ನಗುವನ್ನು ಕಂಡು ನಾನು ಬೆಪ್ಪಾದೆ. ಅವಳು ತೋರಿದೆಡೆಗೆ ಕಣ್ಣುಗಳು ಹೊರಳಿದಾಗ ನನಗೆ ಬಹಳೇ ಖೇದವೆನಿಸಿತು. ಪ್ರತಿ ಹೇಳಲಾಗಲೀ ಪ್ರತಿ ಕ್ರಿಯೆ ವ್ಯಕ್ತಪಡಿಸಲಾಗಲೀ ಮನಸ್ಸಾಗಲಿಲ್ಲ. ಹಾಗೇ ಸುಮ್ಮನಾದೆ. ಈ ನವೀನ ಯುಗಧರ್ಮವನ್ನು ಕುರಿತು ಚಿಂತಿಸಿತು ಮನಸ್ಸು; ತರ್ಕಿಸಿತು ಬುದ್ಧಿ ; ಭಾವಿಸಿತು ಆತ್ಮ.

ಆಕೆ ಕಲಿಯುತ್ತಿದ್ದುದು ಕಾನ್ವೆಂಟಿನಲ್ಲಿ. ಈಗ ಸೇರಿರುವುದೂ ಸಹ ಅಂತಹ ಕಾಲೇಜನ್ನೇ. ಅದು ಸಂಪೂರ್ಣ ಕ್ರಿಶ್ಚಿಯನ್ ವಲಯ. ಆದರೆ ಅಲ್ಲಿ ದಯೆಗೇನೂ ಕೊರತೆ ಇಲ್ಲವಲ್ಲಾ, ಇವಳೇಕೆ ಹೀಗೆ ಎಂಬುದೇ ಆಶ್ಚರ್ಯ. ಆನುವಂಶಿಕವಾಗಿ ಬಂದ ಗುಣವೂ ಅಲ್ಲ. ತಂದೆ ಕೋಮಲ ಸಿಂಗ್ ಬಹಳ ಕೋಮಲ, ಮೃದು ಭಾಷಿ, ಹಿತಮಿತವಾಗಿ ನಡೆಯಬಲ್ಲವ....ತಾಯಿ ದೇವಿಕಾ ಸುಹಾಸಿಣಿಯೂ ಹೌದು; ಸುಭಾಷಿಣಿಯೂ ಸಹ. ಅಂದಿಂದಿಗೂ ಅವಳಲ್ಲಿ ಹಗಲು-ರಾತ್ರಿಗಳಿಗೆ ಸ್ವಚ್ಛಂದವಾಗಿ ಹೊಂದಿಕೊಳ್ಳುವಂತಹ ಅಮೋಘವಾದ ಗುಣವಿದೆ. ಅಂತಹವರ ಮಗಳ ರೀತಿಯೇ ಅರ್ಥವಾಗು ವುದಿಲ್ಲ.

ಅವಳ ಜನ್ಮನಾಮ 'ಗೀತಾ.' ಅವಳು ಹದಿನಾಲ್ಕು ವರ್ಷಗಳ ಸೊಂಪನ್ನು ಸವಿದಮೇಲೆ 'ಗೀ' ಅಕ್ಷರಕ್ಕೆ ಕತ್ತರಿ ಪ್ರಯೋಗಮಾಡಿ 'ಗೀ' ಸ್ಥಾನದಲ್ಲಿ

'ರೀ' ಪ್ರತಿಷ್ಠಾಪನೆ ಮಾಡಿ 'ರೀತಾ' ಎಂದು ಹೆಸರನ್ನು ಮಾರ್ಪಡಿಸಿ ಕೊಂಡಳು. 'ರೀತಾ ಕೋಮಲ್' ಎಂದು ಶಾಲೆಯಲ್ಲಿ ಕರೆಯಲ್ಪಡುತ್ತಾಳೆ. ತಂದೆತಾಯಿಯರು ಶ್ರೀಕೃಷ್ಣ ಪರಮಾತ್ಮನ ಪರಮ ಭಕ್ತರು. ಅವರಲ್ಲಿ ಪ್ರತಿನಿತ್ಯವೂ ಶ್ರೀಕೃಷ್ಣ ಪರಮಾತ್ಮನಿಗೆ ರಾಜೋಪಚಾರ ನಡೆಯುತ್ತದೆ. ಆತನ ದಯೆಯಿಂದಲೇ ಉದಿಸಿದ ಹೆಣ್ಣೆಂಬುದು ಅವರ ಪೂರ್ಣ ನಂಬಿಕೆ. ಪ್ರತಿದಿನವೂ ಪರಮ ಭಕ್ತಿಯಿಂದ ಗೀತಾ ಪಾರಾಯಣ ನಡೆಸುವ ಅವರು ಯಾವುದನ್ನು ಪವಿತ್ರ ನಾಮವೆಂದು ಭಾವಿಸಿ, ಪ್ರೇಮಾದರಗೌರವಗಳಿಂದ ಒಂದು ಶುಭದಿವಸದಲ್ಲಿ, ಒಂದು ಶುಭಮುಹೂರ್ತದಲ್ಲಿ, ಅನೇಕ ಗಣ್ಯರ ಸಮಕ್ಷಮದಲ್ಲಿ ಸಂತೋಷದಿಂದ ನಾಮಕರಣ ಮಾಡಿ ಅದ್ದೂರಿಯ ಔತಣವನ್ನು ನೀಡಿದ್ದರೋ ಅಂತಹ ಪವಿತ್ರನಾಮವು ಅರ್ಥರಹಿತವೆಂದು ಅಳಿಸಿ ಹಾಕಲ್ಪಟ್ಟಿತು ಈ ನವಾಗತ ತರುಣಿಯಿಂದ.

ಕೋಮಲ್‌ಸಿಂಗ್ ಅತ್ಯುನ್ನತ ಹುದ್ದೆಯಲ್ಲಿ ಪ್ರತಿಷ್ಠಿತ ವ್ಯಕ್ತಿ. ಅವನ ಸೊಸೈಟಿಯೂ ಸಹ ಉತ್ತಮತರದ್ದೆ. ಅವರಲ್ಲಿ ಹೇಳಿಕೊಳ್ಳುವಂತಹ ಯಾವ ಲೋಪದೋಷವೂ ಕಾಣಿಸುವುದಿಲ್ಲ. ಅವನಿಗೆ ಮಗಳ ರೀತಿ ನೀತಿಯಲ್ಲಿ ತಲೆ ಹಾಕುವ ಸ್ವಭಾವವೂ ಇಲ್ಲ. ಅಷ್ಟಾಗಿ ಹಚ್ಚಿಕೊಳ್ಳುವವನೂ ಅಲ್ಲ. ಆದರೆ ಜನ್ಮಪಿತ್ತ ತಾಯಿಯ ರೀತಿಯೇ ಬೇರೆ. ಬಾಳಿನ ಕುಡಿ ಅವಳಿಂದಲೇ ಒಡೆಯಬೇಕು. ಮನೆತನಕ್ಕೆ ಅವಳೇ ಶೋಭೆ. ಅವಳೇ ಕಸ್ತೂರಿ. ಅವಳೇ ಜೀವನ ಜ್ಯೋತಿ. ವಿದ್ಯೆ ಬುದ್ಧಿ ಕಲೆ ಕೈಗಾರಿಕೆಗಳಲ್ಲೂ ಅವಳು ನಿಷ್ಣಾತಳಿರ ಬೇಕು ಎಂಬ ಉದಾತ್ತ ಭಾವನೆಗಳಿಂದ ಭವ್ಯ ಸೌಧವನ್ನು ಕಟ್ಟುವ ಭಾವಜೀವಿ.

ನನಗೂ ಅವರಿಗೂ ಇರುವ ಸಂಬಂಧವನ್ನೂ ಸಹ ಹೇಳಿಕೊಳ್ಳುವುದು ಉಚಿತ.

ನಾನೂ ಕೋಮಲಸಿಂಗನೂ ಒಂದೇ ಕಾಲೇಜಿನಲ್ಲಿ ಓದಿದವರು. ಹಾಗೆಂದು ಕಾಲೇಜಿನಿಂದ ಹೊರ ಬಂದಮೇಲೆ ಒಬ್ಬರಿಗೊಬ್ಬರು 'ಗುಡ್ ಬೈ' ಹೇಳಿದವರಲ್ಲ. ಬೆಂಗಳೂರಿಗೆ ನಾನು ಬಂದಾಗಲೆಲ್ಲಾ ಇಳಿಯುವುದು ಅವ ನಲ್ಲೇ. ಅವನು ಮದರಾಸಿಗೆ ಬಂದರೂ ಅಷ್ಟೆ. ನಮ್ಮ ನಮ್ಮ ಸಂಸಾರದಲ್ಲೂ

ಅಂತಹದೇ ಬಾಂಧವ್ಯತೆ ಬೆಳೆದಿದೆ. ಯಾವುದೇ ಪ್ರಸಂಗದಲ್ಲೂ ಅಥವಾ ಇನ್ನಾವುದೇ ಸಂದರ್ಭದಲ್ಲೂ ನಮನಮಗೆ ಟೆಲಿಫೋನು ಸಂಪರ್ಕ ನೀಡುತ್ತದೆ. ಆತ್ಮೀಯ-ಅನಾತ್ಮೀಯ ಸಂಗತಿಗಳೆಲ್ಲಾ ಅಲ್ಲಿ ಕರಗುತ್ತವೆ. ಸಂತಸದ ಸುಗ್ಗಿಯಲ್ಲೂ ದುಃಖದ ಕಹಿಯಲ್ಲೂ ನಾವು ಸದಾ ಸಹ ಭಾಗಿಗಳು.

ಆದರೂ ...ಒಂದು ವಿಚಾರದಲ್ಲಿ ನನ್ನ ನರತಂತುಗಳು 'ನೀನು ಸೋತೆ' ಎಂದೇ ಹೇಳುತ್ತಿವೆ.

ಅವಳು ಓದುವೆಡೆ 'ಕೊ ಎಜುಕೇಶನ್' ಇದೆ ಅಲ್ಲಿ ಹುಡುಗ ಹುಡುಗಿಯರು ಸ್ವಚ್ಛಂದವಾಗಿ ಬೆರೆಯುತ್ತಾರೆ. ಆಟ ಪಾಠಾದಿಗಳಲ್ಲಿಂತು ಸಹಭಾಗಿಗಳೋ ಅಂತೆಯೇ ಪ್ರವಾಸ ಪ್ರಹಸನ ಪ್ರವಚನಾದಿಗಳಲ್ಲಿಯೂ ಸಹಭಾಗಿಗಳು, ಆದುದರಿಂದಲೇ ಹೀಗೆ....ಉಹೂ. ಅಲ್ಲವೇ ಅಲ್ಲ ; ಅದರ ಛಾಯೆ ಎನ್ನಲೂ ಆರೆ. ಆಕೆ ನಯ ವಿನಯಗಳ ಸಂಜೀವಿನಿಯೂ ಹೌದು. ಗಂಡುತನದ ಸೋಂಕೇ ಅವಳಿಗಿಲ್ಲ. ಮೃದು ಮಧುರ ತರಹದ ಮುಗ್ಧ ಹೆಣ್ಣು ಎಂದರೆ ಅತಿಶಯೋಕ್ತಿಯಾಗಲಾರದು.

ನಾಲ್ಕು ವರ್ಷಗಳ ಕೆಳಗೆ ನನಗೆ ದೆಹಲಿಗೆ ವರ್ಗವಾದಾಗ ಅಲ್ಲಿಗೆ ಹೋಗುವ ಮುನ್ನ ಇಲ್ಲಿಗೆ ಬಂದು ಒಂದುವಾರ ಕಾಲ ಇದ್ದು ಹೋಗಿದ್ದೆ. ಅನಂತರ ಇದುವರೆವಿಗೆ ನನಗೆ ಬೆಂಗಳೂರಿಗೆ ಬರಲಾಗಲಿಲ್ಲ. ಕೋಮಲ್‌ಸಿಂಗ್ ಅನೇಕ ಬಾರಿ ದೆಹಲಿಗೆ ಬಂದಿದ್ದ. ಆತ ವ್ಯಾವಹಾರಿಕವಾಗಿ ಮಾತಾಡಿದನೇ ಹೊರತು ಮಗಳ ಭವಿಷ್ಯದ ಬಗ್ಗೆಯಾಗಲೀ, ಆಕೆಯ ನಡೆ ನುಡಿಗಳ ಬಗ್ಗೆಯಾಗಲೀ ಒಂದು ಮಾತನ್ನೂ ಆಡಲಿಲ್ಲವೆಂಬುದನ್ನು ಖಚಿತವಾಗಿ ಹೇಳಬಲ್ಲೆ. ಆತ ಮನಸ್ಸಿಗೆ ಯಾವ ಚಿಂತೆಯನ್ನೂ ಸಹ ಹಚ್ಚಿಕೊಂಡಂತೆ ಕಾಣಿಸಲಿಲ್ಲ.

ಆ ಸಂದರ್ಭದಲಿ ಒಂದುವಾರ ಇದ್ದಾಗ ಬಹಳ ಮಟ್ಟಿಗೆ ಅವಳನ್ನು ಕಾನ್ವೆಂಟಿಗೆ ಬಿಡಲು ಮತ್ತು ಕರೆತರಲು ನಾನೇ ಹೋಗುತಿದ್ದೆ. ಅವಳಿಗೂ ಸಹ ನನ್ನೊಂದಿಗೆ ಹೋಗಿ ಬರಲು ತುಂಬ ಇಷ್ಟ. ದಾರಿಯುದ್ದಕ್ಕೂ ಅವಳ ಮಾತಿನ ವೈಖರಿ ರಸಪೂರ್ಣವಾಗಿ, ರಾಗಪೂರ್ಣವಾಗಿ, ಕಲಕಲರವಪೂರ್ಣವಾಗಿ ಹರಿಯತೊಡಗಿತೆಂದರೆ ಅದೊಂದು ನಿರ್ಝರ ಝರಿಯೇ ಸೈ. ಎಲ್ಲಾ ಮಕ್ಕಳ ಮನದಲ್ಲೂ ಚಿಮ್ಮುವಂತಹ ಉತ್ಸಾಹ, ಆಸೆ, ಆಕಾಂಕ್ಷೆಗಳು ಅವಳ ಮನದಲ್ಲೂ ಚಿಮ್ಮುತ್ತವೆ. ಯಾವುದೇ ಸಣ್ಣ ಪುಟ್ಟ ಘಟನೆಗಳನ್ನು ಸುಗ್ಗಿಯ ಪಾಯಸ ಉಣ್ಣುವವರಂತೆ ಆನಂದೋತ್ಸಾಹದಿಂದ ಇನಿದನಿಯಲ್ಲಿ

ಅವಳು ಬಣ್ಣಿಸುತ್ತಿದ್ದರೆ ನಾನು ಆನಂದದ ಮೂಟೆಯಾಗಿ ಸವಿಯುತ್ತಿದ್ದೆ. ಆದರೂ ನಾನವಳನ್ನು ಅರ್ಥ ಮಾಡಿಕೊಳ್ಳಲಾಗಲಿಲ್ಲ. ಎಂಬುದೂ ಸಹ ಆಶ್ಚರ್ಯ....ಪರಮಾಶ್ಚರ್ಯ....

ಆಕೆ ಎಲ್ಲರಂತಲ್ಲ. ಹೋಗಿ ಬರುವ ಹಾದಿಯಲ್ಲಿ ಎದುರಾಗುವ ಹುಡುಗರಿಗೂ ಹುಡುಗಿಯರಿಗೂ ಯಾವ ಬೇಧ ಭಾವವಿಲ್ಲದೆ 'ಹಾಯ್' ಎನ್ನುವುದು ಅವಳ ಸ್ವಭಾವ. ತುಟಿಗಳಲ್ಲಿ ನಲಿಯುವ ಆ ಅಮಾಯಕ ನಗೆ, ಚೆಂಗೆನ್ನೆಗಳಲ್ಲಿ ಚಿಮ್ಮುವ ಸುರಮ್ಯ ರಂಗು, ಕಣ್ಣುಗಳಲ್ಲಿ ಹೊಳೆಯುವ ದಿವ್ಯ ಪ್ರಭೆ ಯಾವುದರಲ್ಲೂ ಕಳಂಕದ ಸೊಂಕೇ ಇಲ್ಲ.

ದೀದಿ ಒಮ್ಮೆಯಾದರೂ ಸಹ ಅವಳ ಬಗ್ಗೆ ಕಳವಳವನ್ನು ತುಂಬಿಕೊಂಡುದುದಾಗಲೀ ವ್ಯಕ್ತಪಡಿಸಿದುದಾಗಲೀ ನಾನು ಕಾಣಲಿಲ್ಲ; ಕೇಳಲಿಲ್ಲ. ಅವಳೊಂದಿಗೆ ಒಮ್ಮೆ ನಾನೇ ಏನೋ ಹೇಳಬೇಕೆಂದು ಪ್ರಯತ್ನಿಸಿ ಸುಮ್ಮನಾದೆ....ಏನು ಹೇಳಬೇಕೋ ಹೊಳೆಯಲಿಲ್ಲ.

ಅಂದು.

ಕಾರನ್ನು ನಾನೇ ನಡೆಸುವವನಿದ್ದೆ. ನೀಲಿ ಸಮವಸ್ತ್ರದ ಸಾವಿರಾರು ಬಾಲಿಕೆಯರೊಡನೆ ನಗುನಗುತ್ತಾ ಅವಳು ಕಾನ್ವೆಂಟಿನಿಂದ ಹೊರಬಿದ್ದಳು. ಸಮವಸ್ತ್ರಧಾರಿಣಿಯರೂ ಸಮವಯಸ್ಕರೂ ಸಮಭಾವನೆಯುಳ್ಳವರೂ ಆದ ನೂರಾರು ಮಂದಿ ಹುಡುಗಿಯರಲ್ಲಿ ನಮ್ಮ ಹುಡುಗಿಯನ್ನು ಹುಡುಕಿ ತೆಗೆಯುವುದೂ ಸಹ ಕಷ್ಟವೇ. ಇಂಜಿನ್ ನಿಲ್ಲಿಸದೆ ಹಿಂದಿರುಗಿಸಿಕೊಳ್ಳುವುದರಲ್ಲಿದ್ದ ನನಗೆ ಆ ಹಾಲ್ಗೆನ್ನೆಯ ಹಸುಮಕ್ಕಳನ್ನು ನೋಡುವುದರಲ್ಲಿ ಉತ್ಸಾಹ ಮೂಡಿತು. ಹಾಗೆ ಸ್ವಿಚ್ ಕೀ ತೆಗೆದೆ. ಇಂಜಿನ್ ಸದ್ದಡಗಿ ಸ್ತಬ್ಧವಾಯಿತು. ಚಂಗೆನ್ನೆಯ ಚಲುವೆಯರು ನಗೆಮೊಗದಿಂದ ಕೂಡಿ, ಮಾತುಗಳ ಸವಿಯಲ್ಲಿ ಪೂರ್ಣ ನಿಮಗ್ನರಾಗಿರುವುದನ್ನು ನೋಡುವಾಗ ಹೃದಯ ಸಾನಂದದಿಂದ ಮಿಡಿಯಿತು. ಇನ್ನೂ ಅಸ್ವಾತಂತ್ರ್ಯದ ಕಹಿಯನ್ನರಿಯದ ಶಾಲೆಯ ಜೀವನದಲ್ಲಿ ಸುಖ ಸಂತಸಗಳನ್ನು ಆತ್ಮ ದೇಹಗಳಂತೆ ಪಡೆದುಕೊಂಡ ಹಸುಮಕ್ಕಳು ಎನಿಸಿನಾಗ ನನ್ನ ದಿವ್ಯ ಸ್ಮರಣೆ ಗತಕಾಲಕ್ಕೆ ಹಕ್ಕಿಯಂತೆ ಹಾರಿತು....ನಮ್ಮ ಶಾಲಾ ದಿನಗಳಿಗೂ ಇವರ ಶಾಲಾದಿನಗಳಿಗೂ ಅರ್ಥಾತ್ ಸಂಬಂಧವಿಲ್ಲ. ನಾವೂ ಓದುತ್ತಿದ್ದೆವು.....ಹುಟ್ಟಿದ ತಪ್ಪಿಗಾಗಿ.

ಗುರುವಿಗೆ ಮನ್ನಣೆ ಕೊಡುವುದಾಗಲೀ ಗುರಿಗಾಗಿ ಲಕ್ಷ್ಯವಿಡುವುದಾಗಲೀ ನಮ್ಮ ಎದೆಯ ನಿಘಂಟಿನಲ್ಲಿ ಸೇರಿರಲಿಲ್ಲ. ಶೃಂಖಲಾಬದ್ಧ ಶಾಲಾ ಜೀವನ ದಲ್ಲಿ ಸಂತಸದ ಸವಿಯನ್ನುಣ್ಣುವುದಕ್ಕಿಂತ ಕಷ್ಟದ ಕಹಿಯನ್ನುಂಡುದುದೇ ಹೆಚ್ಚು. ಶಾಲೆಗೆ ಹೋಗುವುದಿಲ್ಲವೆಂಬ ರಂಪಾಟ. ಹೋದರೂ ಎಲ್ಲಾದರೂ ಅಲೆದು ಬರುವ ಮನೋಭಾವ; ಕಾಲಧರ್ಮದೊಂದಿಗೆ ಬೆರೆತ ವಯೋಧರ್ಮ. ಅಪಾರವಾದ ಗೆಳೆತನವನ್ನು ಸಂಪಾದಿಸಿದರೂ ಆತ್ಮೀಯತೆಯನ್ನು ಪಡೆದು ಕೊಳ್ಳಲಾಗದ ಅಸ್ಥಿಮಿತ ಮನಸ್ಸು. ತಂದೆ ತಾಯಿ ಮತ್ತು ಉಪಾಧ್ಯಾ ಯರು ಓದಿಸುತಿದ್ದುದರಿಂದ ನಾವು ಓದುತಿದ್ದೆವು....ಯೋಚನೆ ಬಂದೊಡ ನೆಯೇ ಆ ಶ್ರೀಹೀನ ಪೂರ್ವಸ್ಮೃತಿ ನಗು ತರಿಸಿತು.

"ಓ! ಅಂಕಲ್! ನೀವು ನೀವೇ ನಗುತಿದ್ದಿರೇಕೆ?"

ನಾನು ನಸು ಬೆಚ್ಚಿದೆ. ಆದರೂ ಮರುಕ್ಷಣದಲ್ಲಿ ಅಂದೆ "ನಿನ್ನನ್ನು ನೋಡಿಯೇ ನಕ್ಕದ್ದು!"

"ಅಹಹಹ! ನನಗೆಲ್ಲಾ ಗೊತ್ತು! ಆಗಿನಿಂದಲೂ ನಾನು ನಿಮ್ಮನ್ನು ಗಮನಿಸುತ್ತಿದ್ದೇನೆ. ನೀವು ನನ್ನನ್ನು ನೋಡಲೇ ಇಲ್ಲ!"

ಚೆಲುವೇ ಮೈವೆತ್ತು ಬಂದಂತೆ ನಿಂತ ಅವಳು ಮಂದಹಾಸ ಬೀರಿದಳು. ಮುಖದ ಸುತ್ತುಮುತ್ತು ಹರಡಿ ನಿಂತ ಅಲೆಗೂದಲು ಗಾಳಿಗೆ ಸಿಕ್ಕಿ ಮುಖಕ್ಕೆ ಅಡರಿ ಬಂತು. ರಂಗು ಬಳಿದ ತುದಿ ಬೆರಳಿನಿಂದ ಹಿಂದಕ್ಕೆ ತಳ್ಳಿ ಕಾಮನ ಬಿಲ್ಲಿ ನಂತಹ ಹುಬ್ಬುಗಳನ್ನು ಏರಿಸಿ–"ಅಂಕಲ್! ನಿಮಗೆ ಬೇಸರವಿಲ್ಲದಿದ್ದರೆ...."

"ಏನು ಹೇಳು."

"ಸೀತಾ ಮನೆಯಲ್ಲಿ ಇಂದು 'Function' ಇದೆಯಂತೆ. ಅವರ ಮನೆಗೊಂದು ಲಿಫ್ಟ್ ಕೊಡುವುದುಂಟು....ಏನು ಹೇಳಿ?"

"ಆಗಬಹುದು.....ಕರೆ."

ನಾನು ಸ್ವಿಚ್ ಕೀಯನ್ನು ತಿರುಗಿಸಿ ಕಾರನ್ನು ಹಿಂದಿರುಗಿಸಿಕೊಂಡು ಅವಳಿಗೆ ಮುಂದಣ ಕದವನ್ನು ತೆರೆದೆ. ಹಿಂದಣ ಸೀಟಿಗೆ ಒಬ್ಬ ಬಾಲಕ ಹತ್ತಿದ. ಆಗ 'ಸೀತಾ' ಎಂದುದರಿಂದ ಹುಡುಗಿಯೇ ಇರಬೇಕೆಂದು ಭಾವಿಸಿದ್ದ ನಾನು ಅಚ್ಚರಿಯಿಂದ ಹಿಂತಿರುಗಿ ನೋಡಿದೆ.

"ನೀನಲ್ಲಿ ಕುಳಿತುಕೊಳ್ಳುತ್ತಿ ತಾನೆ? OK?" ಅವಳ ಕಂಠ ಮೊಳಗಿತು.

"ಓ....! ಆಗಬಹುದು !"

"ನಾನು ಕಾರು ನಡೆಸುವುದನ್ನು ಅಭ್ಯಾಸ ಮಾಡುವುದಿದೆ. ಇಲ್ಲೆ ಕುಳಿತರೆ ಅಂಕಲ್ ನಡೆಸುವುದನ್ನು ನೋಡಿಕೊಳ್ಳಬಹುದು."

"O. K !"

ರೀತಾ ನನ್ನೊಂದಿಗೆ ಕುಳಿತು ಕದವನ್ನು ಸರಿಯಾಗಿ ಮುಚ್ಚಿಕೊಳ್ಳುತ್ತ ಅವನ ಪರಿಚಯ ಮಾಡಿಸಿದಳು. "ಇವನು ಮಾಧವರಾಯರ ಮಗ, ಸೀತಾ ರಾಮು. ನಮ್ಮ ಕ್ಲಾಸಿನಲೆಲ್ಲಾ **Most Mischivous Boy !** ಹಿಹಿಹಿ !"

"ಓ....ಹಾಗೋ ?"

"ಇಲ್ಲ....ರೀ, ಅವಳೇ ಹಾಗೇ !"

"ನಿಮ್ಮ ಮನೆ ಎಲ್ಲಿ ?

"ರಾಜಾಜಿ ನಗರ...."

ಓ....ದೇವರೇ ! ಏನಿಲ್ಲೆಂದರೂ ಎಂಟು ಮೈಲಿ, ನನ್ನ ನೋಟ ಅವಳೆಡೆಗೆ ಹರಿಯಿತು. ರಸ್ತೆಯ ಪಕ್ಕದಲ್ಲಿ ನಡೆದುಹೋಗುತ್ತಿರುವ ಇತರ ಬಾಲಕ ಬಾಲಕಿಯರೆಡೆಗೆ ಅವಳ ಗಮನ ಹರಿದಿದ್ದು 'ಹಾಯ್' 'ಬಾಯ್' ಗಳ ವಿನಿಯೋಗ ನಡೆಯುತಿತ್ತು. ಪರಸ್ಪರ ಸುಹಾಸ ಪ್ರತಿಹಾಸಗಳ ವಿನಿಮಯವೂ ನಡೆದುವು. ನಾನು ಕೇಳಿದೆ,

"ನಿಮ್ಮ ಮನೆಯಲ್ಲಿ ಎಂತಹ Function "

"ಹೇಳಿಕೊಳ್ಳುವಂತಹ ಹೆಚ್ಚಿನದೇನೂ ಇಲ್ಲ. ನನ್ನ ಕೊನೆಯ ತಮ್ಮನಿಗೆ ಕೂದಲು ತೆಗೆಸುತ್ತಾರೆ."

"ಅಂಕಲ್ ! ಕೂದಲು ತೆಗೆಸುವ ಕ್ರಮಕ್ಕೂ ಇವನು ಬೇಕು. ಏನು ಜನವೋ....ಏನು ಪದ್ಧತಿಯೋ ? ಇಷ್ಟಕ್ಕೂ ಈ ಹುಡುಗರು ಮಣಿ ಯುತ್ತಾರಲ್ಲ, ಅದು ನೋಡಿ !"

ನಾನು ಮಾತಾಡದೆ ಮುಗುಳುನಕ್ಕೆ.

ಬಾಲಕ ಬಲ ರಸ್ತೆಗೆ ತಿರುಗಿಕೊಳ್ಳಲು ಸೂಚನೆ ನೀಡಿದ.

ರೀತಾ ಮೋಹಕ ನಗೆ ಬೀರಿ ಮುಂದುವರಿದಳು "ಅಂಕಲ್ ? ನಾನಂತೂ ನಮ್ಮ ಯಾವ ಹಳೆಯ ವ್ಯವಹಾರವನ್ನೂ ಹಚ್ಚಿಕೊಂಡಿಲ್ಲ.

ಧವಳಗಿರಿಯನ್ನೇರುವುದೊಂದೇ ನನ್ನ ಗುರಿ !"

"ಧವಳಗಿರಿಯನ್ನೇರಬೇಕಾದರೆ ಹಳೆಯ ದಾರಿಯೇ ಉತ್ತಮ ಪಥ!"

O ! My Lord !

"ಏಕಮ್ಮ, ಅಂಥಾದ್ದೇನು ?"

"ನೀವೇ ಯೋಚಿಸಿ ನೋಡಿ ಅಂಕಲ್ !"

ಸೀತಾರಾಮು ಮನೆಯ ದಾರಿಯನ್ನು ತಿಳಿದುಕೊಳ್ಳುವುದರಲ್ಲಿದ್ದ ನಾನು ಉತ್ತರಿಸಲಿಲ್ಲ. ರೀತಾ ಇನಿದನಿಯಲ್ಲಿ ಮುಂದುವರಿದಳು "ಅಂಕಲ್! ಮಿಲಿಟರಿ ಕ್ಷೇತ್ರದಲ್ಲಿರುವ ನಿಮಗೂ ಈ ಸಿವಿಲ್ ವ್ಯವಹಾರಗಳು ಹಿಡಿಸುವುದಂತೂ ಬಹಳ ಆಶ್ಚರ್ಯ."

ನಾನು ಮಂದಹಾಸ ಬೀರಿದೆ. ಹುಡುಗ ಕಾರಿನಿಂದ ಇಳಿದು 'ಥ್ಯಾಂಕ್ಸ್' ಹೇಳಿದ. ರೀತಳ ಮುಗುಳುನಗೆ -'ಹಾಯ್' ಇನಿದನಿ ಬೀಳ್ಕೊಟ್ಟಿತು. ಕಾರನ್ನು 'ರಿವರ್ಸ್' ಮಾಡಿಕೊಂಡನಂತರ ಕೇಳಿದೆ "ಅವನು ನಿನ್ನ ಕ್ಲಾಸೆ?"

"ಹೌದು.....ಅವನು ಓದುವವನಲ್ಲ. ಯಾರಾದರೂ ಓದಿಸಬೇಕು !"

"ನೀನು ಓದಿಸುತ್ತೀಯೇನು ?"

"ಸದ್ಯ, ನನ್ನದು ನಾನು ನೋಡಿಕೊಂಡರೆ ಸಾಕು." ಅಲಕ್ಷ್ಯದಿಂದ ನುಡಿದಳು ಅವಳು. ಅಲ್ಲಿಗೆ ಆ ವ್ಯವಹಾರ ಕೊನೆಗೊಂಡಿತು. ಅವಳನ್ನು ಪೂರ್ಣ ಲಕ್ಷ್ಯವಿಟ್ಟು ನೋಡಿರುವೆ. ಆದರೂ ನನ್ನ ಎದೆಯ ಮಿಡಿತದ ಸಂಜ್ಞೆ ಸಂಕೇತಗಳನ್ನು ಜಾಗರೂಕತೆಯಿಂದ ಆಲೈಸಿದರೆ "ಇಲ್ಲ....ಇಲ್ಲ. ನೀನವಳನ್ನು ಅರ್ಥಮಾಡಿಕೊಳ್ಳಲೇ ಇಲ್ಲ" ಎಂದೇ ಹೇಳುತ್ತದೆ.

"ಅಂಕಲ್, ನಿಮಗೆಷ್ಟೋ ಅನುಭವವಿದೆ. ಆದರೂ ಸಹ ಏನೋ ಒಂದು ರೀತಿ, ನನಗಂತೂ ಇದೆಲ್ಲಾ ಅರ್ಥವಾಗುವುದಿಲ್ಲ."

"ಏನು ಹೇಳು ?"

"ನಿಮಗೆ ದೇಶವಿದೇಶಗಳ ವ್ಯವಹಾರ ಗೊತ್ತು. ಸಂಸ್ಕಾರ ಗೊತ್ತು. ಆದರೂ ಸಹ ಧವಳಗಿರಿಯನ್ನೇರಬೇಕಾದರೆ ಹಳೆಯ ದಾರಿಯೇ ಸುಗಮ ಪಥ ಎಂದು ಬಿಟ್ಟಿರಿ !"

"ಅಲ್ಲದೇ ಏನು ? ಯೋಚಿಸಿ ನೋಡು. ಧವಳಗಿರಿಗೆ ಹೊಸದಾರಿ ನಿರ್ಮಾಣವಾಗುವ ಹೊತ್ತಿಗೆ ನಮ್ಮ ಆಯುಸ್ಸೇ ಮುಗಿದು ಹೋಗುತ್ತದೆ.

ಅದಕ್ಕಿಂತ ಇದ್ದ ದಾರಿಯನ್ನೇ ಹಿಡಿಯುವುದು ಲೇಸು ಮಗೂ !"

"ಅಂದರೆ ಹಳೆಯ ರೀತಿ ನೀತಿಗಳಿಗೆ 'ಅಂಟಿಕೊಂಡಿರಿ' ಎಂದು ನಿಮ್ಮ ಉಪದೇಶ....?"

"ಹಾಗಂತಲ್ಲ. ಹಾಸಿಗೆ ಇದ್ದಷ್ಟು ಕಾಲ ಚಾಚು ಎಂದು."

"ಅದೂ ಸಹ ಅತ್ಯಂತ ಹಳೆಯ ವಾದ ಅಂಕಲ್ !"

"ಹೆದ್ದಾರಿಗೆ ಕಾಲಿಡುವ ಮುನ್ನ ನಿಂತು ಹೋಗಬೇಕು ಮಗೂ. ಈಗ ನೋಡು, ಈ ಕಾರು ನಿಲ್ಲದೆ ಮುನ್ನುಗ್ಗಿದರೆ ಏಟು ತಿನ್ನಬೇಕಾಗುತ್ತದೆ. ಮನುಷ್ಯನ ಬಾಳೂ ಅಷ್ಟೆ. ಎಚ್ಚರಿಕೆಯಿಂದ ಮುಂದಡಿ ಇಡದೆ ಹೋದಲ್ಲಿ ಮುಗ್ಗರಿಸಬೇಕಾಗುತ್ತದೆ."

"ಅಪ್ಪ-ಅಮ್ಮ ಅನ್ನುವುದೂ ಸಹ ಹಾಗೆಯೇ. ನಿಮ್ಮದೆಲ್ಲಾ ಬಹಳ ಸ್ಲೋಕೋಚ್ !"

ನಾನು ಮುಗುಳು ನಕ್ಕೆ.

"ಅಂಕಲ್....!"

ಮಾತನ್ನು ಅಷ್ಟಕ್ಕೆ ತುಂಡುಗಡಿದು ಏನನ್ನೋ ಯೋಚಿಸುತ್ತಾ ಸ್ವಲ್ಪ ಹೊತ್ತು ಹಾಗೇ ಕುಳಿತುಕೊಂಡಳು. ಮುಖಭಾವ ಗಂಭೀರ ಶಾಂತಿಯಿಂದ ಕೂಡಿತ್ತು. ಮಿಂಚಿನ ನೋಟವನ್ನು ಹೊರ ಚೆಲ್ಲಿ ಭಾವಾವಿಷ್ಟಳಾದುದರಿಂದ ಮಾತು ಹೊರಡಲಿಲ್ಲವೇನೋ.....

"ಏನು ಹೇಳಮ್ಮಾ?"

"ಏನೋ ಮನಸ್ಸಿಗೆ ಬಂತು. ಅದನ್ನೇ ಯೋಚಿಸುತಿದ್ದೆ. ಕಳೆದ ವರ್ಷ ಮೇರಿ ತಂದೆ ತೀರಿಕೊಂಡರು. ಅದೇ ಈಚೆಗೆ ಸುಧಾ ತಾಯಿ ತೀರಿಕೊಂಡದ್ದು ನಿಮಗೆ ಗೊತ್ತಿದೆಯಷ್ಟೆ? ಆಗ ಅವರು ನಡೆಸಿದ ತಿಥಿ ಕರ್ಮಾಚರಣೆಯನ್ನು ನೆನೆಸಿಕೊಂಡರೆ ಏನೆನ್ನಬೇಕೋ ಹೊಳೆಯುವುದಿಲ್ಲ, ಅಂಕಲ್ ! ಸಮಾಧಿಗೆ ತಿಂಡಿ-ತೀರ್ಥ ಹಾಲು-ತುಪ್ಪ ಹಣ್ಣು-ಕಾಯಿಗಳ ಅರ್ಪಣೆ, ಸಾವಿರಾರು ಮಂದಿಗೆ ಲಾಡು ಪಾಯಸಗಳ ಸಂತರ್ಪಣೆ, ಅಷ್ಟೇ ಅಲ್ಲ ; ಈಗಲೂ ಅವರಲ್ಲಿ ಪ್ರತಿ ತಿಂಗಳೂ ಸತ್ತವರ ಹೆಸರಿನಲ್ಲಿ ಚಿರೋಟಿ ಹಬ್ಬ. ಹೆಸರಿಗೆ ನೈವೇದ್ಯ. ಮಾಡುವುದು ಸ್ವಾಹಾ! ಇದಕ್ಕೇನೆನ್ನುತ್ತೀರಿ ? ಇವನ್ನೆಲ್ಲಾ ಇನ್ನೂ ಎಷ್ಟು ಕಾಲ ನಡೆಸಿಕೊಂಡು ಹೋಗು, ಎನ್ನುವಿರಿ; ಹೇಳಿ ಅಂಕಲ್?"

"ಗತಿಸಿದವರ ಆತ್ಮ ಶಾಂತಿಗಾಗಿ ಮಗೂ !"

"ನೀವು ಸ್ವಲ್ಪ ಆಳವಾಗಿ ಯೋಚಿಸಿನೋಡಿ.....ನಾವು ಉಣ್ಣುವುದರಿಂದ ಅವರ ಆತ್ಮಕ್ಕೆ ಶಾಂತಿ ಲಭಿಸುವುದೇ ?"

"ಲಭಿಸುತ್ತದೆಯೇ ಇಲ್ಲವೇ ಎಂಬುದನ್ನು ಹೇಳುವುದು ಕಷ್ಟ. ಇವು ಬಹಳ ಕಾಲದಿಂದ ನಡೆದು ಬಂದ ಪದ್ಧತಿಗಳು. ಇಷ್ಟವುಳ್ಳವರು ಆಚರಿಸಬಹುದು. ಬೇಡದವರು ಬಿಡಬಹುದು."

"ಸತ್ತಾಗಲೂ ಗಲಾಟೆ, ಗದ್ದಲ, ತಮಟೆ, ವಾದ್ಯ ದೇವರಿಗೇ ಪ್ರೀತಿ!"

ನಾನು ಉತ್ತರಿಸುವ ಮೊದಲೇ ಅವಳು ಮುಂದುವರಿದಳು "ಅದೇ ಮೇರಿ ತಂದೆ ಸತ್ತಾಗ ಸ್ವಚ್ಛ–ಗಂಭೀರ–Pin–Drop Silence !"

"ಕಾಲ ಕ್ರಮೇಣ ನಮ್ಮಲ್ಲೂ ಬರುತ್ತೆ, ಬಿಡು. ಮುಖ್ಯವಾಗಿ ಜನ ಬುದ್ಧಿವಂತರಾಗಬೇಕು."

"ಓ ! ಸರಿ ಹೋಯ್ತು ! ನೀವೇ ಒಂದು ಶತಮಾನಕ್ಕೂ ಹಿಂದಿದ್ದೀರಿ! ಇನ್ನು ಜನ ನಿಮಗಿಂತ ನೂರರಷ್ಟು ಬುದ್ಧಿವಂತರಾಗಬೇಕು !!" ಎಂದು ಹಾಸ್ಯ ವಾಣಿಯನ್ನು ಅವಳು ಹರಿಸಿದಾಗ ನಗುವಿನಲೆ ತುಂಬಿ ಹರಿಯಿತು. ಮತ್ತೆ ಅವಳು ಮುಂದುವರಿದಳು "ವಿದೇಶೀಯರು ಸಮಾಧಿಯ ಮೇಲೆ ಪುಷ್ಪಗುಚ್ಛ ಅರ್ಪಿಸುತ್ತಾರೆ. ಆದೆಷ್ಟು ಗಂಭೀರ....ಎಷ್ಟು ಸ್ವಚ್ಛ ?"

ನಾನು 'ಹೌದು' ಎಂಬಂತೆ ತಲೆದೂಗಿದೆ.

ನಾವು ಮನೆ ಮುಟ್ಟಿದಾಗ ನಾಲ್ಕುವರೆ ಗಂಟೆ. ಕೋಮಲ್ ಸಿಂಗ್ ಮೇಜಿನ ಮುಂದೆ ಮಂಡಿಸಿದ್ದರೂ ಚಹ ಕುಡಿಯದೆ ನಮಗಾಗಿ ಕಾದಿದ್ದ. ಅವನು ಹೊತ್ತಾದುದೇಕೆಂದು ಕೇಳದಿದ್ದುದರಿಂದ ನಮಗೆ ಹೇಳುವ ಪ್ರಸಂಗ ಸಹ ಬೀಳಲಿಲ್ಲ. ಸದ್ದಿಲ್ಲದ ಶಾಂತ ಸಾಮ್ರಾಜ್ಯದಲ್ಲಿ ಕಿಲಕಿಲ ನಗೆಯ ಮಧುರ ಮೇಳದಲ್ಲಿ ಪೂರ್ವ ಸ್ಮೃತಿಯೊಡನೆ ಚಹಪಾನವು ನಡೆಯಿತು.

ಮರುದಿನ ಬೆಳಿಗ್ಗೆ ಪ್ರಾತರ್ವಿಧಿಗಳನ್ನು ಮುಗಿಸಿದವನೇ ಅವಳ ಕೊಠಡಿಗೆ ಕಾಲಿಟ್ಟೆ. ನಿಲುವುಗನ್ನಡಿಯ ಮುಂದೆ ನಿಂತು ನವುರಾದ ಕೂದಲನ್ನು ಅಂದವಾಗಿ ತಿದ್ದುತಿದ್ದ ಅವಳು ಮನಮೋಹಕ ನಗೆ ಬೀರಿ–"ಅಂಕಲ್! ನನಗೊಂದು ಲಿಫ್ಟ್ !"

"ತಯಾರಿದ್ದೀಯಾ ?"

"ಓ....ಇನ್ನೇನು, ಐದೇ ನಿಮಿಷ !"

ನುಡಿದಂತೆಯೇ ನಡೆದಳು ಅವಳು.

ಎಳೆಯ ಕೈಗಳಲ್ಲಿ ಹೊರಲಾರದಷ್ಟು ಪುಸ್ತಕಗಳ ಹೊರೆ, ಶಾಲೆಯ ನೀಲಿ ಸಮವಸ್ತ್ರ, ರಾತ್ರಿಯ ವಿಶ್ರಾಂತಿಯು ನೀಡಿದ ಸುಮನೋಹರ ಖಳೆ, ಬಾಲ್ಯದ ಹುರುಪು, ಕಲಿಯುವ ಉತ್ಸಾಹ ಇಂತಿಂಥಹ ಹಲವಾರು ಗುಣಗಳ ಗಣಿಯಾಗಿ ಚಕಚಕ ನಡೆದು ಬಂದ ಅವಳು ನಾನು ಕಾರನ್ನು ಶೆಡ್ಡಿನಿಂದ ಹೊರ ತೆಗೆಯುವುದರೊಳಗಾಗಿ ಪುಸ್ತಕಗಳನ್ನು ಕಾರಿನಲ್ಲಿಟ್ಟು ಗೇಟನ್ನು ವಿಶಾಲವಾಗಿ ತೆರೆದಳು. ಅವರಿಗೆ ಕಾರೂ ಇದೆ. ಡ್ರೈವರೂ ಇದ್ದಾನೆ. ಆಳು-ಕಾಳು ಎಲ್ಲ ಇದ್ದಾರೆ. ಆದರೆ ಅವಳ ಮೈಯ್ಯಲ್ಲಿರುವ ಹುರುಪು ಎಲ್ಲವನ್ನೂ ಅವಳಿಂದಲೇ ಮಾಡಿಸುತ್ತದೆ. ಕಾರು ರಸ್ತೆಗೆ ಇಳಿಯುತ್ತಲೂ ಗೇಟು ಮುಚ್ಚಿ ಕೊಳ್ಳುತ್ತಿದ್ದ ಅವಳು—"ಪ್ಲೀಸ್, ಒಂದು ನಿಮಿಷ ಅಂಕಲ್ !"

ಮೃಣಾಳವನ್ನಣಕಿಸುವ ಕೈಯೆತ್ತಿ ಹಿಡಿದು ಒಂದು ಬೆರಳನ್ನು ತೋರಿ ನಲ್ಮೆಯಿಂದ ಕೇಳಿಕೊಂಡಳು. ಮುಖಭಾವ ನೂರ್ಮಡಿಯ ಉತ್ಸಾಹ ದಿಂದ ಕೂಡಿ ಖಳೆಯೇರಿತು.

ನಾನು ಸ್ವಿಚ್ ಕೀ ತೆಗೆದೆ. ದೂರದಲ್ಲಿ ಶಾಲಾ ಹುಡುಗಿಯರು ಓಡಿ ಬರುತಿದ್ದುದು ಕಾರಿನ ಹಿಂಭಾಗದ ಕನ್ನಡಿಯಲ್ಲಿ ಕಾಣಿಸಿತು. ಹಲವಾರು ಸಮವಸ್ತ್ರಧಾರಿಣಿಯರು ಒಟ್ಟುಗೂಡಿದರು. ಕಲಕಲರವ ಕಿವಿಗಳನ್ನು ತುಂಬಿತು. ರೀತಾ ಎರಡು ಬಾಗಿಲುಗಳನ್ನು ಹರವಾಗಿ ತೆಗೆದು ಗೆಳತಿಯ ರನ್ನು ಆಹ್ವಾನಿಸಿದಳು. ಆರು ಮಂದಿ ಕೂಡಬಹುದಾದ ತಾವಿನಲ್ಲಿ ಪುಸ್ತಕ ಗಳ ಹೊರೆಯ ಸಹಿತ ಹತ್ತು-ಹನ್ನೆರಡು ಮಂದಿ ತುಂಬಿದರು. ಯಾವ ವಿಚಾರವೋ ಏನು ಕತೆಯೋ ನನಗೊಂದೂ ಅರ್ಥವಾಗಲಿಲ್ಲ, ಮಾತಿನ ಮೊರೆತ ಒಂದೇ ಸಮನೆ ಕಿವಿಯ ಮೇಲೆ ಬೀಳುತಿತ್ತು. ಹಾದಿ ಕಳೆದು ಕಾರು ಶಾಲೆಯ ಬಾಗಿಲಿನಲ್ಲಿ ನಿಂತಿತು. ಅಲ್ಲಿ ಕಲೆತ ನೂರಾರು ಸಮವಸ್ತ್ರ ಧಾರಿಣಿಯರ ಮಧ್ಯೆ ನಿಂತ ರೀತಾ ಅಂದಳು,

"ಪ್ಲೀಸ್, ನಾಲ್ಕು ಗಂಟೆಗೆ ಸರಿಯಾಗಿ ಬನ್ನಿ ಅಂಕಲ್ ?"

ದೈವಸೃಷ್ಟಿಯ ಆ ಸಮ್ಮೋಹನ ರೂಪು ಜಿಗಿದು ಶಾಲೆಯ ಒಳಗೆ ಹೋಗುವವರೆಗೂ ಈ ನೋಟ ಸಿಟ್ಟಿಸಿತು. ನಾನು ಸತ್ವರಹಿತನಂತೆ ಹಿಂದಿರುಗಿದೆ. ಕಾರು ಯಾಂತ್ರಿಕವಾಗಿ ಓಡಿತು. ಕಟ್ಟಿಗೆಯಂತಹ ಈ ದೇಹ

ನಿರಾಂತಕವಾಗಿ ಉಸಿರಾಡುವುದನ್ನೂ ಸಹ ಯಾಂತ್ರಿಕವಾಗಿ ಗಮನಿಸಿದೆ.

ಬಹುಶಃ,

ಅಂದು ರವಿವಾರವಿದ್ದಿರಬಹುದು. ಅವರ ಅಡಿಗೆಯುವ ರಜೆ ತೆಗೆದು ಕೊಂಡಿದ್ದ. ದೀದಿ ಇದ್ದಕ್ಕಿದ್ದಂತೆ ಅಸ್ವಸ್ಥಗೊಂಡರು. ಅಡಿಗೆ ಮನೆಯ ವ್ಯವಸ್ಥೆ ಸ್ತಬ್ಧವಾಯಿತು. ರೀತಾ ಲಂಗದ ಸಾಲು ನಿರಿಗಳನ್ನು ಚಿಮ್ಮುತ್ತಾ ಒಳ ಬಂದಳು. ಮುಖದಲ್ಲಿ ಅಕಳಂಕ ಭಾವ, ಆಕರ್ಷಕ ನಗು, ಮನ ಮೋಹಕ ನೋಟ, ಮಿಂಚಿನ ಉತ್ಸಾಹಗಳು ಮೂಡಣದಲ್ಲಿ ಮೂಡುವ ಮುಂಬೆಳಕಿನಂತೆ ನಲಿಯುತ್ತಿದ್ದುವು. ಕೋಮಲ್‌ಸಿಂಗ್ ಕೇಳಿದ, "ಹೋಟಲಿಗೆ ಹೋಗಿ ವ್ಯವಸ್ಥೆ ಮಾಡಿ ಬರೋಣವೇ ?"

"ಇದೇನು ಮಹಾ! ಬಿಡಿ....ಅಪ್ಪಾಜಿ !"

ಹುಡುಗಿ ಬೀರುವಿನಿಂದ ಬ್ರೆಡ್ ತಂದು ಬಿಸಿಮಾಡಿ ಮೊಟ್ಟೆ ಆಮ್ಲೆಟ್ ಮಾಡಿ ಮುಂದಿಟ್ಟಳು. ಚಹಕ್ಕೆ ಬದಲಾಗಿ ಕೋಕೊ ತಯಾರಾಯಿತು. ಕೋಮಲ್‌ಸಿಂಗ್ ಹೆಮ್ಮೆಯಿಂದ ಹುಬ್ಬುಹಾರಿಸಿದ. ತುಟಿಗಳಲ್ಲಿ ಸಮಾಧಾನದ ಶಾಂತ ಸುಂದರ ನಗೆ ಅರಳಿತು.

ಊರ್ಧ್ವಗಾಮಿಯಾದ ಉಜ್ವಲ ಸೂರ್ಯ ಮೂಡಣ ದಿಕ್ಕಿನಲ್ಲಿ ವಿಜೃಂಭಿಸುವುದನ್ನೇ ನಿಟ್ಟಿಸುತ್ತಾ ಕೋಮಲ್‌ಸಿಂಗ್ ಎಂದೂ ಅಡಿಗೆಯ ಮನೆಯ ಕಡೆ ಸುಳಿಯದ ಮಗಳನ್ನು ಕೇಳಿದ, "ಮಧ್ಯಾಹ್ನದ ಊಟ....?"

"ಅದರ ಯೋಚನೆ ಬಿಡೀಪ್ಪಾ !"

ಅವನಿಗೆ ನಿಜವಾಗಿಯೂ ಆಶ್ಚರ್ಯ. ಈ ಸಣ್ಣ ಮಗಳು ಏನು ಮಾಡಿ ಯಾಳೆಂದು. ನಮಗೆ ಹೊರಗೆ ಹೋಗುವ ಕಾರ್ಯಕ್ರಮವಿದ್ದುದರಿಂದ ಪ್ರಶ್ನಾರ್ಥಕವಾಗಿ ಆವಳನ್ನೇ ನಿಟ್ಟಿಸಿದೆವು. ಅವಳು ಅಷ್ಟೇ ಸಮಾಧಾನ ದಿಂದ "ಪರವಾಯಿಲ್ಲ...." ಎಂದಳು ತಲೆಯಾಡಿಸುತ್ತಾ. ನಮ್ಮ ಕೆಲಸ ಮುಗಿಸಿ ನಾವಿಬ್ಬರೂ ಮಧ್ಯಾಹ್ನ ಮನೆಗೆ ಬಂದಾಗ ಮೇಜಿನಮೇಲೆ ಊಟ ಅಣಿಯಾಗಿತ್ತು. ತರಕಾರಿ, 'ಸಾಲೆಡ್ ಎಲ್ಲಾ ಎಂದಿನಂತೆಯೇ ಇವೆ. ಕೊರತೆ ಎಂಬುದೇ ಕಾಣಿಸಲಿಲ್ಲ.

"ಯಾರು ಮಾಡಿದ್ದು ?"

ಹುಡುಗಿಗೀಗ ಸಿಟ್ಟುಬಂತು "ಇನ್ನಾರು ಮಾಡುತ್ತಾರೆ ?" ಎಂದಳು ವ್ಯಂಗ್ಯವಾಗಿ.

ಅವಳ ಅಭಿಮಾನಕ್ಕೆ ತಾನು ಧಕ್ಕೆ ತಂದೆನೆಂಬುದು ಕೋಮಲ್‌ಸಿಂಗನಿಗೆ ಈಗ ಅನಿಸಿತು. ತಕ್ಷಣ "ಸಾರಿ....ರೀತಾ !" ಎಂದ. ಮುಖದಲ್ಲಿ ಹಸನಾದ ಸುಹಾಸ ನಲಿಯಿತು. ರೀತಾ ಪ್ರತಿಹಾಸ ತೋರಿದರೂ ಸವಾಲು ಹಾಕಿದಳು "ನನ್ನನ್ನು ಕೈಯ್ಯಲ್ಲಾಗದವಳು ಎಂದುಕೊಂಡಿರೇನೋ . . ?"

ಮನೆಯಲ್ಲಿ ಕುಕ್ಕರಿತ್ತು. ಅಡುಗೆ ಮಾಡುವುದು ಕಷ್ಟವಾಗಲಿಲ್ಲ.ಅದಕ್ಕೆ ಹೊಂದಿಸಬಹುದಾದ ಸಾಮಗ್ರಿಗಳನ್ನು ತಾಯಿಯಿಂದ ತಿಳಿದುಕೊಂಡು ಎಲ್ಲವನ್ನೂ ಒಂದೇ ಬಾರಿಗೆ ತುಂಬಿ ಅಡುಗೆಯನ್ನು ತಾನೇ ತಯಾರಿಸಿದ್ದಾಳೆ. ಮನೆಯ ಹೆಣ್ಣಾಳು ಸ್ವಲ್ಪ ಸಹಾಯ ಮಾಡಿರಬಹುದು. ನಾವು ಅವಳಿಗೆ ಅತ್ಯಂತ ಸಂತೋಷಾತಿರೇಕದಿಂದ ಹೃತ್ಪೂರ್ವಕವಾದ ಧನ್ಯವಾದ ಅರ್ಪಿಸಿದೆವು. ರೀತ ನೂತನ ಶೈಲಿಯಲ್ಲಿ ಪ್ರತಿವಂದನೆ ಸಲ್ಲಿಸಿ ನಗೆಯ ಚಟಾಕಿಯನ್ನು ಹಾರಿಸಿದಳು. ಒಡನೆ ನಗುವಿನ ನಿರ್ಮಲ ನಿನಾದ ಮಾಡು ಮುಟ್ಟುವಂತೆ ಮೊಳಗಿತು.

ದೆಹಲಿಗೆ ಹಿಂದಿರುಗುವ ಮೊದಲು ಒಂದು ಸಿನೆಮಾ ನೋಡಬೇಕೆಂದು ನನ್ನ ಇಚ್ಛೆ. ದೀದಿ ಅಸ್ವಸ್ಥಳಾದುದರಿಂದ ಕೋಮಲ್‌ಸಿಂಗ್ ಬರಲೊಲ್ಲ. ರೀತಳನ್ನು ಕೇಳಿದ್ದರಲ್ಲಿ ತನ್ನ ಸ್ನೇಹಿತರಿಲ್ಲದೆ ಬರಲಾರೆ ಎಂದಳು. ನಾನು ಸಂತೋಷದಿಂದ ಅದಕ್ಕೂ ಒಪ್ಪಿಗೆ ಕೊಟ್ಟೆ. ತನ್ನೊಂದಿಗೆ ಇಬ್ಬರು ಗೆಳತಿಯರನ್ನು ಕರೆತರುವುದಾಗಿ ಹೇಳಿ ಅವಳು ಹೊರಟಳು. ಒಬ್ಬಳಿಗೇನೋ ಟೆಲಿಫೋನಿನ ಮೂಲಕ ಕರೆ ನೀಡಬಹುದು. ಇನ್ನೊಬ್ಬಳಲ್ಲಿಗೆ ತಾನೇ ಹೋಗಬೇಕು. ರೀತಾ ಎರಡಕ್ಕೂ ಸಿದ್ಧವಾದಳು. ಚಿಗರಿಯಂತೆ ಮಿಂಚಿ ಮಾಯವಾದ ಅವಳನ್ನು ನೋಡು ನೋಡುತ್ತಾ 'ಇವಳಿಗೆ ಎಂದೂ ಸೋಲಿಲ್ಲ' ಎಂದುಕೊಂಡೆ. ಹೃದಯ ಸಮುದ್ರ ಅಲೆಯಲೆಯಾಗಿ ಉಕ್ಕೇರಿ ಬಂತು 'ಆಕೆ ಸೋಲುವುದೂ ಬೇಡ' ಎಂಬ ದಿವ್ಯ ಸಂದೇಶದೊಡನೆ.

ಸಮಯಕ್ಕೆ ಸರಿಯಾಗಿ ಆ ಗೆಳತಿಯರು ಆಗಮಿಸಿದಾಗ ಇವಳು ಇಲ್ಲಿಂದಲೇ ದಾಳಿಂಬೆ ಬೀಜಗಳಂತಹ ದಂತಗಳನ್ನು ಪ್ರದರ್ಶಿಸಿ ಅವರಿಗೆ ಸವಿನಯ ಸ್ವಾಗತ ನೀಡಿ ಬರಮಾಡಿಕೊಂಡಳು. ಮೂವರೊಂದಿಗೆ ಹೊರಟೆ. ಹಾದಿಯುದ್ದಕ್ಕೂ ಅವರವರೊಳಗೆ ಯಾವುಯಾವುದೋ ಅರ್ಥವಾಗದ ವಿಷಯ ಚರ್ವಣ ಚರ್ವಿತವಾಗುತಿತ್ತು. ನನ್ನ ಚಿತ್ತ ಎಲ್ಲೋ ದೂರ ಗಾಮಿಯಾಗಿದ್ದುದ

ರಿಂದ ಅವರ ಮಾತುಕತೆಗಳ ಕಡೆ ಅಷ್ಟಾಗಿ ಹರಿಯಲಿಲ್ಲ. ಪಿಕ್ಚರ್ ಗಮನ ಕೊಡುವಷ್ಟು ಒಳ್ಳೆಯದಾಗಿರಲಿಲ್ಲವಾದುದರಿಂದ ಹೊರಗೆ ಒಂದು ಸುತ್ತು ಹೋಗಿ ಬರುವ ಮನಸ್ಸುಂಟಾಗಿದ್ದರೂ ಮಕ್ಕಳನ್ನು ಬಿಟ್ಟು ಹೋಗುವುದು ವಿಹಿತವಲ್ಲವೆಂಬ ಭಾವನೆಯಿಂದ ಸುಮ್ಮನಾದೆ. ಮನಸ್ಸಿಗೆ ಕಿನಿಸಿಗೆ ಹಿಡಿದು ನಿದ್ದೆ ಬರುವ ಸೂಚನೆಯೂ ಸಹ ಕಂಡಿತು. ಶೃಂಖಲಾಬದ್ಧರಾದ ಅಸ್ವತಂತ್ರ ದೇಶೀಯರಂತೆ ಮೌನಧಾರಣೆ ಮಾಡಿದೆ. ಹೃದಯ ಕಸಿವಿಸಿಯ ಕುಂಡ ವಾದರೆ ಮನಸ್ಸು ಬೇಸರದ ಆಗರವಾಯಿತು.

ಅಂತೂ,

ಕೊನೆಗೊಮ್ಮೆ ಆ ಸಿನೆಮಾ ಮುಗಿಯಿತು. ಎಲ್ಲರೂ ಹೊರಟೆವು. ಕತ್ತಲೆಯ ಗವಿಯಿಂದ ಬೆಳಕಿನ ವಲಯಕ್ಕೆ ಕಾಲಿಡುತ್ತಲೂ ನಗುಮುಖದ ತರುಣನೊಬ್ಬ ಎದುರಾದ. ರೀತಾ ಒಮ್ಮೆಲೇ ಆನಂದಾಬುಧಿಯಲ್ಲಿ ಮುಳು ಗೆದ್ದಳು. ಮುಖಮುಂಡಲ ಅಷ್ಟಮೀ ಚಂದ್ರನಂತೆ ಬೆಳಗಿತು.

"ನಾನಾಗಲೇ ನಿನ್ನನ್ನು ನೋಡಿದೆ !" ಎಂದ ತರುಣ.

"ಮತ್ತೇಕೆ ಎದ್ದು ಬರಲಿಲ್ಲ ?" ಭಾವನಾಂಗಿಯಃ ಶ್ರೀಕಂಠ ಮೊಳಗಿತು.

"ನೀನು ಎಲ್ಲರ ಜೊತೆ ಇದ್ದುದರಿಂದ ಸುಮ್ಮನಾದೆ."

ಇದೇ ಪ್ರಕಾರವಾಗಿ ಸಾಗಿತು ಅವರ ಸಂಭಾಷಣೆ. ಒಂದು ಗಳಿಗೆ ಯೋಚಿಸಿ ಹೇಳಿದಳು ರೀತಾ "ಅಂಕಲ್ ! ನೀವು ಇವರಿಬ್ಬರನ್ನೂ ಮನೆಗೆ ಬಿಟ್ಟು ಬರುವಷ್ಟರಲ್ಲಿ ನಾನು ಇವನೊಂದಿಗೆ ಹೋಗಿ ಬರುವೆ ಆಯಿತೇ ? ನೀವು ಏನೂ ತಿಳಿದುಕೊಳ್ಳುವುದಿಲ್ಲವಷ್ಟೆ ? ಇವನೇ ನನ್ನನ್ನು ಮನೆಗೆ ತಲುಪಿಸುತ್ತಾನೆ."

ನಾನು ಆ ಕ್ಷಣ ಸ್ತಂಭೀಭೂತನಾದೆ. ಆಶ್ಚರ್ಯ ಚಕಿತ ನೋಟ ಅವ ಳನ್ನೇ ನಿಟ್ಟಿಸಿತು. ಏನು ಹೇಳಬೇಕೋ ಹೊಳೆಯಲಿಲ್ಲ. ಅವಳಿನ್ನೂ ಕೇವಲ ಹದಿನಾಲ್ಕರ ಮುಗುದೆ. ರಾತ್ರಿ ಹೊತ್ತಿನಲ್ಲಿ ಸಣ್ಣ ಹುಡುಗಿಯನ್ನು ಬಿಟ್ಟು ಹೋಗಲು ಮನಸ್ಸೊಪ್ಪಲಿಲ್ಲ. ಆದರೆ, ಅವಳು ಕೇಳಬೇಕಲ್ಲ ? ನಾನವಳಿಗೆ ಗದರಿಸುವಂತೆಯೂ ಇಲ್ಲ. ಹೋಗಬಾರದೆಂಬ ಬಲಾತ್ಕಾರ ಹೇರುವಂತೆಯೂ ಇಲ್ಲ. ನಾನೊಂದು ವಿಚಿತ್ರಗತಿಯಲ್ಲಿ ಸಿಕ್ಕಿಕೊಂಡೆ. ವಿಷಯ ಗಂಟಲ ಗಾಳ ವಾಯಿತು. ಒಂದು ಘಳಿಗೆ ತಬ್ಬಿಬ್ಬಾಗಿ "ನೋ, ನೋ ! ಅದೆಲ್ಲಾ ಆಗುವು

ದಿಲ್ಲ. ನೀವಿಬ್ಬರೂ ಇನ್ನೊಮ್ಮೆ ಕೂಡುವಿರಂತೆ ಇಂದಿಗೆ ಬಂದು ಬಿಡು." ಎಂದೆ, ವಿಜಾತೀಯ ದನಿಯಲ್ಲಿ.

ರೀತಾ ಸರಸ ಹಾಸ್ಯಭರಿತವಾಗಿ ಕಿಲಕಿಲ ನಕ್ಕು ಬಿಟ್ಟಳು.

ನಾನು ಅವಾಕ್ಕಾದೆ.

ಅವಳ ಗೆಳತಿಯರಿಬ್ಬರೂ ಏಕಕಂಠದಿಂದ ಹೇಳಿದರು. "ಇರಲಿ, ಅಂಕಲ್ ! ನಿಮಗೇನೂ ಭಯಬೇಡ. ಅವಳು ಬಂದೇ ಬರುತ್ತಾಳೆ."

ಉಭಯ ಸಂಕಟದಲ್ಲಿ ಸಿಲುಕಿ ನಾನು ಮೂಕನಾದೆ.

"ಅಂಕಲ್ ! ಇವನು ಕಪೂರ್‌ಚಂದ್ ಮಗ ಭವಾನಿಚಂದ್.... ಇವನು...." ಮುಖ್ಯವಾಗಿ ಅವಳನ್ನು ಕರೆತಂದ ನನಗೆ ಸುರಕ್ಷಿತವಾಗಿ ಮನೆ ಸೇರಿಸಿದ್ದರೆ ಸಾಕಾಗಿತ್ತು. ಪರಿಚಯಾಮೃತವನ್ನು ಹೆಚ್ಚು ಬೆಳೆಸಲಿಚ್ಛಿಸದೆ "ಹೊತ್ತಾಗುತ್ತೆ ರೀತಾ! ಮನೆಯಲ್ಲಿ ನಿನ್ನ ತಂದೆತಾಯಿ ನಿನಗಾಗಿ ಕಾದಿರುತ್ತಾರೆ." ಎಂದೆ.

ಅವಳು ಕಿಲಕಿಲ ನಕ್ಕು–"ಓ ! ಅಂಕಲ್ ! ನೀವು ಮಿಲಿಟರಿಯಲ್ಲಿದ್ದು ಇಷ್ಟೇನಾ ಕಲಿತಿರುವುದು ! ಇಷ್ಟೇನಾ ಅಡ್ವಾನ್ಸ್ ಆಗಿರುವುದು ?"

ಆ ಹಾಲ್ಗೆನ್ನೆಗಳ ಸಮ್ಮೋಹನಾಂಗಿಗೆ ಏನೆಂದು ಉತ್ತರಿಸಬೇಕೊ ತಿಳಿಯದಾಯಿತು. ನಾನು ಬೆಕ್ಕಸಬೆರಗಾದೆ. ಈ ಹುಡುಗಿಯಿಂದ ಇಂತಹ ಆಪತ್ತಿಗೆ ಗುರಿಯಾದೇನೆಂದು ಭಾವಿಸಿರದ ಬುದ್ಧಿ ವಿಸ್ಮಯಾಧಿಕ್ಯದಿಂದ ಸಮಯ ಸ್ಫೂರ್ತಿಯನ್ನು ಕಳೆದುಕೊಂಡಿತು.

ಆ ಚಿಗುರು ಮೀಸೆಯ ನವತರುಣ ನಗುತ್ತಾ ನಿಂತ.

ನನ್ನ ಸ್ಥಿತಿಯನ್ನು ನೋಡಿಯೋ ಏನೋ ಹುಡುಗಿಯರು ನಗುವಿನ ಗುಲ್ಲೆಬ್ಬಿಸಿದರು.

ಇನ್ನೊಂದರಘಳಿಗೆಯೊಳಗೆ ರೀತಾ 'ಗುಡ್ ಬೈ' ಹೇಳಿ ಅವನೊಂದಿಗೆ ಚಕಚಕ ಚಕಚಕ ಮೆಟ್ಟಲಿಳಿದು ಅವನು ಮೋಟರ್ ಸೈಕಲ್ ಸ್ಟಾರ್ಟ್ ಮಾಡುವುದರೊಳಗಾಗಿ ಅವನ ಹಿಂದೆ ಹತ್ತಿ ಕುಳಿತಳು. ಅವನೊಂದಿಗೆ ಮಾತುಕತೆಯಲ್ಲಿ ನಿಮಗ್ನಳಾದ ಅವಳು ಆ ಕ್ಷಣವೇ ನಮ್ಮನ್ನು ಮರೆತಂತೆ ತೋರಿತು. ಕಾರುಗಳ ಸಂತೆಯಿಂದ ನಾನು ಕಾರನ್ನು ಹೊರತರುವುದರೊಳಗಾಗಿ ಅವರಿಬ್ಬರೂ ಪತ್ತೆಯೇ ಇಲ್ಲ. ನಾನೊಮ್ಮೆ ದೇಹದಾದ್ಯಂತ ಬೆವತು

ಹೋದೆ. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು. ಈ ಹುಡುಗಿಯು ರಿಗೂ ಆತನ ವಿಷಯ ಅಷ್ಟಾಗಿ ತಿಳಿಯದು. ಅವರಿಬ್ಬರಿಗೂ ಗೆಳೆತನವಿದೆ ಯೆಂಬುದು ಮಾತ್ರ ಗೊತ್ತು. ಕೋಮಲ್‌ಸಿಂಗನ ಗೆಳೆಯರೆಲ್ಲಾ ಬಹಳ ಮಟ್ಟಿಗೆ ನನಗೆ ಗೊತ್ತು. ಎಂದೂ ಕಪೂರ್‌ಚಂದನ ವಿಷಯವಾಗಿ ಅವನ ಬಾಯಿಯಲ್ಲಿ ಒಂದು ಮಾತು ಬಂದುದು ಸಹ ನನಗೆ ತಿಳಿಯದು. ನನಗೀಗ ಅತ್ಯಂತ ಚಿಂತೆಗಿಟ್ಟಕೊಂಡಿತು. ಇವರಿಬ್ಬರನ್ನೂ ಹಾದಿ ಕೇಳಿ ಮನೆಗೆ ತಲುಪಿಸಿ ಬಂದೆ. ರೀತಿಳಿಲ್ಲದೆ ಒಳಗೆ ಹೋಗಲು ಮನಸ್ಸು ಅಂಜಿತು. ಗೇಟಿ ನಿಂದ ಮೂರು ನಾಲ್ಕು ಮಾರು ಹಿಂದೆಯೇ ರಸ್ತೆಯಲ್ಲಿ ಕಾರು ನಿಲ್ಲಿಸಿ ಕೊಂಡು ಅವಳಿಗಾಗಿ ಕಾದೆ. ಹೊತ್ತು ಮಿಂಚುತಿದ್ದಂತೆ ಹಾದಿಯಲ್ಲಿ ಹರಿ ಯುವ ಮೋಟಾರು ಸೈಕಲ್‌ಗಳಲ್ಲಿ ಅವಳಿರಬಹುದೇನೋ ಎಂದು ಭ್ರಮಿಸಿ ನಿಟ್ಟಿಸುತಿತ್ತು ನೋಟ. ಹತ್ತಾರು ಮೋಟಾರ್ ಸೈಕಲ್‌ಗಳು ಸಾಗಿ ಹೋದರೂ ಅವಳ ಸುಳಿವೇ ಇಲ್ಲ. ಇದ್ದಕ್ಕಿದ್ದಂತೆ ತನುಮನಗಳು ಅಸ್ವಸ್ಥ ಗೊಂಡುವು. ವ್ಯಾಪ್ತಿಗೆ ಮೀರಿ ಮಿಡಿವ ಎದೆಯ ಮಿಡಿತವನ್ನು ಸೂಕ್ಷ್ಮ ವಾಗಿ ಆಲೈಸಿದರೆ "ನಿನ್ನದೇನೂ ತಪ್ಪಿಲ್ಲ, ನಿನ್ನದೇನೂ ತಪ್ಪಿಲ್ಲ." ಎಂಬ ಅರ್ಥ ಸ್ಪಷ್ಟವಾಗಿ ಕೇಳಿಸುತ್ತದೆ. ಅದೇನೇ ಇರಲಿ, ಒಂದೊಂದು ಕ್ಷಣವನ್ನು ಕಳೆಯುವುದೂ ಸಹ ಕತ್ತಿಯಲುಗಿನ ಮೇಲೆ ಕಳೆದಂತಾಗುತ್ತಿದೆ. ಇದು ವರೆವಿಗೂ ನರನರಗಳಲ್ಲೂ ಹರಿದಾಡುತಿದ್ದ ಸ್ನೇಹ ಝರಿ ಈ ದುರ್ಘಟನೆ ಯಿಂದ 'ಕಟಕ್ ಕಟಕ್' ಎಂದು ತುಂಡುಗಡಿಯುತ್ತಿರುವಂತೆ ಭಾಸ ವಾಯಿತು. ನೋಟ ಗಡಿಯಾರದ ಮೇಲೆ ಹೊರಳಿಸಿದೆ. ಕತ್ತಲೆಯಲ್ಲೂ ಮಿನುಮಿನುಗುವ ಅಕ್ಷರಗಳು ಅಣಕಿಸಿದುವು. ಟಿಕ್ ಟಾಕ್ ಶಬ್ದವು ಮನ ವನ್ನು ಮುಳ್ಳಿನಂತೆ ಕುಟುಕುತ್ತಿದೆ. ಯಾಕೋ ಏನೋ ಒಮ್ಮಿಂದೊಮ್ಮೆಲೇ ದೈಹಿಕ ಕ್ರಿಯೆ ನಿಶ್ಚಲವಾದಂತಾಗಿ ಎಲ್ಲೋ ಹರಿದ ಮನಸ್ಸು ಸರ್ರನೆ ಹಿಂತಿರುಗಿತು. ಸರಿದು ನೇರವಾಗಿ ಕುಳಿತು ದೈಹಿಕ ಕ್ರಿಯೆಯ ಸ್ಥಿತಿಗತಿ ಯನ್ನು ಗಮನಿಸಿ ಸಮಾಧಾನ ಪಟ್ಟುಕೊಂಡೆ. ಯಾವೊಂದು ಮೊಟಾರ್ ಸೈಕಲ್ ಬಂದರೂ ಬಂದಳೇನೋ ಎಂದು ತಡುಕುತಿದ್ದ ನೋಟಕ್ಕೆ ಕೊನೆ ಗೊಮ್ಮೆ ಅವಳು ನಿಜವಾಗಿಯೂ ಕಾಣಿಸಿಕೊಂಡಾಗ ತನುಮನಗಳ ಉದ್ವೇಗ ಒಮ್ಮೆಲೇ ಸೊನ್ನೆಯ ಬಿಂದುವಿಗಿಂತಲೂ ಕೆಳ ಸರಿಯಿತು. ನಾನು

ಸ್ಟಾರ್ಟ್ ಮಾಡುವುದರೊಳಗಾಗಿ ಆವಳು ಚಂಗನೆ ಇಳಿದು ಗೇಟು ತೆರೆದಳು. ಮೋಟಾರ್ ಸೈಕಲ್ ಒಳಗಡೆ ಹೋದ ಮೇಲೆ ನಾನು ನಿಧಾನವಾಗಿ ಒಳ ಹೋದೆ.

"ಓ....ಇದೇನು ಅಂಕಲ್ ?" ಎಂದಳು ಹುಬ್ಬು ಹಾರಿಸಿ

ನಾನೀಗ ಸೋಲೊಪ್ಪಿಕೊಳ್ಳಲಾರದೆ ಹೇಳಿದೆ"ನನ್ನ ಸ್ನೇಹಿತ ಸಿಕ್ಕಿದ್ದ."

ರೀತಾ ತುಂಟ ನಗೆ ಬೀರಿದಳು. ಉಜ್ವಲ ನೇತ್ರಗಳು ನಿಶ್ಚಲವಾಗಿ ಬೆಳಗಿದುವು.

ತರುಣನೊಂದಿಗೆ ಒಂದು ಘಳಿಗೆ ಮಾತಾಡಿ ಬೀಳ್ಕೊಟ್ಟು ಒಳ ಬಂದಳು ಅವಳು. ಆಗಲೇ ಏನಾದರೂ ಹೇಳಬೇಕೆಂದು ಪ್ರಯತ್ನಿಸಿ ಸುಮ್ಮ ನಾದರೂ ದೆಹಲಿಗೆ ಹೊರಡುವ ಮುನ್ನ ಅವಳಿಗೆ ನಾಲ್ಕು ಹಿತವಚನಗಳನ್ನು ಹೇಳಲು ಮರೆಯಲಿಲ್ಲ. ಇದೆಲ್ಲಾ ನಾಲ್ಕು ವರ್ಷಗಳ ಹಿಂದಿನ ಮಾತು.

ಪ್ರಸ್ತುತ,

ಘಟಿಸಿದ ವಿಷಯವನ್ನು ಹೇಳಬೇಕೆಂದರೆ ಅದೇ ಚಿಗುರುಮೀಸೆಯ ನವಾಗತ ತರುಣನೊಡನೆ ವಿವಾಹವಾಗುವುದಾಗಿ ನಿರ್ಧರಿಸಿದ ರೀತಾ ಆತನನ್ನು ತಂದೆ ತಾಯಿಗೆ ಪರಿಚಯ ಮಾಡಿಕೊಟ್ಟಳು. ಕೆಲವು ದಿನ ತಿಕ್ಕಾಟದಲ್ಲಿ ಕಳೆಯಿತು. ಅನಂತರ ಒಪ್ಪಿಕೊಂಡರು. ಭವಾನಿಚಂದನನ್ನು ಅಳಿಯನನ್ನಾಗಿ ಸ್ವೀಕರಿಸಲು ಮಾತಾಪಿತೃಗಳು ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿದರೂ ಅವರು ಬಯಸಿದ ಬಯಕೆಯೇ ಬೇರೆ. ಈಕೆ ಆಶಿಸಿದ ರೀತಿಯೇ ಬೇರೆ. ಕಷ್ಟ ಸುಖಗಳ ತಾನವಿತಾನದಲ್ಲಿ ಲಗ್ನ ಪತ್ರಿಕೆಗಳು ಪ್ರಿಂಟಾದುವು. ಕೆಲವರಿಗೆ ಆಗಲೇ ಹಂಚಿದ್ದಾರೆ. ರೀತಾ ಅಷ್ಟರೊಳಗಾಗಿ ಹಠಾತ್ತನೆ ಮನಸ್ಸು ಬದಲಾಯಿಸಿ ಪತ್ರಿಕೆ ಹಂಚುವುದನ್ನು ನಿಲ್ಲಿಸಿದುದಲ್ಲದೆ ಅವನ್ನು ಒಲೆಯೊಳಗೆ ತೂರಿ ಅಗ್ನಿ ಸ್ಪರ್ಶ ಮಾಡಿಸಿದಳು !

ತಂದೆ ತಾಯಿಯರು ಸಂಭ್ರಾಂತರಾದರು.

ಸದ್ಯಕ್ಕೆ ಮದುವೆಯೇ ಬೇಡ ಎಂಬುದು ಅವಳ ಅಚಲ ನಿರ್ಧಾರ. ಅವರವರ ಸ್ನೇಹ ಬಳ್ಳಿ ತುಂಡುಗಡಿಯಲು ಕಾರಣ ಸಹ ತಿಳಿಯದು. ಕೋಮಲ್‌ಸಿಂಗ್ ತಲೆಯ ಮೇಲೆ ಕೈ ಹೊತ್ತು ಕುಳಿತ. ಸಿಡಿಲು ಬಡಿ ದಂತಾದ ದೀದಿಯ ವಿಷಯ ಹೇಳದಿದ್ದರೂ ಯಾರಾದರೂ ಊಹಿಸಿಕೊಳ್ಳ

ಬಲ್ಲರು. ಮದುವೆಗೆ ನಡೆಸಿದ ಪೂರ್ವಭಾವಿ ಸಿದ್ಧತೆಗಳು ಮೈ ಮುದುರಿ ತೂಕಡಿಸುತ್ತಿವೆ. ಚಪ್ಪರಕ್ಕಾಗಿ ಗಿಡಗಳನ್ನು ಕತ್ತರಿಸಿದುದರಿಂದ ಸುಂದರ ವಾದ ಹೂದೋಟ ನಿರ್ನಾಮವಾಗಿದೆ.

ರೀತಾ ಲಿಟರೇಚರ್ ಆನರ್ಸ್ ಮಾಡಿದವಳು. ಮಾಸ್ಟರ್ ಡಿಗ್ರಿಗೆ ಓದು ಎಂದು ತಂದೆಯ ಅಭಿಪ್ರಾಯ. ಅವರೆಂದಂತೆ ಇವಳು ಮನಸ್ಸು ಮಾಡಿದ್ದರೆ ಓದಲೂ ಬಹುದಾಗಿತ್ತು. ಆದರೆ ಏಕೋ ಅದರಲ್ಲೂ ಇವಳ ಸಮ್ಮತಿಯಿಲ್ಲ. ಮನೆಯಲ್ಲೇ ಕುಳಿತು ಕತೆ ಕವನಗಳನ್ನು ಬರೆದು ಪರ ದೇಶದ ಪತ್ರಿಕೆಗಳಿಗೆ ಕಳುಹಿಸಿ ಅಂತರ್ರಾಷ್ಟ್ರೀಯ ಖ್ಯಾತಿಗಳಿಸುವ ಶುಭ ಲಕ್ಷಣಗಳನ್ನೂ ಈಗಾಗಲೇ ಹೊಂದಿರುವ ನಿಷ್ಣಾತೆ. ತಂದೆ ತಾಯಿಗಳಿಗೆ ಒಂದೇ ಬಾರಿಗೆ ಸುಖದುಃಖಗಳನ್ನು ಉಣಬಡಿಸಿದರೂ ಎಂದೆಂದಿಗೂ ಸೋಲೆನೆಂಬ ದಿಟ್ಟತನವನ್ನೂ ಸಹ ಪ್ರದರ್ಶಿಸಿದ್ದಾಳೆ.

ಮದುವೆಯ ಸಂಬಂಧ ಕಡಿದು ಹೋದುದರಿಂದಲೋ ಏನೋ, ಕೋಮಲ್‌ಸಿಂಗ್ ಬಂದು ಹೋಗಲು ಬರೆದಿದ್ದ. ಅದರಂತೆಯೇ ಹೊರಟೆ. ಕೇವಲ ಎರಡು ದಿನ ರಜೆ ದೊರೆತುದರಿಂದಲೋ ಏನೋ....ವಿಮಾನಯಾನ ಸುಖಕರವಾಗಿ ಕಳೆಯಿತು-ಸುಂದರ ಉದ್ಯಾನದ ಹಾದಿಯಂತೆ. ಮನೆ ಮುಟ್ಟುವಷ್ಟರೊಳಗಾಗಿ ಕೋಮಲ್‌ಸಿಂಗ್ ಆಫೀಸಿಗೆ ಹೋಗಿದ್ದ. ನಾನಲ್ಲಿ ಪ್ರಾತರ್ವಿಧಿಗಳನ್ನು ಮುಗಿಸಿದರೂ ರೀತಳ ದರ್ಶನವಾಗಲಿಲ್ಲ.

"ರೀತಾ ಎಲ್ಲಿ ದೀದಿ ?"

"ಮೇಲಿದ್ದಾಳೆ. ಅವಳೂ ಸಹ ಈಗಷ್ಟೆ ಸ್ನಾನ ಮುಗಿಸಿದಳು." ಎಂದು ಸಮಾಧಾನಪೂರ್ವಕವಾಗಿ ನುಡಿದು ನನ್ನ ಆಶ್ಚರ್ಯ ತೃಷಿತ ಭಾವನೆಗೆ ತಣ್ಣೀರೆರೆಚಿದಳು ದೀದಿ. ಬಹುಶಃ ಒಲ್ಲದ ಸಂಬಂಧ ಕಡಿದು ಹೋದ ಸಮಾಧಾನವೋ ಏನೋ.....ನಾನು ಟವಲ್ಲಿನಿಂದ ಕೈಗಳನ್ನು ತೀಡಿ ಕೊಳ್ಳುತ್ತ ಮಹಡಿ ಹತ್ತಿದೆ. ಕೊಠಡಿಯಲ್ಲೆಲ್ಲೂ ಅವಳ ಸುಳಿವಿಲ್ಲ. ಅಲ್ಲಿಂದ ಬಿಸಿಲು ಮಚ್ಚಿನ ಕಡೆ ನೋಟ ಹೊರಳಿಸಿದರೆ, ಅಲ್ಲಿ ಒದ್ದೆ ಕೂದಲನ್ನು ಆರಿಸಿಕೊಳ್ಳುತ್ತಾ ಎಳೆ ಬಿಸಿಲಿಗೆ ಮೈಗೊಟ್ಟಿದ್ದಾಳೆ. ಕೂದಲಿನ ತುದಿಯಲ್ಲಿ ನೀರು ಹನಿಹನಿಯಾಗಿ ಉದುರುತ್ತಿದೆ. ನಸು ನೀಲಿಯ ಉಡುಪು ತಿಳಿಗಾಳಿ ಯೊಂದಿಗೆ ಚಿನ್ನಾಟವಾಡುತ್ತಾ ಅತ್ತಿತ್ತ ಹಾರಾಡುತ್ತಿತ್ತು. ತಿಳಿಗಾಳಿಯ

ಸಣ್ಣ ಶೃತಿಯೊಡನೆ ತಗ್ಗಿದ ದನಿಯಲ್ಲಿ ಏನನ್ನೋ ಹಾಡಿಕೊಳ್ಳುತ್ತಿರುವುದು ಸ್ಪಷ್ಟವಾಗಿ ಕೇಳಿಸುತ್ತಿದೆ. ಒಂದು ಘಳಿಗೆ ಹಾಗೆ ನಿಂತು ಮುಂದಡಿಯಿಟ್ಟೆ. ಪಾದ ಸಪ್ಪಳ ಕೇಳಿ ತಕ್ಷಣ ನನ್ನೆಡೆಗೆ ನೋಟ ಹರಿಸಿದಳು. ಮುಖ ಅರಳಿ ಹೂವಾಯಿತು. ತುಟಿಗಳಂಚಿನಲ್ಲಿ ಅದೇ ಅಮಾಯಕ ನಗು!

"ಓ....! ಅಂಕಲ್!"

"ಏನಮ್ಮಾ ಹೇಗಿದ್ದಿ?"

"ಸೊಗಸಾಗಿ....!"

ಅವಳ ಕಾಮನ ಬಿಲ್ಲಿನಂತಹ ಹುಬ್ಬುಗಳು ಏರಿ ಇಳಿದುವು. ನಾನು ಸಸು ಬೆಪ್ಪಾಗಿ ನಿಂತೆ. ಆಕೆಯನ್ನು ದುಃಖಿನಿಯನ್ನಾಗಿ ಕಲ್ಪಿಸಿಕೊಂಡಿದ್ದ ನನ್ನ ಕುಕಲ್ಪನೆ ರೆಕ್ಕೆ ಮುರಿದುಕೊಂಡಿತು. ಟವಲ್ಲಿನಿಂದ ಒದ್ದೆಗೂದಲನ್ನು ಒರಿಸಿಕೊಳ್ಳುತ್ತಾ ಅವಳೆಂದಳು "ನಿಮ್ಮನ್ನು ನೋಡಿ ನಾಲ್ಕು ವರ್ಷಗಳ ಮೇಲಾಗಿತ್ತಲ್ಲವೆ ಅಂಕಲ್?"

"ಹೌದಮ್ಮಾ...."

"ಅಪ್ಪಾಜಿಯನ್ನು ಮರೆತು ಬಿಟ್ಟಿರಾ ಹೇಗೆ?"

ನಾನು ಉತ್ತರಿಸುವುದರೊಳಗಾಗಿ ಅವಳೇ ಹೇಳಿದಳು "ಅದಕ್ಕೂ ಎಷ್ಟು ಯೋಚಿಸುತ್ತೀರಿ ಅಂಕಲ್? ನನಗೇನೋ ಬೆಳೆಸುವುದರಲ್ಲೇ ಆಗಲಿ, ಕಳೆದುಕೊಳ್ಳುವುದರಲ್ಲೇ ಆಗಲಿ ಏನೂ ವಿಶೇಷ ಕಾಣಿಸುವುದಿಲ್ಲ!"

"ಈಡಿಯಟ್!" ಎನ್ನಬೇಕು ಎನ್ನಿಸಿತು. ಹಾಗೇ ನಾಲಿಗೆಯನ್ನು ಒತ್ತಿ ಹಿಡಿದೆ. ನಾನು ಪ್ರಯತ್ನಿಸದಿದ್ದರೂ ತುಟಿಗಳಲ್ಲಿ ನೀರಸ ನಗು ಮಿನುಗಿತು.

"ಅಂಕಲ್, ನಾವು ಏನೋ ಬಯಸುತ್ತೇವೆ. ವಿಧಿ ಇನ್ನೇನೋ ತಂದೊಡ್ಡುತ್ತದೆ. ಈ ಪ್ರಪಂಚ ಇಷ್ಟೆ, ನಾವು ಮಾಡುತ್ತೇವೆ ಎಂಬುದೆಲ್ಲಾ ಮಿಥ್ಯೆ."

"ನಿನಗೀಗ ಅರ್ಥವಾಯಿತೇನು?"

"ಆಗದೇನು, ಎಂದೋ ಅರ್ಥವಾಗಿದೆ. ಆದರೂ ಸಹ ಈ ಪ್ರಾಪಂಚಿಕ ವ್ಯವಹಾರಕ್ಕೆ ತಲೆಬಾಗಬೇಕು ನೋಡಿ. ನಾನೀಗ ಯೋಚಿಸುವುದು ಇಷ್ಟೆ, ಸಧ್ಯಕ್ಕೆ ಯಾವ ಯೋಚನೆಯನ್ನೂ ತಲೆಗೆ ತುಂಬಿಕೊಳ್ಳದೆ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುವುದು ಎಂದು, ನೀವೇನೆನ್ನುತ್ತೀರಿ?"

"ಆಗಬಹುದು. ಆದಗೂ ತಂದೆ ತಾಯಿ ಸುಖವಾಗಿದ್ದಾಗ ನೀನು ಗೃಹಣಿಯಾಗುವುದು ಸೂಕ್ತ ಅಲ್ಲವೆ ?"

"ನಿಜ ಅಂಕಲ್, ಅದು ಸಹ ನನ್ನ ಗಮನದಲ್ಲುಂಟು. ಆದರೆ...."

"ಮೊದಲು ಮನಸ್ಸನ್ನು ಒಂದು ಸ್ಥಿಮಿತದಲ್ಲಿಟ್ಟುಕೊ, ಒಮ್ಮೆ ಬೇಕು ; ಎನ್ನುವುದು ಇನ್ನೊಮ್ಮೆ ಬೇಡ ಎನ್ನುವುದು. ಈ ವ್ಯವಹಾರ ಸರಿಯಲ್ಲ." ನಾನು ಒತ್ತಿ ಹೇಳಿದೆ.

"ಹೌದು, ಅದು ನನಗೂ ಗೊತ್ತು. ಆದರೆ ಯಾವುದೋ ವಿಷ ಘಳಿಗೆ.....ಹೋಗಲಿ, ಬಿಡಿ. ನಾನು ಸಕಾಲದಲ್ಲಿ ಎಚ್ಚೆತ್ತುಕೊಂಡೆ. ಇಲ್ಲದಿದ್ದಲ್ಲಿ ನನ್ನ ಲೈಫ್ ಹಾಳಾಗುತಿತ್ತು."

"ಏಕೆ ? ಏನು ?"

"ಅವನೊಬ್ಬ ಈಡಿಯಟ್ !"

ಗೇಟನ್ನು ತೆರೆದ ಸದ್ದು ಕೇಳಿಸಿತು. ಅದರ ಹಿಂದೆಯೇ ಕೋಮಲ್ ಸಿಂಗನ ಕಾರು ಪೋರ್ಟಿಕೋದಲ್ಲಿ ಬಂದು ನಿಂತಿತು. ನಾನು ಕೆಳಗಿಳಿದು ಹೋದೆ. ನನ್ನನ್ನು ನೋಡುತ್ತಲೂ ಆತನ ಮುಖದಲ್ಲಿ ಸಣ್ಣ ನಗೆ ಅರಳಿತು. ಮುಖದಲ್ಲಿ ಎಂದಿನ ಗೆಲುವಿರಲಿಲ್ಲ. ಒಂದು ಘಳಿಗೆ ಸುಮ್ಮನಿದ್ದು "ನೋಡಿದೆಯಾ....?" ಎಂದ.

ಇನ್ನಾರಾದರೂ ಆಗಿದ್ದರೆ ಆ ಮಾತಿಗೆ ಏನಾದರೂ ಅರ್ಥ ಕಲ್ಪಿಸಬಹುದಾಗಿತ್ತು. ಅವನು ಮಗಳನ್ನೆ ಕುರಿತು ಹೇಳಿದನೆಂಬುದು ಸ್ಪಷ್ಟವಾಯಿತು ನನಗೆ.

"ನೋಡಿದೆ.....ಯಾವ ಬದಲಾವಣೆಯೂ ಇಲ್ಲ."

"ಅದೇ ಬಂದಿರುವುದು ಕಷ್ಟ.ಅವಳಿಗೆ ಸೀರಿಯಸ್‌ನೆಸ್ ಇಲ್ಲವೇ ಇಲ್ಲ."

"ತೀರ ಹಾಗೆನ್ನುವುದು ಸಹ ಸರಿಯಲ್ಲ. ಆಕೆಗೆ ಯಾವುದಿಲ್ಲ ? ವಿದ್ಯೆ ಬುದ್ಧಿ ಎಲ್ಲಾ ಉಂಟು. ಸೀರಿಯಸ್‌ನೆಸ್ ಇಲ್ಲ ಎಂದರೆ ಹೇಗೆ ? ಅವಳು ತನ್ನ ಜೀವನವನ್ನು ಸ್ವತಃ ರೂಪಿಸಿಕೊಳ್ಳಲಾರಳೆ ?"

"ಎಲ್ಲವೂ ಉಂಟು. ಅದೇ ತಪ್ಪಾಗಿದೆ."

ಗಂಭೀರ ಮೌನ ಆವರಿಸಿತು.

ಆತನ ಹೃದಯ ತಂತುಗಳಲ್ಲಿ ಮಿಡಿಯುವ ವೀತಗಾನ ಸ್ಪಷ್ಟವಾಗಿ

ಕೇಳಿಸುತ್ತಿದೆ. ಈ ಜೀವನವನ್ನು ಸರಿಯಾದ ರೀತಿಯಲ್ಲಿ ರೂಪಿಸಿ ಉದ್ಧರಿಸಲು ಹಾತೊರೆಯುತ್ತಿದೆ ಜೀವ. ತಮ್ಮ ಭವಿಷ್ಯಕ್ಕೂ ಮಕ್ಕಳಿಗೂ ಯಾವ ಸಂಬಂಧವೂ ಇಲ್ಲವೇನೋ ಎಂಬಷ್ಟು ಚಿಂತಿತ ಮುದ್ರೆಯಿಂದಿದೆ–ಮುಖಭಾವ. ಆತನ ಮನಃಸ್ಥಿತಿ ನನ್ನ ಅಂತರಂಗವನ್ನು ಸಮೂಲವಾಗಿ ಅಲುಗಾಡಿಸಿ ಬಿಟ್ಟಿತು. ಮುಂದೆ ಬಹಳ ಹೊತ್ತಿನವರೆಗೆ ಅವಳ ಭವಿಷ್ಯವನ್ನು ಕುರಿತು ನಾವಿಬ್ಬರೂ ಏಕೀಭವಿಸಿ ಚಿಂತಿಸಿದೆವು. ಫಲವನ್ನು ಮಾತ್ರ ಕೇಳುವುದೂ ವ್ಯರ್ಥ ; ಹೇಳುವುದೂ ವ್ಯರ್ಥ.

ಅವಳೊಂದಿಗೆ ಮಾತುಕತೆಯೂ ನಡೆಯಿತು. ಅವಳು ತನ್ನ ಅಚಲ ನಿರ್ಧಾರದಿಂದ ಒಂದು ಇಂಚೂ ಸರಿಯಲಿಲ್ಲ. ನಾನು ಮರುದಿನ ಹೊರಡುವಾಗ ರೀತಳಿಗೆಂದೆ "ಯಾವುದೇ ತೀರ್ಮಾನವನ್ನು ಕೈಕೊಳ್ಳುವುದಿದ್ದರೂ ಬಹಳವಾಗಿ ಯೋಚನೆ ಮಾಡು. ತಾಯಿ ತಂದೆಯರ ಸಲಹೆಯನ್ನು ತೆಗೆದುಕೊಂಡನಂತರ ಅಂತಿಮ ನಿರ್ಧಾರಮಾಡು ಮಗೂ....."

ಅವಳ ತುಟಿಗಳಲ್ಲಿ ಮಿನುಗಿದ ಅಮಾಯಕ ನಗು ಮಾಮೂಲು ಉತ್ತರ ನೀಡಿತು. ಆದರೆ, ಅದರರ್ಥ ನಿಗಮಗೋಚರನೊಬ್ಬನೇ ಬಲ್ಲ.

ನಾನು ನವದೆಹಲಿಗೆ ಹೋದಮೇಲೆ ಹೆಚ್ಚುಕಡಿಮೆ ವಾರಕ್ಕೊಮ್ಮೆ ಟೆಲಿಫೋನಿನ ಮೂಲಕ ಮಾತನಾಡಿ ಸ್ಥಿತಿಗತಿಯನ್ನು ಅರಿಯುತಿದ್ದೆ. ಈಚೆಗೆ ಯಾವ ವಿಶೇಷವೂ ಕೇಳಿಬರಲಿಲ್ಲ. ಅವಳ ಇಂಗ್ಲಿಷ್ ಕೃತಿಯೊಂದು ಇಂಗ್ಲೆಂಡಿನಲ್ಲಿ ಪ್ರಿಂಟಾಗುವ ಸಂಭವ ಬಂದಾಗ ಅವಳು ದೆಹಲಿಗೆ ಬಂದು ಸಂಬಂಧಪಟ್ಟ ಅಧಿಕಾರಿ ಹೆನ್ರಿ ಜೇಮ್ಸ್‌ರವರೊಡನೆ ಮಾತುಕತೆ ಆರಂಭಿಸಿದಳು. ಅದೇ ಸಂದರ್ಭದಲ್ಲಿ ಅದೇ ಉದ್ದೇಶಕ್ಕಾಗಿ ಹೆನ್ರಿ ಜೇಮ್ಸ್‌ರವರಲ್ಲಿಗೆ ಬಂದಿದ್ದ ರಾಜಸ್ಥಾನೀ ಯುವಕನ ಭೇಟಿಯಾಯಿತು. ಆತ ಮಿಲಿಟರಿಯಲ್ಲಿ ಕ್ಯಾಪ್ಟನ್. ಸರ್ವಿಸಿಗೆ ಸೇರಿ ಇನ್ನೂ ಎರಡು–ಮೂರು ವರ್ಷ. ಅವಿಭಕ್ತ ಕುಟುಂಬಸ್ಥ. ರೀತಳ ಉದ್ದೇಶಕ್ಕೆ ಆ ನವಾಗತ ತರುಣ ಅನುರೂಪನೇನೋ ಹೌದು. ಆದರೂ ಮಿಲಿಟರಿಯಲ್ಲಿರುವುದರಿಂದ ಕೋಮಲ್‌ಸಿಂಗ್ ದಂಪತಿಗಳಿಗೆ ಆಧಾರವಾಗುವಂತಿಲ್ಲ. ಆತ ಹತ್ತಿರದಲ್ಲೂ ಇರುವಂತಿಲ್ಲ, ಅವಳೊಬ್ಬಳೇ ಮಗಳಾದುದರಿಂದ ನಾನು ಇದರಲ್ಲೆಲ್ಲ ತಲೆ ಹಾಕಬೇಕಾಯಿತು. ಅವರಿಗೆ ಸಖ್ಯ ಬೆಳೆದು ಬಂದ ಬಗೆಯೆಷ್ಟು ಆಶ್ಚರ್ಯವೋ ಅವರ ಸಂಬಂಧ ನಡೆದುದೂ ಸಹ

ಅಷ್ಟೇ ಆಶ್ಚರ್ಯ. ತರುಣ ನೀಫಾ ಬಾರ್ಡರಿನಲ್ಲಿ ಕೆಲಸ ಮಾಡುತ್ತಾನೆ. ಆತ ಒಳ್ಳೆಯ ಕುಟುಂಬಸ್ಥನಾದರೂ ಬಹುದಾಪುರ ಬಹಳ ಹಿಂದುಳಿದ ಊರು. ಬಡತನಕ್ಕೂ ಕಡಿಮೆಯಿಲ್ಲ. ಅಲ್ಲಿನ ಜನ ಇನ್ನೊಂದರ್ಧ ಶತ ಮಾನಕ್ಕೂ ಚೇತರಿಸಿಕೊಳ್ಳಲಾರರು. ಅಂತಹ ಜನರೊಂದಿಗೆ ಈಕೆ ಬಾಳಿ ಯಾಳೆ ಎಂಬುದೂ ಸಹ ಸಮಸ್ಯೆ. ಆದರೂ ಅವಳು ಅಂಜಲಿಲ್ಲ. ಈ ಎಲ್ಲಾ ಸಮಸ್ಯೆಗಳನ್ನೂ ಅಲಕ್ಷಿಸಿ ಆತನೊಡನೆ ಒಪ್ಪಂದ ಮಾಡಿಕೊಂಡು ಊರಿಗೆ ಹೊರಟಳು. ನಾನು ವಿಸ್ಮಯ ಮೂಕನಾದೆ. ಹೃದಯ ಜರ್ಝರಿತವಾಯಿತು.

ಕೋಮಲ್‌ಸಿಂಗನ ಮುಂದಿನ ನಾನಾ ತೊಡಕುಗಳು ನನಗೆ ಹೊರ ತಾದುವಲ್ಲ. ಆಕೆಯನ್ನು ಪ್ಲೇನಿಗೆ ಹತ್ತಿಸಿದನಂತರ ನನ್ನ ಕಣ್ಣುಗಳು ತುಂಬಿ ಬಂದುವು. ಮನೋ ದೌರ್ಬಲ್ಯವನ್ನು ಕಂಬನಿಯ ರೂಪದಲ್ಲಿ ವ್ಯಕ್ತಪಡಿಸುವು ದಿಷ್ಟವಿರಲಿಲ್ಲವಾದರೂ ನನ್ನ ಹತೋಟಿ ತಪ್ಪಿತು. ಬಹುಶಃ, ಗಮನ ಅತ್ತ ಹರಿಯುವುದರೊಳಗಾಗಿ ಆ ಕೃತಿ ನಡೆದು ಹೋಗಿತ್ತೇನೋ. ಕಣ್ಣುಗಳನ್ನು ತೀಡಿಕೊಂಡು ಕಾರು ಹತ್ತಿದೆ....ನೀಫಾ ಬಾರ್ಡರ್‌ನಲ್ಲಿರುವ ಆತನೊಂದಿಗೆ ರೀತಾ ಇರುವಂತಿಲ್ಲ. ಆತನ ಕುಟುಂಬದಲ್ಲಿದ್ದುಕೊಂಡು ದಿನಗಳೆಯುವು ದಂತೂ ಇವಳಿಂದ ಸಾಧ್ಯವೇ ಇಲ್ಲ. ತನ್ನ ಕಾಲಮೇಲೆ ತಾನೇ ಕಲ್ಲು ಹಾಕಿ ಕೊಂಡಳು. ಏಕೈಕಪುತ್ರಿಯಾಗಿ ಹುಟ್ಟಿದ ಮನೆಗೂ ನೆಮ್ಮದಿಯಿಲ್ಲ! ಹಿರಿಯ ಸೊಸೆಯಾಗಿ ಸೇರಿದ ಮನೆಗೂ ಶಾಂತಿಯಿಲ್ಲ. ವಿಶ್ವವಿದ್ಯಾಲಯದ ಮೂಸೆಯಿಂದ ಹೊರಬಿದ್ದು ಏನು ಸಾಧಿಸಿದ ಹಾಗಾಯಿತು....? ವ್ಯರ್ಥ ! ಎಲ್ಲವೂ ಶುದ್ಧಾಂಗವಾಗಿ ವ್ಯರ್ಥ !....

ಅಪಾರವಾದ ಪ್ರೀತಿ ವಿಶ್ವಾಸಗಳೂ, ಅನನ್ಯ ಅನುಕಂಪವೂ, ಸರಸ ಸಂಧಾನ ಮಾಡಬಲ್ಲ ಮಹತ್ಶಕ್ತಿಯೂ ಗೊಂಡಾರಣ್ಯದ ಪಾಲಾದಾಗ ಅತ್ಯಂತ ಅಸಾಯಕ ಸ್ಥಿತಿಯಲ್ಲಿ 'ವಿಧಿ' ಎಂದುಕೊಂಡೆ. ಆತ್ಮೀಯರು ಗತಿಸಿ ದಾಗ ಅಳುವಷ್ಟು ಅತ್ತು ಅನಂತರ 'ದೈವಚಿತ್ತ' ಎಂದು ವೇದಾಂತ ಹೇಳುವವರಂತಾಯಿತು ನನ್ನ ಸ್ಥಿತಿ.

ಈ ಎಲ್ಲಾ ಸಂಕಷ್ಟಗಳಿಂದ ಪಾರಾಗಲು ನಕಾರ ಹೊಡಿದರು ತಂದೆ ತಾಯಿ. ಹೇರಳವಾದ ಆಸ್ತಿಯ ಒಡೆತನಕ್ಕಾದರೂ ಮಗಳು ತಮ್ಮಲ್ಲೆ ಉಳಿಯಬೇಕೆಂಬುದು ಅವರ ಆಕಾಂಕ್ಷೆ. ಆದರೆ, ಅಷ್ಟೇ ವ್ಯತಿರಿಕ್ತವಾಗಿ

ಕೆಲಸ ಮಾಡುತಿತ್ತು ಅವಳ ಸೂಕ್ಷ್ಮ ಮನಸ್ಸು. ವಾದ ವಿವಾದಗಳಲ್ಲಿ ಸಂಧಾನ ಅನುಸಂಧಾನಗಳಲ್ಲಿ ನವ ಮಾಸಗಳು ಗತಿಸಿದುವು. ಏತನ್ಮಧ್ಯೆ, ಅವಳ ಪುಸ್ತಕವು ಇಂಗ್ಲೆಂಡಿನಲ್ಲಿ ಪ್ರಕಟವಾಯಿತು. ಅದರ ವಿನಿಮಯಕ್ಕಾಗಿ ಹೆನ್ರಿ ಜೇವ್ಸ್‌ಸರವರಲ್ಲಿಗೆ ಎರಡು-ಮೂರು ಬಾರಿ ಬಂದಳು. ಹಾಗೆ ಬಂದಾಗಲೆಲ್ಲಾ ರಾಜಬಹದ್ದೂರನೂ ಹಾಜರಿದ್ದ. ಬಹುಶಃ ಆತನ ಕೃತಿಯೂ ಪ್ರಕಟಣೆಗೆ ಸ್ವೀಕೃತವಾಯಿತೆಂದು ತೋರುತ್ತದೆ. ಒಟ್ಟಿನಲ್ಲಿ ಅವರ ಸಂಬಂಧ ಸಂಪೂರ್ಣ ಬೆಸೆದುಕೊಂಡಿತು. ಸಂಧಾನ ಅನುಸಂಧಾನಗಳಿಗೆ ಸ್ನೇಹವರ್ಗ ಮಂಗಳಗಾನ ಹಾಡಿದರೂ ತಂದೆ ತಾಯಿ ದನಿಗೂಡಿಸಲಿಲ್ಲ. ಅದೊಂದು ಪ್ರಮಾದ.

ಪರಂತು,

ಭಗವಂತನ ಉದ್ದೇಶಿತ ಈ ಪ್ರಸಂಗ ಯಾವ ಶುಭಗಳಿಗೆಯಲ್ಲಿ ಆರಂಭ ವಾಯಿತೋ ಅದನ್ನು ನಾನೆಂದೂ 'ವಿಷಗಳಿಗೆ' ಎನ್ನಲಾರೆ. ಅವಳ ಜನ್ಮ ಧಾರಣೆಯ ಗ್ರಹಬಲವೇ ಆಗಲೀ ಘಟಿಕಾ ಸಂಪತ್ತಿಯೇ ಆಗಲೀ ಕ್ರೂರ ವಾಗಿದೆಯೆಂದು ಸಹ ಭಾವಿಸಲಾರೆ. ಆಕೆಯ ಉದ್ದೇಶ ನಿಜವಾಗಿಯೂ ನಿರ್ಮಲ ಉದ್ದೇಶ ; ಸ್ತ್ರೀ ಜೀವನದ ಪರಮಲಕ್ಷ್ಯ. ಆದರೆ....ನರನಾರಿ ಯರ ಅಶಾಶ್ವತ ಶರೀರವಲಯುಗಳನ್ನು ಆಶ್ರಯಿಸಿಕೊಂಡ ಈ ಉದ್ದೇಶಗಳಿಗೆ ಅಷ್ಟೊಂದು 'ಪ್ರಾಮುಖ್ಯತೆ' ಕೊಡಬೇಕೆ ? ಎಂಬ ಪ್ರಶ್ನೆ ಒಮ್ಮೊಮ್ಮೆ ಏಳುವುದೂ ಸಹಜ. ಜೀವನ ಪರಿಸ್ಥಿತಿಯಲ್ಲೆ ದೂರಗಮ್ಯದ ದಾರಿದೀಪ ಯಾವ ಘಳಿಗೆಯಲ್ಲಾದರೂ ನಂದಿ ಪಥಿಕರ ಮಹಾ ಮಾರ್ಗಯೋಗ ಗಾಢಾಂಧಕಾರದಿಂದ ತುಂಬಿ ಹೋಗಬಹುದು. ಅಂದಮೇಲೆ ಈ ಅಶಾಶ್ವತ ವಾದ ಜೀವನಕ್ಕೆ ಜೀವನೋದ್ದೇಶಗಳಿಗೆ ಹಂಬಲವೇಕೆ ? ಹಿಂದೂಸ್ಥಾನದ ಸ್ತ್ರೀ ಜೀವನದ ಪರಮ ಲಕ್ಷ್ಯ ಜೀವನವಿಕಾಸ ಮತ್ತು ಜೀವನಶಾಂತಿ. ಆತ್ಮವಿಕಾಸ ಮತ್ತು ಆತ್ಮ ಸಾಕ್ಷಾತ್ಕಾರ....ಇವನ್ನು ಎಲ್ಲಿದ್ದರೆ ತಾನೆ ಪಡೆಯಲಾಗುವುದಿಲ್ಲ ?

ಮನಸ್ಸು ದಿಕ್ಕೆಟ್ಟು ವಿಚಾರ ತರಂಗಗಳು ಡೋಲಾಯಮಾನವಾದಾಗ ಅನುದ್ದೇಶಿತ ಕ್ರಮವಿಹೀನ ಯೋಚನಾಂತರಂಗಗಳನ್ನು ನಿರ್ಲಕ್ಷಿಸಿ ಸುಮ್ಮನೆ ಕಾರ್ಯನಿರತನಾಗಿಬಿಡುವೆ. ಅದು ವಿನಾ ಬೇರೆ ದಾರಿಯೇ ಇಲ್ಲ....

ಹಾಗೆ ಅವೆಷ್ಟು ದಿನಗಳು ಉರುಳಿದುವೋ. ಅದೇಕೆ ಅಷ್ಟು ಉನ್ಮತ್ತವೇಗ ದಲ್ಲಿ ಓಡುತ್ತಿವೆಯೋ ಎಂಬದೂ ಸಹ ಅರ್ಥವಾಗುವುದಿಲ್ಲ.

ಅದೊಂದು ಸುಂದರ ಮುಂಜಾನೆ.

ಆದರೆ, ಹೆತ್ತವರಿಗದು ಅತ್ಯಂತ ದುರ್ದಿನ.

ರೀತಾ ಬ್ರಾಹ್ಮೀ ಮುಹೂರ್ತದಲ್ಲೆದ್ದು ಅಶೃಂಖಲೆಯಾಗಿ ರಾಜ ಸ್ಥಾನದ ಕುಗ್ರಾಮವಾದ ಬಹುದಾಪುರಕ್ಕೆ ಹೇಳದೆ ಕೇಳದೆ ಧಾವಿಸಿದಳು. ಅಲ್ಲಿ ರಾಜಬಹದ್ದೂರನೂ ಆಕೆಯೂ ವಿವಾಹಿತ ದಂಪತಿಗಳಾದರು. ಆಕೆ ಬಿಟ್ಟು ಬಂದ ಬಂಧುವರ್ಗದಲ್ಲಿ ಹರಡಿದ ಕುಕಲ್ಪನೆಗಳಿಗೆ ಇತಿಮಿತಿಯೇ ಇಲ್ಲ. ಈ ಪ್ರಕರಣ ಮುಗಿದು ಎಷ್ಟೋ ದಿನಗಳಾದ ಮೇಲೆ ನಮಗೆ ಸುದ್ದಿ ಮುಟ್ಟಿತು. ನಾನು ದಂಪತಿಗಳಿಗೆ ಶುಭಕೋರಿ ಟೆಲಿಗ್ರಾಂ ಕಳುಹಿಸಿದೆ.

ರಾಜಬಹದ್ದೂರ್ ದೇಶದ ಗಡಿಯಲ್ಲಿ; ರೀತಾ ರಾಜಸ್ಥಾನದ ಕುಗ್ರಾಮದಲ್ಲಿ.

ಆ ಊರಿಗೆ ಟೆಲಿಫೋನಿನ ಸಂಪರ್ಕವಿರಲಲ್ಲವಾದುದರಿಂದ ಅವಳೊಡನೆ ಮಾತಾಡುವ ಅವಕಾಶ ದೊರೆಯಲಿಲ್ಲ. ಅವಳೂ ಈ ಕಡೆ ಬರಲಿಲ್ಲ. ನಾವೂ ಆ ಕಡೆ ಹೋಗಲಿಲ್ಲ. ದಿನಗಳು ಗಣನೆಗೆ ಬಾರದೆ ಉರುಳಿದುವು. ಬಹುಶಃ, ಅವಳನ್ನು ನೋಡದೆ ಮೂರು ವರ್ಷ ಮೂರು ತಿಂಗಳಾದುವೇನೋ. ಹೇಳಿ ಕೊಳ್ಳುವುದು ಲಜ್ಜೆಯೆನಿಸುತ್ತದೆ, ನಿಜ. ಆದರೂ ಅದೇಕೋ ಸಮಯ ಕೂಡಿ ಬಂದಿರಲಿಲ್ಲ-ಅಥವಾ ಮನಸ್ಸು ಹೊಂದಿ ಬರಲಿಲ್ಲ. ಈ ಸಲ ನೋಡಿಯೇ ತೀರಬೇಕೆಂದು ಹೊರಟೆ. ಆ ಕುಗ್ರಾಮಕ್ಕೆ ಕಾರು ಹೋಗ ಬಹುದಾದ ಒಳ್ಳೆಯ ರಸ್ತೆ ಇಲ್ಲ. ಒಂಟೆಯ ಬಂಡಿಗಳು ಹರಿಯುವ ಹಾದಿ ಯಲ್ಲಿ ಜೀಪಿನ ಸಹಾಯದಿಂದ ಮಾರ್ಗಾನುಕ್ರಮಣ ಕೈಕೊಂಡೆ. ಪಯಣದ ಕಷ್ಟಕ್ಕಿಂತ ಅವಳನ್ನು ನೋಡುವ ಉದ್ದೇಶದಲ್ಲಿ ಪೂರ್ಣ ಲಕ್ಷ್ಯವಿತ್ತು. ನಾನು ಹೊರಟಿರುವುದು ಅವಳಿಗೆ ತಿಳಿಯದು. ಊರಿನಲ್ಲಿದ್ದಾಳೋ ಇಲ್ಲವೋ ಎಂಬುದನ್ನು ತಿಳಿದುಕೊಂಡು ಬರಬಹುದಾಗಿತ್ತು ಎಂಬ ಯೋಚನೆಯೂ ಬಂತು. ಏನೇ ಇರಲಿ, ಹೊರಟಿದ್ದೇನಲ್ಲ, ಎಂದುಕೊಂಡು ಪಯಣವನ್ನು ಮುಂದುವರಿಸಿದೆ. ಬಯಲು ಪ್ರದೇಶವಾದುದರಿಂದ ಆ ಕುಗ್ರಾಮ ದೂರ ದಿಂದಲೇ ಕಣ್ಣಿಗೆ ಬಿತ್ತು. ಅಂಕು ಡೊಂಕಿನ ಹಾದಿಯನ್ನು ಕಳೆದು ಬಹುದಾ

ಪುರ ಮುಟ್ಟಿ ಆ ಮನೆಯನ್ನು ತಲುಪಿದಾಗ ಹಿರಣ್ಮಯನಾದ ಸೂರ್ಯ ಪಡುವಣ ಮಟ್ಟಿಗೆ ಇಳಿಯುತ್ತಿದ್ದ. ನಾಡು ಹೆಂಚಿನ ಮನೆಗಳ ಸಮುದಾಯ ದಲ್ಲಿ ಕುಸಂಸ್ಕಾರ ಪೀಡಿತ ಜನವಾರಿಧಿಯನ್ನು ನೋಡಿದಾಗ ಮನಸ್ಸು ಮಂಜಿನಂತೆ ಕರಗಿತು. ಗಾಳಿಬೆಳಕುಗಳಿಗೆ ಇನಿತೂ ಆಸ್ಪದವಿಲ್ಲದ ನಾಡು ಹೆಂಚಿನ ಮನೆಯ ಮುಂದೆ ಜೀಪು ನಿಂತಿತು. ಸೊಟ್ಟಪಟ್ಟ ಗೋಡೆಯ ದೊಡ್ಡ ಮನೆಯನ್ನು ನೋಡುತ್ತಾ ಅಂದುಕೊಂಡೆ.....ನಮ್ಮ ಕಡೆಯಂತಹ ಜಡಿ ಮಳೆ ಇಲ್ಲಿ ಸುರಿದರೆ ಆ ಕ್ಷಣವೇ ಈ ಮನೆ ನೆಲಸಮವಾದೀತು !

ಜೀಪು ಮನೆಯ ಬಳಿ ನಿಂತು ನಾವು ಭೂಸುರರಂತೆ ಅದರಿಂದ ಇಳಿ ದಾಗ ಹೆಂಗಳೆಯರೂ ಮಕ್ಕಳೂ ತಲೆಬಾಗಿಲಿನಲ್ಲಿ ಹಣಿಕಿದರು. ತಲೆಯ ಮೇಲೆ ಸೆರಗು ಹೊದ್ದು ಮುಖವನ್ನು ಮರೆಮಾಡಿಕೊಂಡ ವೃದ್ಧೆ ಎಲ್ಲರನ್ನೂ ಹಿಂದೆ ಬಿಟ್ಟು ಮುಂದೆ ಬಂದಳು.

ನಾನು ಕರಗಳನ್ನು ಜೋಡಿಸಿದೆ "ಪ್ರಣಾಮ್ ಮಾತಾಜೀ !"

"ಪ್ರಣಾಮ್ ಜೀ !"

"ನಾವು ರೀತಾ ಕಡೆಯವರು. ಅವಳನ್ನು ನೋಡಲು ಬಂದಿರುವೆವು."

"ಬನ್ನಿ, ಈಗಷ್ಟೆ ಬಾವಿಕಡೆ ಹೋಗಿದ್ದಾಳೆ....ಇಷ್ಟರಲ್ಲೇ ಬರುತ್ತಾಳೆ."

ನಮ್ಮವರನ್ನು ಹಿಂದೆಯೇ ಬಿಟ್ಟು ಮುಂದೆ ಹೆಜ್ಜೆ ಇಟ್ಟೆ. ರಾಜಾ ಸ್ಥಾನೀ ಒಡವೆಗಳಿಂದಲೂ ಉಡುಪಿನಿಂದಲೂ ಸುಶೋಭಿತರಾದ ನಾಲ್ಕಾರು ಮಂದಿ ಹೆಂಗಳೆಯರು ಹೊಸ್ತಿಲು ದಾಟದೆ ನಿಂತು ಇತ್ತಲೇ ನಿಟ್ಟಿಸತೊಡಗಿ ದರು. ಘೋಷಾ ಸಂಪ್ರದಾಯ ಎಲ್ಲರಲ್ಲೂ ಕಾಣಿಸುತ್ತದೆ. ತಿಳಿವಳಿಕೆಯ ಮಟ್ಟ ಎಷ್ಟೆಂಬುದನ್ನು ಊಹಿಸುವುದು ಕಷ್ಟ. ಪ್ರಾಪಂಚಿಕ ವ್ಯವಹಾರ ಜ್ಞಾನವಂತೂ 'ಸೊನ್ನೆ' ಎನ್ನಬಹುದು. ಎದೆಯಾಳದಿಂದ ನೀಳವಾದ ಉಸಿ ರೊಂದು ನನಗರಿಯದಂತೆಯೇ ಹೊರಹೊಮ್ಮಿತು. ಆ ಅವರ್ಣನೀಯವೂ ಸಾಮಾನ್ಯವೂ ಆದ ಅನಾಗರಿಕ ವಲಯವನ್ನೂ, ವಿದ್ಯಾಬುದ್ಧಿರಹಿತ ಮಂದಿಯನ್ನೂ ಶಾಂತ-ಶ್ರಾಂತ-ಸ್ತಬ್ಧ-ವಿನಮ್ರತೆಗಳಿಂದ ದಿಟ್ಟಿಸುತಿತ್ತು, ನೋಟ.

ಮನೆಯ ಮುಂಭಾಗದಿಂದ ಎದುರುಗಡೆಯ ಹೊಲಕ್ಕೆ ಹರಿದ ಕಾಲು ಹಾದಿಯಲ್ಲಿ ಮೂರುಮಂದಿ ಗೃಹಿಣಿಯರು ತಲೆಯಮೇಲೂ ಸೊಂಟದ

ಮೇಲೂ ನೀರಿನ ಬಿಂದಿಗೆಗಳ ಸಹಿತ ಬರುತಿದ್ದುದು ಗೋಚರಿಸಿತು. ಅವರಲ್ಲಿ ಹಿಂದುಗಡೆ ಬರುತಿದ್ದ ಹೆಣ್ಣೇ ರೀತಾ! ಬಲಗೈ ತುದಿಬೆರಳನ್ನು ಹಿಡಿದು ಕೊಂಡು ಹೆಣ್ಣು ಮಗುವೊಂದು ಹೆಜ್ಜೆಹಾಕುತ್ತಿದೆ !

ಹಾ....!

ಹೃದಯ ಕುಂಡಲಿನಿ ಆನಂದವರ್ಷಣದಿಂದ ತುಂಬಿ ಹೋಯಿತು.

"ಓ....ಅಂಕಲ್ ಎಷ್ಟು ವರ್ಷಗಳ ಮೇಲೆ....?"

ಅಪರೂಪದರ್ಶನದಿಂದ ಸಂತಸದ ಮೂಟೆಯಾಗಿ ಬಿರಿಯುವಂತಾದ ಅವಳು ಬಿಂದಿಗೆಗಳೆರಡನ್ನೂ ಜಗಲಿ ಅಂಚಿನಮೇಲೆ ಜರಿದು ಎದೆಯ ಮೇಲೆ ಮಗುವನ್ನು ಎತ್ತಿಕೊಂಡು ಓಡಿ ಬಂದಳು. ಬೆಂಗಳೂರಿನಲ್ಲಿದ್ದಾಗ ಎಂತೋ ಅಂತೆಯೇ ! ಅದೇ ಅಪೂಯಕ ನಗು ! ಅದೇ ಅಮಿತ ಹುರುಪು !

"ಇದು ನಿನ್ನ ಮಗುವೇ ?"

"ಹೌದು ! ಇನ್ನೊಂದಿದೆ !" ಯಜಮಾನಿಯ ಕಡೆ ತಿರುಗಿ "ಮಾಯಿ! ಆ ಮಗುವನ್ನೂ ಕರೆತನ್ನಿ !" ಎಂದಳು. ಹಸನಾದ ನಗು ಅರಳಿ, ತುಂಬಿದ ಕೆನ್ನೆಗಳಲ್ಲಿ ಗುಳಿಗಳು ಬಿದ್ದು ಮುಖದಂದಕ್ಕೆ ಸೊಬಗನ್ನೀಡಿತು. ಇನ್ನೊಬ್ಬ ಗೃಹಿಣಿ ಒಳಗಿದ್ದ ಮಗುವನ್ನೂ ಕರೆತಂದು ನೀಡಿದಳು. ಒಂದೇ ಬಾರಿಗೆ ಎರಡು ಕೈಯಲ್ಲಿ ಎರಡು ಮುದ್ದಾದ ಮಕ್ಕಳನ್ನು ಎದೆಯಮೇಲೆ ಮೇಲೆ ಎತ್ತಿಕೊಂಡು ಆನಂದಾತಿರೇಕದಿಂದ "ಇಲ್ಲಿ ನೋಡಿ ಅಂಕಲ್ !" ಎಂದು ಆ ಚಂದ್ರ ಚಕೋರಿ ನುಡಿದಾಗ ನನ್ನನ್ನು ಮರೆಯುವುದಿರಲಿ, ಇಡೀ ಜಗತ್ತನ್ನೂ ಸಹ ಮರೆತು ಬಿಟ್ಟೆ. ಹೃದಯ ಹಾಲ್ಗಡಲಾಯಿತು. ಎದೆಯ ಹಕ್ಕಿ ಸಾನಂದದಿಂದ ಉಲಿಯಿತು "ಓ.....! ಈ ಹುಡುಗಿಗೆ ಎಂದೂ ಸೋಲಿಲ್ಲ !"

ನಾನು ಅವಳಿಗಾಗಿ ಮನಮುಟ್ಟಿ ಪ್ರಾರ್ಥಿಸಿಕೊಂಡೆ "ಖಂಡಿತ ಆಕೆ ಸೋಲುವುದೂ ಬೇಡ !"

ನನ್ನ ಎದೆಯ ಮೊರೆ ಆ ಕುಗ್ರಾಮದ ವಲಯದಲ್ಲಿ ಮರುಪ್ರಸಾರ ಹೊಂದಿತು....ಖಂಡಿತ ಆಕೆ ಸೋಲುವುದೂ ಬೇಡ.....ಖಂಡಿತ....ಖಂಡಿತ....

— ೦ —

# ಸೈನಿಕ

ಹಾ....ಈಗೀಗ ಮಸುಕು ನೆನಪು.

ಎದೆಯಲ್ಲಿ ಕ್ರಮರಹಿತ ಮಿಡಿತ. ಮನದಲ್ಲಿ ಅತಿಕ್ರಮಿಸುವ ಯೋಚನಾತರಂಗಗಳು.

ಎಷ್ಟೇ ಯೋಚಿಸಿದರೂ ಸ್ಥಿತಿಗತಿಯು ಅರಿವಾಗದು. ಒಮ್ಮೆ ತಿಳಿವು.... ಇನ್ನೊಮ್ಮೆ ಮರೆವು....ಅಥವಾ ಭ್ರಮೆ....ಅಥವಾ ಮಂಪರ....ಅಥವಾ ಅರೆಬರೆ ಜ್ಞಾನ....ಎಲ್ಲಾ ಏನೋ ಒಂದು ರೀತಿ. ಎಷ್ಟೇ ಪ್ರಯತ್ನಿಸಿದರೂ ಅರ್ಥವಾಗುತ್ತಿಲ್ಲ.

ಸುತ್ತಮುತ್ತ ಮಸುಕು ಬೆಳಕು. ಆದರೂ ಏನೂ ಕಾಣಿಸುತ್ತಿಲ್ಲ, ಅದು ತಿಂಗಳಿನ ತಿಳಿಬೆಳಕೋ ಬೆಳಗಿನ ಮುಂಬೆಳಗೋ ಊಹಿಸುವುದೂ ಕಷ್ಟ. ನಾನೆಲ್ಲಿರುವೆ ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸಿದೆ. ಆದರೆ ಮನಸ್ಸು ಇನ್ನೂ ಅಷ್ಟು ತಿಳಿಯಾಗಿರಲಿಲ್ಲವೇನೋ....

ಮೈ ಕೈಗಳ ಉರಿ...ಅಗಾಧವಾದ ನೋವು.....ತಡೆಯಲಾಗದಂತಹ ಸಿಡಿತ. ಭಯಂಕರ ಬಾಧೆ....ಬಲಗಾಲು ಮುರಿದು ತುಂಡಾದಂತೆ.....ದೇಹ ದಾದ್ಯಂತ ನರತಂತುಗಳು ಕಿತ್ತುಹೋಗುವಂತೆ ಸಿಡಿಯುತ್ತಿವೆ.....ಹಾ ! ತಾಳಲಾರೆ.....

ಅಸವವನ್ನು ಕುಡಿದವರಂತೆ ವಿವಶ ಜಡಿಮೆ.....ಭಾರ.

ಯೋಚಿಸಿದರೂ ಹೊಳೆಯಲಾಗದಂತಹ ಮಂಪರ.....

ಉರಿ.....ಉರಿ....ತಾಳಲಾರೆ.....

ಮನಸ್ಸಿನ ಮಂಪರ ಸ್ವಲ್ಪ ಸ್ವಲ್ಪವಾಗಿ ಹರಿಯುತ್ತಿದೆ. ನಾನು ನಾಲ್ಕನೆಯ ರೆಜಿಮೆಂಟನಲ್ಲಿ ಮುನ್ನುಗ್ಗಿದುದೆಂದು ? ನಿನ್ನೆಯೆ ? ಮೊನ್ನೆಯೇ ?..... ಹಾಂ, ಈಗ ನೆನಪಿಗೆ ಬಂತು ಹದಿನೆಂಟನೆಯ ತೇದಿ.

ಹಾ.....ನೋವು.

ಎಡಗೈ ಬೆನ್ನಿನಡಿ ಸಿಕ್ಕಿ ನೆಜ್ಜುಗುಜ್ಜಾಗಿ ಮರವಟ್ಟು ನಿರ್ಜೀವ ವಾಗಿದೆ. ಎಳೆದುಕೊಳ್ಳೋಣವೆಂದರೂ ಆಗದು. ಭುಜದ ಕೀಲು ತಪ್ಪಿ

ದಂತೆ ಭಯಂಕರ ನೋವು. ಬಲಗಾಲು ಮುರಿದು ಹೋದಂತೆ ಸಿಡಿದೊಡೆಯುತ್ತಿದೆ. ಹಾ....ತಾಳಲಾರೆ....ಉರಿ....ಉರಿ.

ಮರವಟ್ಟ ಕೈಯನ್ನು ಎಳೆದುಕೊಳ್ಳಲು ಉದ್ಯುಕ್ತನಾದೆ. ಆದರೆ ಕೈಯನ್ನು ಅಲುಗಿಸಲಾಗದಂತಹ ಭಯಂಕರ ನೋವು. ನೋವನ್ನು ತಡೆಯಲಾಗದೆ ಚೀರಿದೆ. ಕಣ್ಣುಗಳಲ್ಲಿ ಕಂಬನಿಗಳು ಮೊಳೆತುವು. ತುಟಿ.... ನಾಲಿಗೆಗಳು ಒಣಗುತ್ತಿವೆ.

ನಾನೇಕೆ ಇಲ್ಲಿ ಬಿದ್ದಿರುವೆ? ಯಾರಾದರೂ ಬನ್ನಿ....ಸಹಾಯಮಾಡಿ!

ಬಾಯಾರಿ ಎದೆಯೊಣಗಿ ಈಗಲೀಗ ಜೀವ ಚಿಮ್ಮುತ್ತಿರುವಂತೆ ಭಾಸವಾಗುತ್ತಿದೆ. ಹಾ....ತಾಳಲಾರೆ....ಕೈ ಬಿಡಿಸಿಕೊಳ್ಳೋಣವೆಂದರೂ ಆಗದಲ್ಲಾ, ಎಲ್ಲರೂ ಎಲ್ಲಿ ಹೋಗಿದ್ದಾರೆ? ಯಾರೂ ನನ್ನ ಸಹಾಯಕ್ಕೆ ಇಲ್ಲವೇ? ಓ....! ಯಾರಾದರೂ ಬನ್ನಿ. ಅಣ್ಣಗಳಿರಾ, ಅಷ್ಟು ಉಪಕಾರ ಮಾಡಿರಿ. ನಾನೀ ನೋವು ಸಹಿಸಲಾರೆ.

ಹಾ....ಮಲಗಲೂ ಆರೆ. ಏಳಲೂ ಆರೆ.

ನರಳಿದೆ....ಚೀರಿದೆ....ಕೂಗಿದೆ.....

ಯಾರೂ ಓಗೊಡಲಿಲ್ಲ. ಹತ್ತಿರದಲ್ಲೆಲ್ಲೂ ನರಮನುಷ್ಯರ ಸುಳಿವೇ ಇದ್ದಂತಿಲ್ಲ ಏನು ಗತಿ? ನಾನೆಲ್ಲಿರುವೆ? ಅದೇ ಅಸ್ಪಷ್ಟ....ಸಿಡಿಯುತ್ತಿರುವ ಕೀಲು ನೋವಿನಿಂದಾಗಿ ಕೈ ಹಂದಿಸುವುದೂ ಸಾಧ್ಯವಿಲ್ಲ. ಒಂದಿಷ್ಟು ಹೊರಳುವೆನೆಂದರೂ ಕಾಲು ಅಲುಗಿಸುವಂತಿಲ್ಲ. ಉರಿ....ಉರಿ....ಭಯಂಕರ ಉರಿ. ಗಾಯ ಗಾಯಗಳೂ ಉಪ್ಪು ಸುರಿದಂತೆ ನೋಯುತ್ತಿವೆ. ಹಿಂದಲೆ ಜಜ್ಜಿ ತಾಳಲಾಗದಷ್ಟು ನೋವಿನಿಂದ ಕೂಡಿದೆ. ಸಹಿಸಲಾಗದೆ ಕಳೆದುಳಿದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಕೂಗಿದೆ....ಯಾರಾದರೂ ಸಹಾಯಕ್ಕೆ ಬನ್ನಿ! ನಮ್ಮವರೆಲ್ಲಾ ಎಲ್ಲಿ ಹೋದಿರಿ? ನನ್ನನ್ನು ಬಿಟ್ಟು ಹೋದುದಾದರೂ ಏಕೆ?

ಯಾರಿದ್ದಾರೆ ಅಲ್ಲಿ? ಬಹುಶಃ ಭೂತಾದಿ ಪಿಶಾಚಿಗಳಿಗೂ ನನ್ನ ಮೇಲೆ ಕರುಣೆ ಮೂಡಲಿಲ್ಲವೇನೋ....ಮೂಡಿದ್ದರೆ ಈ ನರಳುವಿಕೆ ತಪ್ಪುತಿತ್ತು. ಹಾಯ್! ನಾನು ತಾಳಿಕೊಳ್ಳಲಾರೆ. ಉರಿ....ಉರಿ.... ನೋವು ಪ್ರಾಣಾಂತಕ ನೋವು....

ಸ್ವಲ್ಪ ಬಲಮುಗ್ಗುಲಿಗೆ ಹೊರಳಿ ಕೈಯನ್ನು ಎಳೆದುಕೊಳ್ಳಲು

ಪ್ರಯತ್ನಿಸಿದೆ.....ಆದರೆ ನೋವು.....ಕೀಲು ಕೀಲಿನ ನೋವು.....ತಡೆಯುವುದಾದರೂ ಎಂತು? ಅನುಭವಿಸಲಾಗದೆ ಚೀರಿದೆ... ನರಳಿದೆ.... ಅತ್ತೆ..... ಎಳೆಯ ಅಣುಗನಂತೆ ಅತ್ತೆ.

ಒಮ್ಮೊಮ್ಮೆ ನೆನಹು ನಿಚ್ಚಳವಾಗಿ ಮೂಡುತ್ತದೆ. ಆದರೆ ಸ್ವಲ್ಪ ಹೊತ್ತು ಮಾತ್ರ. ಆಗ ಗಡಿಪ್ರದೇಶದಲ್ಲಿ ಓಡಾಡುತಿದ್ದುದು, ಗುಂಡುಗಳ ಘರ್ಜನೆ, ಜನರ ಚೀತ್ಕಾರ ಬೊಬ್ಬೆ ಇನ್ನೂ ಏನೇನೋ.....ಮನಃಪಟಲದ ಮೇಲೆ ಮಿಂಚಿ ಮಾಯವಾಗುತ್ತವೆ. ಕೆಲವೊಮ್ಮೆ ಸ್ವಲ್ಪಹೊತ್ತು ಸ್ಥಿರವಾಗಿ ನಿಲ್ಲುತ್ತವೆ. ಆ ನೆನಹುಗಳನ್ನು ಉಳಿಸಿಕೊಳ್ಳುವಷ್ಟು ಆಸ್ತೆಯಾಗಲೀ ಸಹನೆಯಾಗಲೀ ಇಲ್ಲ. ಎಲ್ಲವನ್ನೂ ಮೂಲೋತ್ಪಾಟನೆ ಮಾಡಿ ಕಣ್ಮುಚ್ಚಿ ಅಪಾರವಾದ ನೋವನ್ನು ನುಂಗಿಕೊಳ್ಳಲು ಯತ್ನಿಸುವೆ.

ಮುಚ್ಚಿದ ಕಣ್ಣು ತೆರೆಯದೆ ಸ್ವಲ್ಪ ಹೊತ್ತು ಮಲಗಿದೆ.

ತಂಗಾಳಿ ತೀಡುತಿತ್ತು.

ವಾಯುದೇವನಾದರೂ ಈ ಜೀವಕ್ಕೆ ತಂಪೂಡಿಸಲಿ ಎಂದು ಮೊರೆಯಿಡುತಿತ್ತು ಅಂತರಂಗ. ಕಣ್ತೆರೆದಾಗ ಬೆಳಕು ಇನ್ನಷ್ಟು ತಿಳಿಯಾಗಿತ್ತು. ಅದು ಬೆಳಗಿನ ಮುಂಬೆಳಕೋ ಬೈಗಿನ ಹಿಂಬೆಳಕೋ ಊಹಿಸಲಾರದಾದೆ. ಮೈ ನರನರಗಳೂ ಸಿಡಿಯುವಂತೆ ತೋರುತ್ತಿದೆ. ಗಂಟಲೊಣಗಿ ಉಸಿರು ಕಟ್ಟುತ್ತಿರುವಂತೆ ತೋರಿತು. ಒಣತುಟಿಗಳನ್ನು ನಾಲಿಗೆಯಿಂದ ಸವರಿಕೊಂಡೆ. ಆದರೆ ನಾಲಿಗೆಯಲ್ಲಿ ತೇವವಿದ್ದರಷ್ಟೇ? ನಾನೆಲ್ಲಿರುವೆನೆಂಬುದನ್ನರಿಯಲು ಸುತ್ತಮುತ್ತ ನೋಡಿದೆ.....ನೋಟ ಹರಿಯುವಷ್ಟು ದೂರ ನೋಡಿದೆ. ಆ ಮಬ್ಬು ಬೆಳಕಿನಲ್ಲಿ–ಅರೆಬರೆ ಜ್ಞಾನದಲ್ಲಿ ಎಲ್ಲವೂ ಅಸ್ಪಷ್ಟ..... ಅಗಮ್ಯ.....ಅನುತಾಪ.....

ದೂರದಲ್ಲೆಲ್ಲೋ ನರಿಗಳು ಊಳಿಡುತ್ತಿವೆ.....ಅಥವಾ ತೋಳಗಳಿದ್ದರೂ ಇರಬಹುದೇನೋ. ಅವು ನನ್ನನ್ನು ಜೀವಸಹಿತ ಬಿಟ್ಟಿರುವುದೂ ಸಹ ಹೆಚ್ಚೆ.

ಹಾ.....!

ಕ್ಷಣೇ ಕ್ಷಣೇ ಬೆಳಕು ಹೆಚ್ಚುತಿತ್ತು.

ಈಗೀಗ ಅದು ಬೆಳಗಿನ ಮುಂಬೆಳಕು ಎಂಬುದು ಸ್ಪಷ್ಟವಾಗುತ್ತಿದೆ. ಆದರೆ, ಚೆನ್ನಾಗಿ ಬೆಳಕು ಮೂಡದಿದ್ದುದರಿಂದ ನಾನೆಲ್ಲಿರುವೆ ಎಂಬುದನ್ನು

ಅರಿತು ಕೊಳ್ಳುವಂತಿಲ್ಲ. ಮಸುಕು ಮಸುಕಾಗಿ ಕಾಣಿಸುವ ಗಿಡಮರಗಳಿಂದ ನಾನಿರುವುದು ಎಲ್ಲೋ ಕಾಡುಮೇಡಿನಲ್ಲಿ ಎಂಬುದು ಖಚಿತವಾಗುತ್ತಿದ್ದಂತೆ ಮೈಯಲ್ಲಿ ಛಳಿ ಮೂಡಹತ್ತಿತು.

ಹಾ, ಉರಿ, ತಡೆಯಲಾಗದ ಉರಿ....ಉಗ್ರವಾದ ಉರಿ.

ನಾಲಿಗೆ ಗಂಟಲು ತುಟಿಗಳು ಒಣಗಿ ಕಟ್ಟಿಗೆಯಂತಾದುವು.

ಒಂದು ಬೊಗಸೆಯಲ್ಲ ; ಒಂದು ಚೊಂಬಲ್ಲ ; ಒಂದು ಕೊಡ ನೀರು ಸುರಿದರೂ ಕುಡಿಯೋಣ ಎಂಬಷ್ಟು ಆಕರ. ಯಾರಾದರೂ ನನ್ನನ್ನು ಒಯ್ದು ತಣ್ಣನೆಯ ಹೊಳೆಯಲ್ಲಿ ಮುಳುಗಿಸಿದ್ದರೆ ಎಂತಹ ಪುಣ್ಯ ಬರುತಿತ್ತೋ.... ಎದ್ದು ಕೂರಲು ಪ್ರಯತ್ನ ಪಟ್ಟೆ. ಬೆನ್ನಿನಡಿಗೆ ಸಿಕ್ಕಿ ಅಪಾರವಾದ ನೋವಿಗೊಳಗಾದ ಕೈಯನ್ನು ಅಲುಗಿಸಲಾಗಲಿಲ್ಲ. ಬಲಗೈಯೊಂದರ ಸಹಾಯದಿಂದ ಏಳೋಣವೆಂದು ಪ್ರಯತ್ನಿಸಿ ಯಾತನೆಯನ್ನು ಅನುಭವಿಸಿದೆ.

ಆ ಗಂಭೀರ ನೆಲೆಯಲ್ಲಿ, ಭಯಂಕರ ರುದ್ರಭೂಮಿಯಲ್ಲಿ, ಭೀಷಣ ಸನ್ನಿವೇಶದಲ್ಲಿ ತಂಗಾಳಿ ತಣ್ಣಗೆ ತೀಡುತ್ತಿರುವುದೂ ಸಹ ವಿಶೇಷವೆ.

ಮೈಯಡಿಯಲ್ಲಿರುವ ಕಲ್ಲುಮುಳ್ಳುಗಳು ನಿಷ್ಕರುಣೆಯಿಂದ ಮೈಗೊತ್ತುತ್ತಿವೆ. ಕ್ರಿಮಿಕೀಟಗಳೂ ಸೇಡು ತೀರಿಸಿಕೊಳ್ಳುತ್ತಿವೆ. ಅವುಗಳಿಂದ ತಪ್ಪಿಸಿಕೊಳ್ಳಲು ಅತ್ತಿತ್ತ ಹೊರಳಾಡಿ ಮೈ ಇನ್ನಷ್ಟು ನೋವಿಗೊಳಗಾಯಿತು. ಹಸಿಯ ಗಾಯಗಳಲ್ಲಿ ನೆತ್ತರು ಹೆಪ್ಪುಗಟ್ಟಿತ್ತು. ಮುರಿದ ಕಾಲು ಪ್ರಾಣವನ್ನು ಹಿಂಡುತ್ತಿದೆ. ಕಳೆದುಳಿದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಕೂಗಿದೆ "ಯಾರಾದರೂ ಸಹಾಯಕ್ಕೆ ಬನ್ನಿ ! ದಯಮಾಡಿ ಬನ್ನಿ !"

ಯಾರೂ ಓ ಗೊಡಲಿಲ್ಲ.

ಪಶು ಪಕ್ಷಿಗಳೂ ಸಹ ಕಿವುಡೋ ಏನೋ.

ಯಾರೊಬ್ಬರ ಸುಳಿವೂ ಇಲ್ಲ. ಮೂಡಣ ದಿಕ್ಕಿನಲ್ಲಿ ಬೆಳ್ಳಂಬೆಳ ಕಾಯಿತು. ಸುತ್ತಮುತ್ತಿನ ಕಾಡು ಪ್ರದೇಶವು ಕಣ್ಣಿಗೆ ಬಿದ್ದಾಗ ನನ್ನ ಅಸಹಾಯಕ ಸ್ಥಿತಿ ಕಣ್ಣುಗಳಲ್ಲಿ ಕಂಬನಿಯನ್ನು ತರಿಸಿತು. ಪಾಕಿಸ್ತಾನೀಯರ ಭಯವಿದ್ದರೂ ಚೀರಿದೆ ; ನರಳಿದೆ.

ಬಲಕ್ಕೆ ಹೊರಳಿ ಎಡಗೈಯನ್ನು ಎಳೆದುಕೊಳ್ಳುವ ಪ್ರಯತ್ನ ಮಾಡಿದೆ. ಆದರೂ ಆಗಲಿಲ್ಲ. ಅದು ಮರಗಟ್ಟಿದುದರಿಂದ ಅಲುಗಿಸುವ

ಸಾಮರ್ಥ್ಯ ಬರಲಿಲ್ಲವೋ ಅಥವಾ ಅಗಾಧವಾದ ಭುಜದ ಕೀಲು ನೋವಿನಿಂದ ಅಲುಗಿಸಲಾಗಲಿಲ್ಲವೋ ಹೇಳಲಾರೆ.

ಯಾರೋ ನನ್ನ ಕಿವಿಯಲ್ಲಿ ತಾರಕಮಂತ್ರವನ್ನು ಊದಿದರು,

"ಮರಳಿ ಯತ್ನವ ಮಾಡು. ಮರಳಿ ಯತ್ನವ ಮಾಡು."

ಆ ಶಾಂತ ಸಮುದಾಯಲ್ಲಿ ಆ ನಿಶ್ಶಬ್ದ ಪ್ರಾಕಾರದಲ್ಲಿ ಅಲೆಅಲೆಯಾಗಿ ಹರಿದು ಬರುತ್ತಿದೆ ಇದೇ ಧೈರ್ಯವಾಣಿ. ಕಿವಿಗೊಟ್ಟೆ....ಆಲೈಸಿದೆ.... ಓಲೈಸಿದೆ.....

ಕಳೆದುಳಿದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಕೊಸರಾಡಿ ಎದ್ದು ಕುಳಿತೆ. ಎಡಗೈ ಬಿಡುಗಡೆ ಹೊಂದಿತು. ಬಲಗೈಯನ್ನು ಊರಿ ಬೆನ್ನಿಗೆ ಆಧಾರ ನೀಡಿದೆ. ಎಡಗೈಯನ್ನು ಕಟ್ಟಿಗೆಯಂತೆ ಮೆಲ್ಲಮೆಲ್ಲನೆ ಎಳೆದು ಮುಂಭಾಗಕ್ಕೆ ತೆಗೆದುಕೊಂಡೆ. ಕಲ್ಲು ಮುಳ್ಳುಗಳೊತ್ತಿ ಹಳ್ಳತಿಟ್ಟುಗಳಂತಾಗಿತ್ತು. ಭುಜದ ಕೀಲು ಅತೀವ ನೋವಿನಿಂದ ಕೂಡಿದ್ದರೂ ಕೈ ತಿರುಚಿಕೊಂಡು ಬಹಳ ಹೊತ್ತು ಹಿಂಭಾಗಕ್ಕೆ ಸೇರಿ ಹೋಗಿದ್ದುದರಿಂದ ನೋಯುತ್ತಿರಬಹುದು ; ಕೀಲು ತಪ್ಪಿರಲಾರದು ಎನಿಸಿತು ; ದೇವರ ದಯದಿಂದ ಅಷ್ಟಾದರೆ ಸಾಕು.

ಕಾಲು....ಮುಂಗಾಲು ಮುರಿದಿರುವುದಂತೂ ಖಚಿತ. ಅದು ಹೇಗೆ ಮುರಿಯಿತೆಂಬುದನ್ನು ನಾನರಿಯೆ. ಅದರ ನೋವುಣ್ಣುತ್ತಿರುವುದರಿಂದ ತಿಳಿಯಿತು. ಸ್ಥಿತಿಗತಿಯನ್ನು ನೋಡಲಾರದೆ ನೋಡಿತು ನೋಟ ; ಗಮನಿಸಲಾರದೆ ಗಮನಿಸಿತು ಚಿತ್ತ.

ನಾನು ಬಿದ್ದಿರುವುದು ನಮ್ಮ ಗಡಿಯೊಳಗೋ ಪಾಕಿಸ್ತಾನದ ಭೂಮಿಯ ಮೇಲೋ ದೇವರಿಗೇ ಗೊತ್ತು. ಎಡಗೈ ಬೆರಳನ್ನು ಅತ್ತಿತ್ತ ಆಡಿಸಿ ಮಡಿಸಿ ಜೀವಶಕ್ತಿ ಇದೆಯೋ ಇಲ್ಲವೋ ಎಂಬುದನ್ನು ಗಮನಿಸಿದೆ. ಮರಗಟ್ಟಿದುದುಸ್ವಲ್ಪ ಹೊತ್ತಿನ ನಂತರ ಕಡಿಮೆಯಾಗಹತ್ತಿತು.

ಮೂಡಣ ದಿಕ್ಕಿನಲ್ಲಿ ಬಾಲರವಿ ಮೂಡಿ ಬಂದ.

ಚಿಲಿಪಿಲಿ ಗುಟ್ಟತೊಡಗಿದುವು–ಪಕ್ಷಿಗಳು.

ವಾತಾವರಣ ಸುಮನೋಹರವಾಯಿತು.

ನೋಟ ಗಡಿಯಾರದ ಕಡೆ ಹರಿಯಿತು.

ನೋಡಿದೆ, ಹತ್ತೊಂಭತ್ತನೆಯ ತೇದಿ. ನಾನು ನಿನ್ನೆಯಿಂದ ಇಲ್ಲಿ ಬಿದ್ದಿ

ರುವೆ ಎಂಬುದು ಸ್ಪಷ್ಟವಾಯಿತು. ನಿನ್ನೆ ನಮ್ಮ ರೆಜಿಮೆಂಟನ್ನು ಪಾಕೀಸ್ತಾನದ ಗಡಿಯೊಳಗೆ ನಡೆಸಿದ್ದೆವು. ನಿನ್ನೆ ಮಧ್ಯಾಹ್ನದವರೆಗೆ ನಡೆಸಿದ ಉಗ್ರ ಹೋರಾಟ ಚಲನ ಚಿತ್ರದಂತೆ ಮನಃಪಟಲದಮೇಲೆ ಸುಳಿದಳಿಯಿತು.

ಹಾ....!

ಹಿಂದಲೆಗೆ ಬಿದ್ದ ಪೆಟ್ಟು, ಮುರಿದ ಕಾಲಿನ ನೋವು, ತಿರುಚಿದ ಕೈಯಿನ ಕಡುಹಿಂಸೆ. ನಿನ್ನೆಯಿಂದ ಅನ್ನಪಾನಾದಿಗಳಿಲ್ಲ. ರಾತ್ರಿಯ ತಂಪಿನಿಂದಲೋ ಅಥವಾ ವಿಧಿಯ ಮಾಯಕತೆಯಿಂದಲೋ ನನಗೆ ಗಾಢ ನಿದ್ದೆ ಬಂದಿರಬಹುದು ಅಥವಾ ಪ್ರಜ್ಞೆ ತಪ್ಪಿರಬಹುದು. ರಾತ್ರಿಯನ್ನಂತೂ ಹೇಗೊ ಕಳೆದಿರುವೆ. ಮುಂದೇನು ಗತಿ ? ನಮ್ಮವರಿಗೆ ನನ್ನ ವಿಷಯ ಮುಟ್ಟುವುದಾದರೂ ಹೇಗೆ ? ದೇವರೇ, ಪಾಕಿಸ್ತಾನಿಗಳ ಕಣ್ಣಿಗೆ ಬೀಳದಂತೆ ನನ್ನನ್ನು ಕಾಪಾಡು. ಹೇಗಾದರೂ ಕಾಪಾಡು. ನನಗೆ ತಾಯಿ ತಂದೆ ಇದ್ದಾರೆ. ಗತಿಹೀನನಂತೆ ನನ್ನನ್ನು ಇಲ್ಲಿ ಸಾಯಗೊಡಿಸಬೇಡ.

ಸುತ್ತಮುತ್ತ ನೋಡಿದೆ. ಎಲ್ಲಿಯಾದರೂ ಮನುಷ್ಯರ ಸುಳಿವಿದೆಯೆ ಎಂದು. ಓ....ಅಲ್ಲಿ....ನನ್ನ ಹಿಂಭಾಗದಲ್ಲಿ ಕತ್ತು ತಿರುಗಿಸಿ ಹಿಂದಿರುಗಿ ನೋಡುವುದೂ ಸಹ ಕಷ್ಟ. ಎದ್ದು ಹೋಗೋಣವೆಂದರೆ ಮುರಿದ ಕಾಲು. ಬಹಳ ಕಷ್ಟದಿಂದ ಪೆಟ್ಟುಬಿದ್ದ ತಲೆಯನ್ನು ಲೆಕ್ಕಿಸದೆ ಹಿಂತಿರುಗಿ ನೋಡಿದೆ, ಹತ್ತು ಮಾರು ದೂರದಲ್ಲಿ ಜೋಡಿಮರಗಳ ಬುಡಕ್ಕೆ ಮೈಯಾಂತು ಕಾಲುಗಳನ್ನು ಚಾಚಿ ಯಾರೋ ಕುಳಿತಿದ್ದಾರೆ....ಯಾರದು ?

ಮುಖ ಉರ್ಧ್ವಮುಖಿಯಾಗಿದೆ. ಮರಗಳ ಸಂದಿಗೆ ತಲೆಗೊಟ್ಟಿದ್ದಾನೆ. ಒಮ್ಮೆಲೇ ಹೃದಯ ಉಕ್ಕೇರಿ ಬಂತು–ಆ ನಿದ್ರಿತ ವ್ಯಕ್ತಿಯನ್ನು ನೋಡಿ.

“ಯಾರು....ಯಾರು ?”

ಆ ವ್ಯಕ್ತಿ ಹಂದಲಿಲ್ಲ. ಇನ್ನೆಂತಹ ನಿದ್ರೆ? ಸೂರ್ಯ ಮೇಲೇರಿ ಬಂದ. ರಶ್ಮಿಗಳು ಕಣ್ಣು ಕುಕ್ಕುತ್ತಿವೆ. ಆದರೂ ಏಳಸಲ್ಲಾ ಈತ ? ಇಲ್ಲ....ಇಲ್ಲ, ಸದ್ದೆ ಮಾಡುತ್ತಿಲ್ಲ. ತೀಕ್ಷ್ಣ ದೃಷ್ಟಿ ಆಕಾಶವನ್ನೇಕೆ ದೃಷ್ಟಿಸುತ್ತಿದೆ ? ಅದೇನು ದುಮ್ಮಾನವೇ ?

ಆ ನಿರ್ಮಾನುಷ ಅಸುರ ಸಂಭ್ರಾಂತ ಪ್ರಾತಃಸಮಯದಲ್ಲಿ ರುದ್ರ ಭೀಷಣ ಮೌನ ಮನವನ್ನು ಇರಿಯುತ್ತಿವೆ. ಘೋರಘೋರವಾಗಿ ಉರುಳು

ತ್ತಿದೆ ಹೊತ್ತು. ಹಾ....ತಾಳಲಾರೆ. ನೀರು....ನೀರು ಯಾರಾದರೂ ಒಂದು ತೊಟ್ಟು ನೀರು ಹೊಯ್ದು ಉಪಕಾರ ಮಾಡಿ....ಅಯ್ಯಾ, ಅಲ್ಲಿ ಕೂತಿರುವವನೇ ಒಂದಿಷ್ಟು ಎದ್ದು ಬಾ. ನನ್ನ ಮೇಲೆ ದಯೆದೋರು· ಅಯ್ಯೊ, ಹಾಗೇಕೆ ಚೀರಿದೆ? ಶತ್ರುಗಳ ಕಿವಿಗೆ ಧ್ವನಿ ಮುಟ್ಟಿತೆಂದರೆ ಒಂದೇಟಿಗೆ ಮುಗಿಸಿ ಬಿಟ್ಟಾರು. ಹಾ....ಈ ಬಗೆಯ ಬದುಕಿಗಿಂತ ಆ ಬಗೆಯ ಸಾವು ಹಿತವೇನೋ....

ಆದರೆ....ಆದರೆ ನನಗೆ ತಾಯಿ ತಂದೆಯರಿದ್ದಾರೆ. ಬಂಧು ಬಳಗವಿದೆ. ಬದುಕಿನಲ್ಲಿ ಉದ್ದೇಶವಿದೆ. ನಾನು ಶಕ್ತಿಹೀನನಲ್ಲ; ತರ್ಕಹೀನನಲ್ಲ.

ಹಾ....ಯಾರಾದರೂ ನಮ್ಮವರು ಬಂದಾರೆ? ಬರುವುದಿರಲಿ, ಇಲ್ಲಿರುವ ವ್ಯಕ್ತಿಯೇ ನನಗೆ ಸಹಾಯ ಮಾಡನಲ್ಲಾ, ಮಾತಾಡನಲ್ಲಾ? ಮಾನವ ಗತಿ ಏಕೆ ಹೀಗಾಯಿತು? ಆತ ಏತರಿಂದ ಮಾಡಲ್ಪಟ್ಟಿದ್ದಾನೆ? ಮರದಿಂದಲೇ? ಕಬ್ಬಿಣದಿಂದಲೇ? ಹೊತ್ತು ತೀವ್ರಗತಿಯಲ್ಲಿ ಮಿಂಚುತಿತ್ತು. ಆ ಮನುಷ್ಯ ಮಾತ್ರ ಎದ್ದೇಳಲಿಲ್ಲ. ಅಲ್ಲಿಂದಲ್ಲೇ ಹೊರಳಿ ಕುಳಿತು ವ್ಯಕ್ತಿಯನ್ನು ತವಕದಿಂದ ನಿಟ್ಟಿಸಿದೆ. ಹಾಂ. ಇದೀಗ ತಿಳಿಯಿತು.....ಅವನು ರಾಂಸಿಂಗ್! ಖಂಡಿತ ರಾಂಸಿಂಗ್! ಎಂತಹ ಆಶ್ಚರ್ಯ? ಅವನೇಕೆ ಹೀಗಾದ? ರಾಂಸಿಂಗ್ ಅಲ್ಲ; ಅಲ್ಲವೇನೋ.....ಛೀ! ಅಲ್ಲವೆನ್ನುವುದು ಹೇಗೆ? ಅವನು ರಾಂಸಿಂಗನೇ ಹೌದು. ಕತ್ತೆತ್ತಿ ಊರ್ಧ್ವ ಮುಖಿಯಾಗಿ ಕುಳಿತಿರುವುದರಿಂದ ಗೊತ್ತಾಗುವುದಿಲ್ಲ. ಆತನಿಗೆ ಕತ್ತು ನೋಯದೇ ಹಾಗೇಕೆ ಕುಳಿತಿದ್ದಾನೆ? ಅಯ್ಯಾ, ರಾಂಸಿಂಗ್! ಹಾಗೇಕೆ ಕುಳಿತಿದ್ದಿ? ಒಂದಿಷ್ಟು ಎದ್ದು ಬಾಪ್ಪಾ, ನಾನಿಲ್ಲಿ ಸಾಯುತ್ತ ಬಿದ್ದಿರುವೆ. ಒಂದು ಗುಟುಕು ನೀರು ಕೊಡುವಷ್ಟು ಉಪಕಾರ ಮಾಡು.

ಓ....ರಾಂಸಿಂಗ್ ಅಲುಗಲೇ ಇಲ್ಲ. ಅವನಿಗೇನಾಯಿತು? ಈ ಅನೀತಿಯುತ ಸಂಗ್ರಾಮವನ್ನೂ ಧರ್ಮಹೀನ ಮಾನವರನ್ನೂ ನೋಡಿ ಕಂಗೆಟ್ಟಿದ್ದಾನೋ ಏನೋ. ಓ.....ನಾನು ಯೋಚಿಸಲೂ ಆರೆ, ಚಿಂತಿಸಲೂ ಆರೆ. ನನಗೊಂದು ಬೊಗಸೆ ನೀರು ನೀಡಿ ಈ ಜೀವವನ್ನು ಉಳಿಸಪ್ಪಾ ರಾಂಸಿಂಗ್. .....ಅಯ್ಯೊ, ನೀನೇಕೆ ಇಷ್ಟು ನಿರ್ದಯನಾದೆಯೋ ನನಗಂತೂ ಅರ್ಥವಾಗುವುದಿಲ್ಲ. ನೀನೇ ಕಿವುಡಾದಮೇಲೆ ಇನ್ನಾರು ನನ್ನ ನೊರೆಗೆ ಕಿವಿಗೊಡ

ಬೇಕು ?

ಮೈ ನಿಶ್ಶಕ್ತಿಯಿಂದ ನಡುಗುತಿತ್ತು. ನರನರಗಳೂ ಕಿತ್ತು ಹೋಗು ವಂತೆ ಭಾಸವಾಗುತ್ತಿದೆ. ಉರಿ–ಸಂಕಟ–ನೋವು–ಹಸಿವು -ಬಾಯಾರಿಕೆ..... ನನ್ನ ಮಾನವ ಶಕ್ತಿಯನ್ನೆಲ್ಲಾ ವಿನಿಯೋಗಿಸಿದರೂ ಯೋಧಶಕ್ತಿಯನ್ನೆಲ್ಲಾ ಧಾರೆಯೆರೆದರೂ ಸಹನಾತೀತವಾಗಿದೆ ಈ ಕಡು ಹಿಂಸೆ; ಆತ್ಮದ ಪ್ರತಿಹಿಂಸೆ. ಈ ಪರಿತಾಪವನ್ನು ಬಣ್ಣಿಸಿ ಪೂರೈಸಲು ನಮ್ಮ ಭಾಷೆಯಲ್ಲಿ ಶಬ್ದಗಳೇ ಇಲ್ಲ ಬಹುಶಃ.

ಹೇಗಾದರೂ ರಾಂಸಿಂಗನಲ್ಲಿಗೆ ಹೋಗುವ ಅಭಿಲಾಷೆ ಮೂಡಿತು. ಅದರ ಮೊದಲು ನನ್ನ ನೀರಿನ ಡಬ್ಬಿ ಏನಾಯಿತೋ, ತುತ್ತಿನ ಚೀಲ ಇನ್ನೆಲ್ಲಿ ಬಿದ್ದಿದೆಯೋ ನೋಡಿಕೊಳ್ಳುವ ಅಗತ್ಯವೂ ಇತ್ತು. ಸುತ್ತಮುತ್ತ ತಡುಕಾಡಿತು ನೋಟ. ನನ್ನ ಅಪರ ಪ್ರಾಂತ್ಯದಲ್ಲಿ ನೀರಿನ ಡಬ್ಬಿ ಸಿಡಿದು ಬಿದ್ದಿತ್ತು. 'ದೇವರೇ ಅದರಲ್ಲಿ ನೀರಿರುವಂತೆ ಮಾಡು' ಎಂದು ಭಗವಂತನಿಗೆ ನೊರೆಯಿಟ್ಟುಕೊಂಡು ಹಿಮ್ಮೊಗವಾಗಿ ತೆವಳಲು ಪ್ರಯತ್ನಿಸಿದೆ. ಮುರಿದ ಕಾಲನ್ನೆಳೆದುಕೊಂಡು ತೆವಳುವುದು ಸಾಮಾನ್ಯವಲ್ಲ. ನೋವಿನಿಂದ ಕೂಡಿದ ಎಡಗೈಯನ್ನು ಊರುವಂತೆಯೂ ಇಲ್ಲ. ಅಂತೂ ತೆವಳಿದೆ.....ಹೇಗೆ ತೆವಳಿ ದೆನೋ ದೇವರಿಗೇ ಗೊತ್ತು. ಬಹುಶಃ ಆತನೇ ನನ್ನನ್ನು ಆ ಕಡು ಹಿಂಸೆ ಯಲ್ಲಿ ತೆವಳಿಸಿದ್ದಾನೆ. ಇಲ್ಲದಿದ್ದಲ್ಲಿ ಖಂಡಿತ ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ನೀರಿನ ಡಬ್ಬಿಯ ಬುಡಕ್ಕೆ ಹೋದೆನೆಂದರೆ ಅಲ್ಲಿಂದ ರಾಂಸಿಂಗನಲ್ಲಿಗೆ ಉಳಿಯುವುದು ಅರ್ಧ ಹಾದಿ ಮಾತ್ರ. ಕುಳಿತಂತೆಯೇ ಹಿಮ್ಮೊಗವಾಗಿ ಕಾಲೆಳೆದುಕೊಳ್ಳುತ್ತ ಸ್ವಲ್ಪಸ್ವಲ್ಪವಾಗಿ ಸರಿದೆ. ಸಲಸಲಕ್ಕೂ ಪ್ರಾಣ ಚಿಮ್ಮುವಂತಹ ನೋವು. ಆದರೂ ಹಿಂದೆಗೆಯಲಿಲ್ಲ. ನೀರಿನ ಡಬ್ಬಿ ಇನ್ನೂ ಒಂದು ಮಾರು ದೂರದಲ್ಲಿರುವಾಗಲೇ ಕೈ ಚಾಚಿದೆ ಸಿಗಲಿಲ್ಲ. ಹಾಗೆಯೆ ಇನ್ನಷ್ಟು ಸರಿದು ಅದನ್ನೆತ್ತಿಕೊಂಡೆ. ಅದರಲ್ಲಿದ್ದುದು ಅರ್ಧ ನೀರು ಮಾತ್ರ. ಅಷ್ಟಾದರೂ ಸಿಕ್ಕಿದುದು ನನ್ನ ಪುಣ್ಯ. ಎಡಗೈ ಸಹಾಯಕ್ಕೆ ಬರುವಂತಿರ ಲಿಲ್ಲವಾದುದರಿಂದ ಬಲಗೈಯೊಂದರಿಂದಲೇ ಮುಚ್ಚಳ ತೆಗೆಯಬೇಕಾಗಿತ್ತು. ಕಾಲುಗಳ ಮಧ್ಯೆ ಡಬ್ಬಿಯನ್ನು ಅಮುಕಿ ಹಿಡಿದುಕೊಂಡು ಮುಚ್ಚಳ ತೆಗೆದು ನೀರನ್ನು ಕುಡಿದೆ. ಇನ್ನೊಮ್ಮೆ ಕುಡಿಯಲು ಬೇಕಾಗಬಹುದೆಂದು

ಅರ್ಧನೀರನ್ನು ಉಳಿಸಿ ಮುಚ್ಚಳ ಹಾಕಿ ಭದ್ರಪಡಿಸಿಕೊಂಡೆ. ತುತ್ತಿನ ಚೀಲ ಅಲ್ಲೇ ಅದರಾಚೆ ಬಿದ್ದಿತ್ತು. ಅದರೆಡೆಗೆ ದೃಷ್ಟಿ ಹರಿದರೂ ರಾಮುಸಿಂಗನ ಬಳಿಗೆ ಹೋಗುವ ತವಕದಿಂದಾಗಿ ಅದರ ಗೋಜಿಗೆ ಹೋಗಲಿಲ್ಲ. ನೀರಿನ ಡಬ್ಬಿಯನ್ನು ಭುಜಕ್ಕೆ ನೇತುಹಾಕಿಕೊಂಡು ರಾಮುಸಿಂಗನೆಡೆಗೆ ಹಿಮ್ಮೊಗವಾಗಿ ಮತ್ತೆ ತೆವಳ ತೊಡಗಿದೆ. ಪ್ರಾಣಾಂತಕ ನೋವಿನೊಂದಿಗೆ ತೆವಳಿದುದು ಉದ್ದಂಡ ಸಾಹಸವೇ ಸೈ. ಎರಡು ಮರಗಳ ಬುಡಕ್ಕೆ ಮೈಯಾಂತು ಕುಳಿತ ಧೀರ ವ್ಯಕ್ತಿ, ನರಳುತ್ತ ತೆವಳುತ್ತ ನಾನು ಬಳಿಗೆ ಬಂದಾಗಲೂ ಅಲುಗಡೆ ಕುಳಿತಿದ್ದುದು ಅನುಮಾನ ಮೂಡಿಸಿತು. ಹತ್ತಿರ ಹೋಗಿ ಮೈಮುಟ್ಟದೆ ತಣ್ಣಗಿತ್ತು. ಬಿರಿದ ಕಣ್ಣುಗಳು ಚಲಿಸಲಿಲ್ಲ....

ಅಯ್ಯೋ, ಶಿವನೇ !

ದೇವರ ಸಾಕ್ಷಿಯಾಗಿಯೂ ಹೇಳುವೆ. ಈ ಪ್ರಾಣ ಈಗಲೇ ಚಿಮ್ಮಿದರೆ ಸಾಕು ಎನಿಸಿತು. ಆತ ನನಗಿಂತ ಬಹಳ ಹಿರಿಯ ನಿಷ್ಠಾವಂತ ದೇಶಭಕ್ತ. "ನಾನೂ ಸತ್ತರೂ ಗಡಿ ಕಾಯುತ್ತಿರುವೆ. ಶತ್ರುಗಳಿಗೆ ಒಂದಿಂಚು ನೆಲವೂ ಹೋಗಬಾರದು ಎನ್ನುತಿದ್ದ. ಬಿಟ್ಟ ಕಣ್ಣು ಮುಚ್ಚದೆ ಕುಳಿತಿರುವ ರೀತಿಯನ್ನು ನೋಡಿದರೆ ಇನ್ನೂ ಕಾವಲು ಕಾಯುತ್ತಲೇ ಇರುವನೋ ಎಂಬಂತಲೇ ಇತ್ತು. ದುಃಖವುಮ್ಮಳಿಸಿ ಬಂತು. ಅಳುವ ತ್ರಾಣವಿಲ್ಲದಿದ್ದರೂ ಅತ್ತೆ. ಆತನ ಕೈ ಕಾಲುಗಳು ಆಡಿಸುವಷ್ಟು ಮೃದುವಾಗಿದ್ದುದರಿಂದ ಶರೀರವನ್ನು ಎಳೆದು ನೇರವಾಗಿ ಮಲಗಿಸುವ ಯೋಚನೆ. ಆದರೆ, ನಾನು ಅಶಕ್ತ ಆತನ ಮೈಗಾಂತು ಕುಳಿತೆ. ಹೊಟ್ಟೆಯ ಸಂಕಟವೆಲ್ಲಾ ಕಂಬನಿಯಾಗಿ ಸುರಿಯಿತು. ಅಳುತ್ತಳುತ್ತಲೇ ಆತನ ಕಿವಿಯಲ್ಲಿ "ರಾಂ! ರಾಂ!" ಎಂದು ರಾಮಮಂತ್ರವನ್ನು ಉಚ್ಚರಿಸಿದೆ.

ಅಲ್ಲಿ ಅವನಿಗಾಗಿ ಕುಳಿತು ಅಳುವ ಸಹನೆಯಾಗಲೀ ಸಮಯವಾಗಲೀ ಶಕ್ತಿಯಾಗಲೀ ಇದ್ದರಷ್ಟೆ; ಮನಸ್ಸು ಭಯ ಭೀತಿಗಳ ಉಗಮವಾಗಿತ್ತು. ಆತ್ಮಸಂಕಟದಿಂದ ಮೈ ನಡಗುತಿತ್ತು. ಬೆಂದೆದೆಯ ಬಿಸುಸುಯ್ಲು ಬೀಸು ಗಾಳಿಯಲ್ಲಿ ಅವನೆಡೆಗೆ ತೇಲಿಹೋಯಿತೋ ಏನೋ.....ದೊರೆತ ಫಲ ಅಷ್ಟೆ.

ಆದರೆ ಅವನೆಂತಹ ಧೈರ್ಯವಂತ.....ಎಂತಹ ಕೆಚ್ಚೆದೆಯ ವೀರ.....

ಹಾ.....ಅವನೆಂದೂ ಅಂಜಲಿಲ್ಲ.....ಹಿಂಜರಿಯಲಿಲ್ಲ.....

*Cowards die many times before their death;*
*The valiant never taste of death but once.*

.....ಯಾರ ಸುವಾಣಿ ಅದು ?

ನಿಜ, ರಾಮಸಿಂಗ್ ಈವರೆವಿಗೆ ಎಂದೂ ಸತ್ತವನಲ್ಲ; ಈಗ ಮಾತ್ರ ಸತ್ತಿದ್ದಾನೆ.

ಪ್ರಾಯಶಃ ರಾಂಸಿಂಗನಂತಹ ವೀರರ ನೀತಿಯನ್ನು ಅನುಸರಿಸಿಯೇ ಹೊಮ್ಮಿದೆ ಆ ಪಾಶ್ಚಾತ್ಯ ಕವಿವರ್ಯನ ಅನುಭವವಾಣಿ. ಒಡನೆ ಕೃತಿಕೃತ ಷೇಕ್ಸ್‌ಪಿಯರ್ ಮನದಲ್ಲಿ ಸುಳಿದಳಿದ.

ಹರೇ ರಾಂ!

.....ರಾಂಸಿಂಗನಿಗೂ ನನಗೂ ಪರಿಚಯವಾದುದು ಸುಮಾರು ಹತ್ತು ವರುಷಗಳ ಹಿಂದೆ. ಆಗ ನಾನಿನ್ನೂ ಹದಿನೆಂಟರ ತರುಣ. ಆತ ಮೂವತ್ತೈದರ ಸದೃಢಕಾಯನಾದ ಯುವಕ. ಹದಿನೈದು ವರ್ಷಗಳ ಸರ್ವೀಸಿನಿಂದ ಪರಿಪಕ್ವ ಅನುಭವ ಹೊಂದಿದ ವ್ಯಕ್ತಿ. ಆಗ ಮಿಲಿಟರಿ ಕ್ಷೇತ್ರಕ್ಕೆ ನಾನು ಹೊಸಬನಾದುದರಿಂದ ಅವನ ಸ್ನೇಹವಷ್ಟೇ ಅಲ್ಲ; ಸಹಾಯವೂ ಬೇಕಿತ್ತು. ನನ್ನ ದಿನಚರಿ ಮುಗಿದ ನಂತರ ಅವನು ಎಲ್ಲಿದ್ದರೂ ಹುಡುಕಿಕೊಂಡು ಹೋಗುತಿದ್ದೆ. ನನ್ನನ್ನು ನೋಡಿದೊಡನೆ ಅವನು ನಗುತ್ತ 'ಬಂದೇನಯ್ಯಾ?' ಎನ್ನುತಿದ್ದ. ಆತ ಹೆಚ್ಚು ಮಾತನಾಡುವವನೂ ಅಲ್ಲ; ನಗುವವನೂ ಅಲ್ಲ. ಆದರೆ ಅವನು ಆಡುವ ಒಂದೊಂದು ಮಾತು ಆರಿಸಿದ ಆಣಿ ಮುತ್ತಿನಂತೆ. ದೇಶಾಭಿಮಾನ ಬಹಳ. ಸೈನ್ಯಕ್ಕೆ ಸೇರಿರುವುದರಿಂದ ಹಾಗೆ ಎಂದುಕೊಂಡಿದ್ದೆ. ಆದರೆ, ಆತನ ರೀತಿ ನೀತಿಗಳನ್ನು ನೋಡಿದನಂತರ ಆತನಿಗೆ 'ದೇಶಾಭಿಮಾನ' ಎಂಬುದು ಜನ್ಮಕ್ಕಂಟಿದೆ ಎಂಬುದು ಅರ್ಥವಾಯಿತು.

ಅದೇ ನೇರಕ್ಕೆ ನನ್ನ ಕತೆಯನ್ನು ಹೇಳುವುದಾದರೆ ತಂದೆಯ ಮೇಲಿನ ಸೇಡನ್ನು ತೀರಿಸಿಕೊಳ್ಳುವ ಸಲುವಾಗಿ ಮಿಲಿಟರಿಗೆ ಸೇರಿದವನು. ಮುಖ್ಯವಾಗಿ ಹೊಟ್ಟೆಯ ಪಾಡು ಕಳೆದರೆ ಸಾಕಾಗಿತ್ತು. ತಂದೆಯವರಿಗೆ ತಮ್ಮ ತಂಗಿಯ ಮಗಳನ್ನು ಸೊಸೆಯಾಗಿ ತಂದುಕೊಳ್ಳಬೇಕೆಂಬ ಇಚ್ಛೆ. ನಿಜ

ವಾಗಿ ಹೇಳಬೇಕೆಂದರೆ ಅವಳಲ್ಲಿ ನನಗೆ ದ್ವೇಷಾಸೂಯೆಯಾಗಲೀ ಅಥವಾ ಪ್ರೇಮಾನುರಾಗವೇ ಆಗಲೀ ಇರಲಿಲ್ಲ. ನನ್ನಲ್ಲಿ ಇನ್ನೂ ಯಾವುದೇ ಭಾವನೆ ಮೂಡುವುದರೊಳಗಾಗಿ ಅಂದರೆ ಇನ್ನೂ ತಾರುಣ್ಯೋದಯದಲ್ಲೇ ಪಿ.ಯು.ಸಿ.ಯಲ್ಲಿ ಪುನಃಪುನಃ ಫೇಲಾದುದು ಮಾನವ ಸಹಜವಾದ ಆಸೆ ಆಕಾಂಕ್ಷೆಗಳನ್ನೆಲ್ಲಾ ಸಮೂಲವಾಗಿ ಅಲುಗಾಡಿಸಿಬಿಟ್ಟಿತು. ಜೀವನ ಸ್ಪರ್ಧೆ ಯಲ್ಲಿ ಸೋತು ಧೃತಿಗೆಟ್ಟಾಗ ಬದುಕಿಗೆ ಬೇರೆ ಮಾರ್ಗವನ್ನು ತೋರು ವುದರ ಬದಲು ಭಾವೀ ಸೊಸೆಯ ಮುಂದೆ ನನ್ನನ್ನು ತೆಗಳಿ, ನಾನವಳಿಗೆ ಯೋಗ್ಯ ಪತಿಯಾಗಲಾರೆನೆಂದು ತಂದೆಯವರು ಛೀಮಾರಿ ಹಾಕಿದರು. ಆ ಕ್ಷಣ ಮನದಲ್ಲಿ ಕೆಚ್ಚು ಮೂಡಿಸಿತು. ವಿದ್ಯೆ ಹತ್ತದಿದ್ದಲ್ಲಿ ಜೀವನಕ್ಕೆ ಬೇರೆ ದಾರಿಯೇ ಇಲ್ಲವೇ ಎಂಬುದನ್ನವರಿಗೆ ಗಂಭೀರವಾಗಿ ತೋರಿಕೊಡುವ ಉದ್ದೇಶದಿಂದ ಮಿಲಿಟರಿಗೆ ಹೇಳದೆ ಕೇಳದೆ ಸೇರಿಕೊಂಡೆ.

ಅಂದು,

ಅತ್ಯಂತ ವ್ಯಥಿತರಾದ ತಾಯಿ ಭಾವೋದ್ವೇಗದಿಂದ ಗದ್ಗದ ಕಂಠ ದಲ್ಲಿ–"ಹೆತ್ತ ತಾಯಿಯ ಭಾಗಕ್ಕೆ ನೀನಿಲ್ಲವಾದರೂ ಜನ್ಮಭೂಮಿಯ ಭಾಗಕ್ಕೆ ನೀನು ಇರಲೇಬೇಕು ಮಗನೇ. ಆ ಸರ್ವಾಂತರ್ಯಾಮಿಯು ನಿನಗೆ ಶುಭವನ್ನುಂಟು ಮಾಡಲಿ." ಎಂದು ಹಾರೈಸಿದರು.

ಆ ಉತ್ತೇಜನಪೂರ್ಣವಾದ ಧ್ವನಿ ಈಗಲೂ ಕರ್ಣಪಟಲಗಳ ಮೇಲೆ ಪ್ರತಿಧ್ವನಿಸಿ ನರನರಗಳಲ್ಲೂ ಮರು ಪ್ರಸಾರ ಹೊಂದುತ್ತದೆ. ಯಾರ ಶುಭ ಕ್ಕಾಗಿ ಮಗನನ್ನು ವಹಿಸಿಕೊಡಲು ಅವರು ಮುಂದಾದರೊ ಆ ಭಾರತ ಮಾತೆಯ ಶ್ರೀಚರಣಗಳಲ್ಲಿ ತಮ್ಮನ್ನು ತಾವೇ ಆತ್ಮಶಃ ಒಪ್ಪಿಸಿ ಕೊಂಡಿದ್ದಾರೆ. ನನ್ನ ಹಣೆಗೆ ತಿಲಕವಿಟ್ಟು ಬೀಳ್ಕೊಡುವಾಗ ಉಚ್ಚ ಕಂಠದಿಂದ ಬಿತ್ತರಿಸಿದ ಶ್ಲೋಕವಿದು.

ಸತ್ಯೇನ ಬ್ರಹ್ಮಚರ್ಯೇಣ ವ್ಯಾಯಾಮೇನಾಥ ವಿದ್ಯಯಾ ।
ದೇಶಭಕ್ತ್ಯಾತ್ಮತ್ಯಾಗೇನ ಸನ್ಮಾನಾರ್ಹಃಸದಾಭವ॥

ಪುರಾತನವಾದರೂ ಚಿರನೂತನತೆಯನ್ನು ತಳೆಯುತ್ತಿರುವ ಆ ಜ್ಞಾನ ಮಂಡದ ಮುಂದೆ ನಮ್ಮ ನಿಲುವು ಎತ್ತ? ಹಾಂ, ತಾಯಿ ಕಲಿತವರಲ್ಲ. ಆದರೆ, ಅವರು ಬೆಳಗಿಸಿಕೊಂಡ ಜ್ಞಾನಪ್ರದೀಪ ಮನೆಗೆಲ್ಲಾ ಬೆಳಕು ನೀಡುತ್ತದೆ.

ಬಾಲರವಿ ಬಾನೇರ ತೊಡಗಿದ.

ಅರುಣ ಕಿರಣಗಳು ಕಣ್ಣುಗಳನ್ನು ಕುಕ್ಕತೊಡಗಿದುವು. ಸ್ವಲ್ಪ ಆ ಕಡೆ ತಿರುಗಿಕೊಳ್ಳಬಹುದಾದರೆ ಅವುಗಳ ನೇರ ದೃಷ್ಟಿಯನ್ನು ತಪ್ಪಿಸಿಕೊಳ್ಳ ಬಹುದಾಗಿತ್ತು. ಕಾಲು ಕೈಗಳ ಬಾಧೆಯಿಂದ ಅಲುಗುವುದೂ ಸಹ ಭಯ. ಆದರೆ ಸೂರ್ಯರಶ್ಮಿಯನ್ನು ಎಷ್ಟು ಹೊತ್ತು ತಡೆದುಕೊಳ್ಳಲಾದೀತು ? ಬಲು ಪ್ರಯಾಸದಿಂದ ಮುರಿದ ಕಾಲಿಗೆ ನೋವಾಗದಂತೆ ಸೂರ್ಯರಶ್ಮಿಯ ಕಡೆ ಬೆನ್ನು ಮಾಡಿದೆ.

ಗಂಟಲೊಣಗುತಿತ್ತು.

ಒಂದು ಗುಟುಕು ನೀರು ಕುಡಿದೆ. ಇನ್ನು ಅದರಲ್ಲಿದ್ದುದು ಸ್ವಲ್ಪ ಮಾತ್ರ. ಇದೇ ರೀತಿ ಬಾಯಾರಿಸಿದರೆ ದಿನವೆಲ್ಲಾ ಏನು ಕುಡಿಯಬೇಕೋ ದೇವರಿಗೇ ಗೊತ್ತು. ಪೆಟ್ಟುಬಿದ್ದ ತಲೆ ಭಾರಾಕ್ರಾಂತವಾಗಿತ್ತು. ನರನರ ಗಳೂ ಸಿಡಿಯುವಂತಿವೆ. ಯಾರಾದರೂ ನನ್ನನ್ನು ಶಿಬಿರಕೊಯ್ದು ಉಪಕಾರ ಮಾಡಿದರೆ ಸಾಕೆಂದು ಅಂತರಂಗ ಮೊರೆಯಿಡುತ್ತಿತ್ತು. ತಲೆಯ ಬಾಧೆ ತಾಳಲಾಗದುದರಿಂದ ಮಲಗಿಕೊಳ್ಳೋಣವೆಂದು ಮನಸ್ಸು. ಆದರೆ, ಮಲಗ ಬೇಕೆಂದರೂ ಏಳುವಷ್ಟೇ ಪ್ರಯಾಸ.

ಹಾ....ಪ್ರಾಣಾಂತಕ ಹಿಂಸೆ; ಕಠೋರ ಹಿಂಸೆ.

ಕಣ್ಣುಗಳು ಕಂಬನಿಯನ್ನು ಸುರಿದುವು. ಅಬಲೆಯಾದ ಹೆಣ್ಣಿನಂತೆ ಶೃಂಖಲಾಬದ್ಧ ಪಶುವಿನಂತೆ ಅಳತೊಡಗಿದೆ.

ನಿನ್ನೆ ಬೆಳಿಗ್ಗೆ ಯಾವುದೋ ದುರ್ಮುಹೂರ್ತದಲ್ಲಿ ಹಾಸಿಗೆ ಬಿಟ್ಟಿರ ಬೇಕು. ಇಲ್ಲದಿದ್ದಲ್ಲಿ ನಾನು ಈ ಕಠೋರ ಹಿಂಸೆಗೆ ಗುರಿಯಾಗುತ್ತಿರಲಿಲ್ಲ ವೇನೋ. ಹಸಿವು–ಬಾಯಾರಿಕೆ–ಸಂಕಟ–ಆಯಾಸ–ನೋವುಗಳು ಒಂದೇ ಸಮನೆ ಧಾಳಿ ಮಾಡುತ್ತಿವೆ. ಮೇಲಾಗಿ, ಬಿಸಿಲು ಸಹ ಕಾವೇರುತ್ತಿದೆ. ಬಿಸಿಲು ಪ್ರಖರವಾದ ಮೇಲೆ ಏನು ಗತಿಯೋ. ರಾಮುಸಿಂಗ್ ಕುಳಿತ ಮರ ವಿನಾ ಈ ಸುತ್ತಮುತ್ತ ಮರಗಳೇ ಇಲ್ಲ. ಇಲ್ಲೇ ಮಲಗೋಣವೆಂದರೆ ಶವ ದೊಂದಿಗೆ ಇರುವುದು ಬೇಸರ. ಇಲ್ಲಿಂದ ಬೇರೆಡೆಗೆ ಹೋಗೋಣವೆಂದರೆ ಸರಿಯುವ ಕಷ್ಟ ದೇವರಿಗೇ ಸಂವೇದ್ಯ. ಬಿಸಿಲಟ್ಟುತ್ತಿದೆಯಾದ ಕಾರಣ ಸ್ಥಳ ಬದಲಿಸುವ ಅವಶ್ಯಕತೆಯೂ ಬಂದಿತು.

ಪ್ರಸ್ತುತ,

ಮುಖದ ಮೇಲೆ ಕೈ ಅಡ್ಡ ಹಿಡಿದೆ. ಆದರೆ, ಹಾಗೆ ಎಷ್ಟು ಹೊತ್ತು ಒಡಿಯಲು ಸಾಧ್ಯ ? ಉರಿ–ನೋವುಗಳೇನೇ ಇರಲಿ, ನೆರಳಿನ ನೆಲೆಯನ್ನು ಅರಸದೆ ವಿಧಿ ಇರಲಿಲ್ಲ. ಇಲ್ಲಿ ರಾಂಸಿಂಗನ ಪಾರ್ಥಿವ ಶರೀರವಿಲ್ಲದಿದ್ದರೆ ಇಲ್ಲೇ ಉಳಿಯಬಹುದಾಗಿತ್ತು. ಇದೇ ಪ್ರಶಸ್ತವಾದ ಸ್ಥಳ. ಸುತ್ತುಮುತ್ತಿನ ಗಿಡ ಮರಗಳ ಎಲೆಗಳುದುರಿ ದಾರಿದ್ರ್ಯವೇ ಮೈವೆತ್ತು ಬಂದಂತೆ ಕಣ್ಣೋಳಿಸುತ್ತಿವೆ.

ಕ್ಷಣ ಕ್ಷಣವೂ ಬಿಸಿಲು ಪ್ರಖರವಾಗುತಿತ್ತು.

ದೀನ ಸ್ಥಿತಿಯಲ್ಲಿ ಯೋಚಿಸಿದೆ.

ಮನುಷ್ಯರ ಸುಳಿವಿಗಾಗಿ ಕಕ್ಷೆಯೊಳಗಿನ ಪ್ರದೇಶವನ್ನು ಅರಸುತ್ತಿತ್ತು ನೋಟ. ಆದರೆ ನನ್ನ ದೌರ್ಭಾಗ್ಯದಿಂದ ಯಾರೂ ಕಾಣಿಸಲಿಲ್ಲ....ಅಯ್ಯೋ ; ನನ್ನ ಗ್ರಹಚಾರವೇ. ಇಲ್ಲಿ ಬಿದ್ದು ಸಾಯುವ ಗತಿ ಬರಬೇಕೆ ? ಹಸಿಯ ಗಾಯಗಳು ನಂಜಟ್ಟಿ ಪ್ರಾಣ ಹಿಂಡುತ್ತಿವೆ. ಇನ್ನು ಸಾಯುವುದೊಂದು ಬಾಕಿ.

ಉರಿ....ಉರಿ....

ರಾಂಸಿಂಗ್ ಎಷ್ಟು ಶಾಂತಿಯಿಂದ ಕೂತಿದ್ದಾನೆ....? ನಾನು ಸತ್ತರೂ ಗಡಿ ಕಾಯುತ್ತಿರುವೆ ಎನ್ನುತ್ತಿದ್ದ. ಅದರಂತೆಯೇ ಆಯಿತು. ನಾನೂ ಸತ್ತಿದ್ದರೆ ಅಷ್ಟೇ ಶಾಂತಿಯಿಂದ ಇರಬಹುದಾಗಿತ್ತು. ಇನ್ನು ಒಂದೆರಡು ದಿನ ಬದುಕುವುದರಿಂದೇನು ಫಲ. ಈ ಅನಾಥ ಸ್ಥಿತಿಗಿಂತ ಸಾಯುವುದು ಲೇಸು. ಕೋವಿ ತೋಟಗಳೇನೋ ಅಲ್ಲಲ್ಲಿ ಬಿದ್ದಿವೆ. ಅದರ ಬಳಿಗೆ ಹೋಗ ಲಾಗಲೀ, ಅದನ್ನೆತ್ತಿ ಚಾಲನೆ ಮಾಡಲಾಗಲೀ ಶಕ್ತಿ ಇದ್ದರಷ್ಟೇ ? ಹೇಗೇ ಯೋಚಿಸಿದರೂ ನನ್ನ ಸಮಸ್ಯೆಗೆ ಪರಿಹಾರ ತೋರುತ್ತಿಲ್ಲ.

ಬಿಸಿಲು ಪ್ರಚಂಡವಾಯಿತು.

ಹಸಿವು ಬೇಗೆಗಳೂ ಪ್ರಚಂಡವಾದುವು.

ಉಳಿದಿದ್ದ ನೀರನ್ನಷ್ಟು ಕುಡಿದು ವಿಶ್ರಾಂತಿ ತೆಗೆದುಕೊಳ್ಳುವ ಸಲು ಹಾಗಿ ಉತ್ತಮ ಸ್ಥಳಕ್ಕಾಗಿ ಅರಸ ತೊಡಗಿದೆ. ಮರದ ಹಿಂಬಾಗದಲ್ಲಿ ನೆರಳೇನೋ ಇತ್ತು. ದೂರ ಚಲಿಸಲು ಶಕ್ತಿ ಇರಲಿಲ್ಲವಾದುದರಿಂದ ಸಂಜೆ ಯವರೆಗಾದರೂ ಇಲ್ಲಿಯೇ ಮಲಗಿಕೊಳ್ಳೋಣವೆಂಬ ಯೋಚನೆಯಿಂದ

ಸ್ವಲ್ಪಸ್ವಲ್ಪವಾಗಿ ಆ ಕಡೆ ಚಲಿಸಿದೆ. ಒಂದೆರಡು ಮಾರು ಚಲಿಸಬೇಕಾದರೆ ಬಹಳ ಹೊತ್ತು ಹಿಡಿಯಿತು ಎನಿಸುತ್ತದೆ. ಅಂತೂ ಇಚ್ಛಿತ ಸ್ಥಳವನ್ನು ತಲುಪಿ ಬಹಳ ಪ್ರಯಾಸದಿಂದ ತಲೆಗೆ ಪೆಟ್ಟುತಾಗದಂತೆ ಮಲಗಿಕೊಳ್ಳಲು ಪ್ರಯತ್ನಪಟ್ಟೆ. ಮಲಗಲು ಸಾಧ್ಯವಾದರೂ ನೋವನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ತಲೆ ತಿರುಗುತಿತ್ತು ...ನೋಯುತಿತ್ತು.

ನಿದ್ರೆಯೋ ಮಂಪರವೋ ಯಾವುದೋ ತಲೆಯನ್ನು ಆಕ್ರಮಿಸಿತು. ಕಲ್ಲು ಮರಳುಗಳು ಮೈಯನ್ನು ಒತ್ತುತಿದ್ದುವು. ತಲೆಯಗಾಯಕ್ಕೆ ಕಲ್ಲು ಮಣ್ಣುಗಳು ಒತ್ತುವಾಗ ಎದ್ದು ಕುಳಿತುಕೊಳ್ಳಲು ಯೋಚಿಸಿದೆ. ಆದರೆ ತ್ರಾಣವಿದ್ದರಷ್ಟೆ? ಈ ಸಂಕಟಭರಿತ ಜೀವವನ್ನು ಉದ್ಧರಿಸುವವರಾರೋ ....ಓ! ಯಾರಾದರೂ ನನಗೆ ಸಹಾಯ ಮಾಡಿ!

ಆ ಕಲ್ಲು ಮುಳ್ಳಿನ ತಾವಿನಲ್ಲಿ ಭಯಂಕರ ಬಾಧೆಗಳ ಮಹಾನವಮಿಯಲ್ಲಿ ಹೇಗೆ ಹೊತ್ತು ಉರುಳಿತೋ ದೇವರಿಗೇ ಗೊತ್ತು. ಬಹುಶಃ ನಿದ್ದೆ ಬಂದಿರಲೇಬೇಕು. ನನಗೆ ಎಚ್ಚರವಾದಾಗ ಸೂರ್ಯ ತಂಗಿದ್ದ. ವಾತಾವರಣ ಶೀತ ಮನೋಹರವಾಯಿತು.

ಯಾರೂ ಬರಲಿಲ್ಲ. ನಮ್ಮವರ ಸೊಲ್ಲು ಸಹ ಕೇಳಿ ಬರಲಿಲ್ಲ. ಹಗಲೇನೋ ಉರುಳಿತು. ಇನ್ನು ರಾತ್ರಿಯನ್ನು ಕಳೆಯುವುದು ಹೇಗೋ? ದೇವರೇ! ಈ ಸಂಕಟವನ್ನು ಪರಿಹರಿಸಿಕೊಳ್ಳುವಂತಹ ಶಕ್ತಿಯನ್ನಾದರೂ ನೀಡು. ರಾಂಸಿಂಗ್, ನಿನ್ನ ಧೈರ್ಯಶಕ್ತಿಯನ್ನು ನನಗಾದರೂ ದಯ ಪಾಲಿಸಪ್ಪಾ!

ಆದರೆ, ನನ್ನ ಮೊರೆ ಅರಣ್ಯ ರೋದನವೇ ಸೈ. ಯಾರಿದ್ದಾರೆ ಇಲ್ಲಿ ಕೇಳಿಸಿಕೊಳ್ಳಲು. ನಾನಿಲ್ಲಿ ಉಪವಾಸ ಸಾಯುವ ಸ್ಥಿತಿಗೆ ಬಂದಿದ್ದಂತೂ ಪರಮಸಂಕಟ. ದೂರದಲ್ಲಿ ಸಿಡಿದುಬಿದ್ದಿದ್ದ ತುತ್ತಿನ ಚೀಲವನ್ನು ತೆಗೆದುಕೊಳ್ಳುವ ಮನಸ್ಸಾಯಿತು. ಮೆಲ್ಲಮೆಲ್ಲನ ತೆವಳಿ, ಅಗಾದವಾದ ನೋವು ಸಹಿಸಿ, ತುತ್ತಿನ ಚೀಲವನ್ನು ತೆಗೆದುಕೊಂಡೆ. ಆ ಒಣಗಿದ ರೊಟ್ಟಿಯನ್ನು ನುಂಗಲು ಒಂದು ಬಿಂದಿಗೆಯಾದರೂ ನೀರು ಬೇಕು, ಒಂದೆರಡು ಚೂರನ್ನು ನುಂಗಲಾರದೆ ನುಂಗಿದೆ, ಅನಂತರ ತಿನ್ನಲಾಗಲಿಲ್ಲ. ಒಂದು ಗುಟುಕು ನೀರನ್ನು ಕುಡಿದು ನುಂಗಿದ ತುತ್ತನ್ನು ಗಂಟಲಿನಿಂದ ಇಳಿಸಿದೆ.

ಮುಖ್ಯಗತ್ತಲೆ ಆವರಿಸಿತು. ಕಾಳರಾತ್ರಿ ಹೆಜ್ಜೆ ಇಡುತ್ತಿದೆ.

ರುದ್ರ ಭೀಷಣ ರಾತ್ರಿಯಲ್ಲಿ ಶವದ ಬಳಿ ಪಿಶಾಚರ ಪಿಶಾಚಿಯಂತೆ ಹೇಗೆ ಕಾಲಹರಣ ಮಾಡಲಿ? ನನಗೆ ಎಚ್ಚರ ತಪ್ಪಿದರೂ ಲೇಸು..... ಹೊತ್ತು ಮಿಂಚುತ್ತಿದ್ದಂತೆ ಭಯ ಭೀತಿಗಳು ತನುಮನಗಳನ್ನು ಆವರಿಸಿದುವು. ಧೈರ್ಯದ ಕಟ್ಟೆಯೊಡೆಯಿತು. ಮಗುವಿನಂತೆ ರೋದಿಸಿದೆ. ಒಂದು ವೇಳೆ ನನ್ನ ಗೋಳಾಟವನ್ನು ತುರುಕರು ಕೇಳಿಕೊಂಡರೆ ಆ ಕ್ಷಣವೇ ನನ್ನ ಕತೆ ಮುಗಿಯಹೋಗುತ್ತದೆ. ಹಾ! ಅದು ಇನ್ನೂ ಸುಖವೇ. ಖಂಡಿತ ಪರಮಸುಖ.

ಚಟ. ಚಟ. ಚಟ. ಚಟ.

ಬಾಜಾ ಬಜಂತ್ರಿ ಭಾರಿಸಿದಂತೆ ಗುಯ್ಗುಡುವ ಶಕ್ತಿಹೀನ ಶ್ರವಣೇಂದ್ರಿಯಗಳಿಗೆ ಎಲ್ಲೋ ಯಾವುದೋ ಲೋಕದಲ್ಲಿ ಒಡಕು ಘಟ ಮಿಡಿದಂತೆ ಕೇಳಿಸುತ್ತಿದೆ. ಹಾ.....! ನೆತ್ತರಿನ ಆಸೆಗೆ ಯಾವುದಾದರೂ ದುಷ್ಟ ಪ್ರಾಣಿ ನುಗ್ಗುತ್ತಿರಬಹುದಾಗಿದ್ದರೆ ಏನು ಗತಿ? ಅಥವಾ ತುರುಕರೆ.....? ಹಾಯ್! ಯಾರಾದರೂ ನಮ್ಮವರೇ ಆಗಿದ್ದಲ್ಲಿ ಬದುಕುತಿತ್ತು ಈ ಬಡ ಜೀವ. ಒಂದೆರಡು ಘಳಿಗೆಗಳುರುಳಿದುವು. ಪ್ರಕೃತ ನಿಶ್ಯಬ್ದತೆಯ ಮಸ್ತಕದ ಮೇಲೆ ಕೊಡತಿಯ ಪೆಟ್ಟಿನಂತೆ ಬೀಳುತ್ತಿದೆ, ಆ ಸದ್ದು.

ಭಯ ಭೀತಿಗ್ರಸ್ತ ನೋಟ ಸುತ್ತಲೂ ಹೊರಳಿತು.

ಕಿವಿಗಳು ನಿಮಿರಿದುವು.

ಶ್ರವಣೇಂದ್ರಿಯದೊಂದಿಗೆ ಏಕೀಭವಿಸಿತು ಚಿತ್ತ.

ಆಲೈಸಿದರೂ ಸದ್ದಿನ ಜಾಡು ಸಿಗಲಿಲ್ಲ. ಮತ್ತೆ ಮತ್ತೆ ಅದೇ ಸದ್ದು..... ದೇಹದಾದ್ಯಂತ ಭಯ ಭೀತಿಯ ಝರಿ ಹರಿದಾಡಹತ್ತಿತು. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯಿತು-ಈಗಲೀಗ ಬಿರಿಯುವಂತೆ. ಎದೆಯ ನೆಲೆಯಲ್ಲಿ ಹರಿದಾಡುವ ಉಸಿರು ಅಲ್ಲಲ್ಲಿ ಸಿಕ್ಕಿಕೊಂಡಂತೆ ಮಂದಮಂದವಾಯಿತು.

ಆಲೈಸಿ, ಆಲೈಸಿ, ಆಲೈಸಿ, ಉಸಿರಿಡಿದು ಆಲೈಸಿ ಬಳಲಿದೆ. ಆದರೂ ಸದ್ದಿನ ಜಾಡು ದೊರೆಯಲಿಲ್ಲ.....ಹೋದರೆ ಹೋಗಲಿ, ನಾನಿರುವ ಸ್ಥಿತಿಯೇ ನನಗೆ ಹೆಚ್ಚಾಗಿದೆ. ಇನ್ನಾವ ದುಷ್ಟಶಕ್ತಿಯೂ ನನಗೆ ತೊಂದರೆ ಕೊಡದಿದ್ದರೆ ಸಾಕು.

ಆದರೂ, ಆ ಚಟ ಚಟ ಸದ್ದು ! ಅದೆಲ್ಲಿಯದು ? ಎಲ್ಲಿಂದ ಕೇಳಿಸು ತ್ತಿದೆ ? ಓ.....ಈಗ ಅರ್ಥವಾಯಿತು, ಮೃತ್ಯುವಿನ ಹೆಜ್ಜೆ.....! ಮೆಲ್ಲ ಮೆಲ್ಲನೆ ಮುಂದಡಿಯಿಡುವ ಸಂಜ್ಞೆ ! ಹಾ.....! ಈಗಲೇ ಬೇಡ. ನಾನಿನ್ನೂ ಸ್ವಲ್ಪ ಕಾಲ ತಾಳಿಕೊಳ್ಳಬಲ್ಲೆ. ನನಗೆ ತಂದೆ ತಾಯಿ ಅಣ್ಣ ತಂಗಿಯರಿದ್ದಾರೆ. ಓ... ಮೃತ್ಯು ! ನೀನೀಗ ಬರಲೇಬೇಡ....ನನ್ನನ್ನು ಖಂಡಿತಾ ನನ್ನವರಿಂದ ಅಗಲಿಸಬೇಡ. ನಾನಿನ್ನೂ ಎಳೆಯ. ನಾನು ಮಾಡಬೇಕಾದ ಕರ್ತವ್ಯವೂ ತುಂಬ ಇದೆ. ಓ..... ಮೃತ್ಯು ! ನೀನಿಲ್ಲಿ ಹೆಜ್ಜೆಯಿಡಲೇಬೇಡ ! ನನ್ನ ಮೊರೆಯನ್ನು ಲಾಲಿಸು ; ದಯಮಾಡಿ ಲಾಲಿಸು.

ರಾಮಮಂತ್ರೋಚ್ಚಾರಣೆ ಮಾಡಿದರೆ ಮೃತ್ಯು ಮುಂಬರಿಯನಂತೆ !

ರಾಂ ! ರಾಂ ! ರಾಂ ! ರಾಂ !

ಹರೇ, ರಾಂ !

ತಂಗಾಳಿ ತಣ್ಣಗೆ ತೀಡಿತು. ಹಳ್ಳತಿಟ್ಟುಗಳನ್ನೂ ಗಿಡಮರಗಳನ್ನೂ ಮುಳ್ಳುಕಂಟಿಗಳನ್ನೂ ಜಜ್ಜಿದ ಮೈಕೈಗಳನ್ನೂ ಏಕಭಾವನೆಯಿಂದ ಮುದ್ದು ಗೈದು ಸುಯ್‌ಸುಯ್ಯನೆ ಸುಳಿದಾಡಿ ಹೋದಾಗ ವಾಯುರೂಪೀ ಮೃತ್ಯು ನನ್ನನ್ನು ಆಶೀರ್ವದಿಸಿ ಹೋದಂತಾಯಿತು. ಕಣ್ಣುಗಳನ್ನು ಮುಚ್ಚಿ ರಾಮ ಧ್ಯಾನದಲ್ಲಿ ನಿರತನಾದೆ. ಅನಂತರ....ಆನಂತರ ಆಲೈಸಿದರೂ ಮೃತ್ಯುವಿನ ಹೆಜ್ಜೆಯ ಸದ್ದು ಕೇಳಿಬರಲಿಲ್ಲ. ಆಗ ವ್ಯಾಪ್ತಿಗೆ ಮೀರಿ ಮಿಡಿಯುತಿದ್ದ ಹೃದಯ ಡಿಂಡಿಮ ಈಗ ಸ್ವಾಧೀನಕ್ಕೆ ಬಂದು ಮೆಲ್ಲಮೆಲ್ಲನೆ ಮಿಡಿಯಿತು. ಕಾಳರಾತ್ರಿಯ ತಣ್ಪಿಗೆ ಮೈಗೊಟ್ಟು ಗಗನಾಂಗಣದಲ್ಲಿ ಮೂಡಿ ಬಂದ ನಕ್ಷತ್ರಗಳನ್ನು ನಿಟ್ಟಿಸಿದೆ. ಉಜ್ವಲ ಕಾಂತಿಯನ್ನು ಚೆಲ್ಲುವ ಲಕ್ಷ ಲಕ್ಷ ಲಕ್ಷ ಲಕ್ಷ ಮಹೋಜ್ವಲ ನಕ್ಷತ್ರಾಕ್ಷಿ!

"ಓ ನಕ್ಷತ್ರ ! ನೀನಾದರೂ ನನ್ನ ಸಹಾಯಕ್ಕೆ ಬಾ !"

ಕಳೆದುಳಿದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಕೂಗಿದೆ. ಬಹುಶಃ ಅದು ಸುತ್ತುಮುತ್ತಿಗೆಲ್ಲಾ ಕೇಳಿಸಿರಲೂಬಹುದು.

"ಓ ಭಗವಂತಾ ! ನೀನಿರುವುದು ಸತ್ಯವಾಗಿದ್ದರೆ ನನ್ನನ್ನು ಈ ಕಷ್ಟ ದಿಂದ ಪಾರು ಮಾಡು. ಎಲ್ಲಿರುವೆ ದೊರೆಯೇ ? ನನ್ನ ಮೊರೆಯನ್ನು ಲಾಲಿಸು.....ಪಾಲಿಸು."

ಧ್ವನಿ ಕೂಗಿ ದಣಿಯಿತು. ಕಣ್ಣುಗಳಲ್ಲಿ ಗಂಗೆ ಯಮುನೆಯರು ಪ್ರವಹಿಸಿದರು. ಆ ನಿರ್ದಯಿಯಾದ ಭಗವಂತ ನನ್ನ ಮೊರೆಗೆ ಓಗೊಡಲಿಲ್ಲ– ಇನ್ನಾರ ಮೊರೆಗೂ ಉತ್ತರ ಕೊಡದಿರುವಂತೆ. ಒಡಲು ಹಸಿವಿನಿಂದ ಚೀರಿಡುತಿತ್ತು. ಮನಸ್ಸು ಭಯದಿಂದ ತಲ್ಲಣಿಸುತಿತ್ತು.

ಸಪ್ಪಿಲ್ಲದ ಮಹಾಶಾಂತಿಯಲ್ಲಿ ದರುಗೆಲೆ ಉದುರಿದರೂ ಸಹ ಸ್ಪಷ್ಟವಾಗಿ ಕೇಳಿಸುತ್ತದೆ. ಕ್ರಿಮಿಕೀಟಗಳ ನಾನಾ ಬಗೆಯ ಕೀಚಲು ದನಿ ಕರ್ಣಪಟಲಗಳಗೊರೆಯುತಿತ್ತು. ಮುಖ ವ್ಯೈಗಳಿಗೆ ಮುತ್ತಿ ನೆತ್ತರು ಹೀರುವ ಕೀಟೀಪಕೀಟಗಳ ಕಾಟ ಬೇರೆ. ಸಾಕಪ್ಪಾ, ಸಾಕು. ತಾಳಲಾರೆನೋ ತಾಳಲಾರೆ. ಪ್ರಾಣಾಂತಕ ನೋವು ; ಅವರ್ಣನೀಯ ಹಿಂಸೆ.

ಗೂಗೆಗಳ ವಿಕೃತ ಆಲಾಪ.....

ನರಿಗಳ ಹುಯಿಲಿನ ಗೋಳು.....

ಹಾ.....! ಇನ್ನಾವ ವನ್ಯಮೃಗಕ್ಕೆ ಆಹಾರವೋ ಈ ದೇಹ.....

ಹೊತ್ತು ಉರುಳಿದಂತೆ ಎಲ್ಲಿಯದೋ ದುರ್ನಾತ ಸುತ್ತಮುತ್ತ ಹರಡಿ ತಿಳಿಗಾಳಿಯನ್ನು ಕಲುಷಿತಗೊಳಿಸುತ್ತಿದೆ. ಹಾ.....ಉಸಿರಾಡುವ ತಿಳಿಗಾಳಿಗೂ ಕಲ್ಲುಬಿತ್ತು. ಮೂಗು ಬಾಯಿಗಳನ್ನು ಮುಚ್ಚಿಕೊಂಡರೂ ಒಳನುಗ್ಗುತ್ತಿದೆ ದುರ್ನಾತ. ಓ.....ತಾಯಿಯೇ ! ನನಗೀ ಅವಸ್ಥೆ ಬರಲಿ ಎಂದು ಜನ್ಮವಿತ್ತಿರಾ ? ಹಾಯ್‌, ತಾಳಲಾರೆ.... ಈಗೀಗ ತಲೆ ಇನ್ನಷ್ಟು ಭಾರ ಭಾರವಾಗುತ್ತಿದೆ. ನಿದ್ರೆಯ ಮಂಪರವೋ ಅಥವಾ ಎಚ್ಚರ ತಪ್ಪುತ್ತಿದೆಯೋ ದೇವರಿಗೇ ಗೊತ್ತು. .....ಎಚ್ಚರ ತಪ್ಪಿದರೇನೇ ಹಿತ. ದೇವರೇ ಅಷ್ಟಾದರೂ ಉಪಕಾರ ಮಾಡು. ಅಯ್ಯಾ, ರಾಂಸಿಂಗ್ ! ಇನ್ನೂ ಕಾವಲು ಕಾಯುತ್ತಿರುವ ನಿಷ್ಠಾವಂತ ಕಾವಲುಗಾರನೇ ನನ್ನನ್ನೂ ಸಹ ಕಾಯುಪ್ಪಾ !.....

ಮುಂಬೆಳಗು ಮೂಡಿ ಸುತ್ತಮುತ್ತಿನ ಪ್ರಾಂತ್ಯವೆಲ್ಲಾ ಸ್ಪಷ್ಟವಾಗಿ ಕಾಣಿಸುತ್ತಿದೆ.

ರಾತ್ರಿಯಲ್ಲಿ ಭೂತಪ್ರೇತಾದಿಗಳ ಕಾಟವನ್ನಾಗಲೀ ಕ್ರಿಮಿಕೀಟಗಳ ಬಾಧೆಯನ್ನಾಗಲೀ ಅರಿಯದಂತೆ ಭಗವಂತ ಎಚ್ಚರ ತಪ್ಪಿಸಿದ್ದನೇನೋ. ಅಷ್ಟಾದರೂ ಉಪಕಾರ ಮಾಡಿದನಲ್ಲಾ, ಅದೇ ಸಾಕು. ರಾಮಸಿಂಗನೆಡೆಗೆ ನೋಟವನ್ನು ಹರಿಸಿದೆ. ಆ ಅಕಳಂಕ ದೇಹ ಇನ್ನೂ ಕುಳಿತಿದೆ. ಕ್ರಿಮಿಕೀಟ

ಗಳು ಮುಖ ಕಣ್ಣುಗಳನ್ನು ಕೊರೆ ಕೊರೆದು ತಿಂದು ಮುಖದ ನೈಜತೆಯನ್ನು ಕಳೆದು, ಗುರುತು ಹತ್ತದಂತೆ ಮಾಡಿವೆ. ಅಯ್ಯೊ, ಈ ನಿಷ್ಠಾವಂತನ ದೇಹಕ್ಕೂ ಸಂಸ್ಕಾರವಿಲ್ಲದೆ ಹೋಯಿತೇ? ದೇಹ ಕೊಳೆತು ದುರ್ನಾತ ಹರಡುವುದನ್ನು ನನ್ನ ಸ್ವಂತ ಕಣ್ಣುಗಳಿಂದ ನೋಡುವಂತಾಯಿತೇ ?

ಪ್ರಸ್ತುತ ಉಸಿರಾಡುವುದೂ ಕಷ್ಟ. ಕೆಳಗಿನ ಇಳಿಜಾರು ಪ್ರದೇಶಕ್ಕೆ ಹೋದರೆ ತಗ್ಗಿನ ಗಾಳಿ ಶುಭ್ರವಾಗಿರಲಿಕ್ಕೂ ಸಾಕು....ಆ ಭಾವನೆ ಮೂಡಿದೊಡನೆ ಕಷ್ಟವಾದರೂ ಚಿಂತೆಯಿಲ್ಲ; ತಗ್ಗು ಪ್ರದೇಶಕ್ಕೆ ಹೋಗಲೇಬೇಕು ಎನಿಸಿತು. ಒಡನೆ ಗಮನ ರಾಂಸಿಂಗನ ತುತ್ತಿನ ಚೀಲ ಮತ್ತು ನೀರಿನ ಡಬ್ಬಿಯ ಕಡೆ ಸಹಜವಾಗಿ ಹರಿಯಿತು. ಅದು ದೊರೆತರೆ ಇನ್ನೊಂದು ದಿನ ಜೀವ ಹಿಡಿಯಬಹುದು. ನಾನಿದ್ದುದು ಎಡಗಡೆಯಾದುದರಿಂದ ಬಲ ಮಗ್ಗುಲು ಅಷ್ಟಾಗಿ ಕಾಣಿಸುತ್ತಿರಲಿಲ್ಲ. ಮೈ ತೀವ್ರ ಬಾಧೆಗೊಳಗಾಗಿದ್ದರೂ ಕ್ಷುದ್ಬಾಧೆ ಗತಿಸಿದವನ ತುತ್ತನ್ನು ಅರಸಲು ಪ್ರೇರೇಪಿಸಿತು. ಬಹಳ ಕಷ್ಟದಿಂದ ತೆವಳಿಕೊಂಡು ಶವದ ಸಮೀಪಕ್ಕೆ ಹೋಗಿ ಕೈ ಚಾಚಿದೆ. ದೇಹದ ದುರ್ಗಂಧ ಮೂಗು ಬಾಯಿಗಳನ್ನು ತುಂಬಿತು. ಚಾಚಿದ ಕೈಗೆ ತುತ್ತಿನ ಚೀಲ ಸಿಕ್ಕಿದರೂ ಅದು ಶವದ ಭುಜದಲ್ಲಿ ನೇತು ಬಿದ್ದಿರುವುದರಿಂದ ಬಿಡಿಸಿಕೊಳ್ಳುವುದಂತೂ ಕಷ್ಟ. ಚೀಲವನ್ನು ತೆಗೆದುಕೊಳ್ಳುವುದಕ್ಕಿಂತ ಚೀಲದಲ್ಲಿನ ರೊಟ್ಟಿಯನ್ನು ತೆಗೆದುಕೊಳ್ಳುವುದು ಸುಲಭವಾಗಿತ್ತು. ತೆಗೆದುಕೊಂಡು ನೀರಿನ ಕುಂಡದಿಂದ ನೀರನ್ನು ಅದುರುವ ಹಸ್ತಗಳಿಂದ ಬೊಗ್ಗಿಸಿಕೊಳ್ಳುವಾಗ ಅರ್ಧದಷ್ಟು ಚೆಲ್ಲಿಹೋಯಿತು. ಆಗ ಆದ ಆತ್ಮಸಂಕಟ ಅಷ್ಟಿಷ್ಟಲ್ಲ. ಸತ್ತು ಸಗ್ಗವೇರಿದವನ ತುತ್ತನ್ನು ಅತ್ಯಂತ ದುಃಖದಿಂದ ಕಸಿದುಕೊಂಡು ತೆವಳಹತ್ತಿದೆ ಮುರಿದ ಕಾಲನ್ನೂ, ಕೀಲು ತಿರುಚಿದ ಕೈಯನ್ನೂ, ಪೆಟ್ಟು ಬಿದ್ದ ತಲೆಯನ್ನೂ ಹೊತ್ತು ಅಲ್ಲಿಂದ ಸರಿಯಬೇಕಾದರೆ ಬಂದ ಪಾಡು ಭಗವಂತನಿಗೇ ಸಂವೇದ್ಯ.

ಮೈಗಾಯಗಳಿಗೆ ಮದ್ದು ಬಳಿಯದಿದ್ದುದರಿಂದಲೋ ಏನೋ. ಇಂದು ಖಂಡ ಖಂಡಗಳೂ ಕಿತ್ತು ಕಿತ್ತು ಬರುವಂತಹ ನೋವು. ನರ ನರಗಳೂ ತುಂಡು ಗಡಿಯುವಂತಹ ಎಳೆತ. ದೇಹದಾದ್ಯಂತ ಜುಮು ಜುಮುಗುಟ್ಟುತ್ತಿದೆ. ಆಕರದಿಂದ ತುಟಿ ನಾಲಿಗೆಗಳು ಒಣಗಿದುವು- ಆ ದುರ್ಗಂಧ

ದಲ್ಲಿ ನೀರು ಕುಡಿಯಲೂ ಸಹ ಮನಸ್ಸು ಬರುವುದಿಲ್ಲ. ದೇಹದ ಶಕ್ತಿ ಉಡುಗಿತ್ತು. ಇನ್ನು ತೆವಳಲಾರೆನೆಂದು ಚೀರಿಡುತಿತ್ತು ಅಂತರಂಗ. ಎರಡು ಮೂರು ಮಾರು ಸರಿಯುವುದರೊಳಗಾಗಿ ಮೈ ಬಸವಳಿದು ಹಿಂದಕ್ಕುರುಳಿದೆ. ಹಾಗೆ ಉರುಳಿದಾಗ ತಲೆಗೂ ಮೊಳಕೈಗೂ ಮತ್ತೊಮ್ಮೆ ಪೆಟ್ಟು ತಾಗಿತು.

ಎಚ್ಚರವಾದಾಗ ಬೈಗಿನ ತಂಗಾಳಿ ತೀಡುತಿತ್ತು.

ಕಣ್ತೆರೆದೊಡನೆ ಮೊದಲು ಅಂತರ್ಗತವಾದ ವಸ್ತು ದುರ್ಗಂಧ.

ನನಗೀಗ ತಾಳಿಕೊಳ್ಳುವ ಶಕ್ತಿಯಾಗಲೀ ಬದುಕುವ ಆಶೆಯಾಗಲೀ ಗಂಡವನ್ನೆದುರಿಸುವ ಧೈರ್ಯವಾಗಲೀ ಇರಲಿಲ್ಲ. ಬದುಕಿಗಿಂತ ಸಾವೇ ಹಿತಕರವಾಗಿ ತೋರಿತು. ಅಂತರ್ದಾಹದಿಂದ ಗಂಟಲೊಣಗುತಿತ್ತು. ಅಗಾಧವಾದ ದೈಹಿಕ ಬಾಧೆ ತೀವ್ರ ಮಾನಸ ಸಂತಾಪ ಜೀವಕ್ಕೆ ಪುಟಗೊಡುತ್ತಿವೆ. ಆದರೆ, ಅದೇಕೆ ಪ್ರಾಣ ಚಿಮ್ಮುತ್ತಿಲ್ಲವೋ ಅದೇ ಅರ್ಥವಾಗುತ್ತಿಲ್ಲ.

ಏಳಲಾರದೆ ಎದ್ದು ನೀರಿನ ಡಬ್ಬಿಯ ಮುಚ್ಚಳ ತೆಗೆದು ನೀರನ್ನು ಕುಡಿದೆ. ಒಂದೊಂದು ಹನಿಯೂ ಅಮೃತೋಪಮವಾಗಿತ್ತು. ಇನ್ನೊಂದು ಹೊತ್ತಿಗೆ ಉಳಿಸಿಕೊಳ್ಳಬೇಕೆನಿಸಿದ್ದರೂ ಬಾಯಾರಿಕೆ ಅಡಗಲಿಲ್ಲ. ರೊಟ್ಟಿಯ ಚೂರನ್ನು ಬಾಯಲ್ಲಿಟ್ಟುಕೊಂಡೆ. ಅಗಿಯುವ ತ್ರಾಣವಿಲ್ಲದುದರಿಂದ ಉಗಿಯಬೇಕಾಯಿತು. ಸ್ವಲ್ಪ ಹೊತ್ತು ಕುಳಿತುಕೊಂಡೆ. ಅನಂತರ ಕುಳಿತುಕೊಳ್ಳಲಾಗಲಿಲ್ಲ. ಹೇಗೋ ಹಿಂದಕ್ಕೆ ಉರುಳಿದೆ. ಆಗಲೂ ತಲೆಗೆ ಪುನಃ ಪೆಟ್ಟು ತಾಗಿತು. ಹಾ....! ಆ ನೋವು ಅವರ್ಣನೀಯ....ಅಸಹನೀಯ....

ರಾತ್ರಿ ಹೇಗೆ ಉರುಳಿತೋ ಬೆಳಕು ಹೇಗೆ ಮೂಡಿತೋ ನನಗೆ ತಿಳಿಯದು. ಮಧ್ಯರಾತ್ರಿಯೊಮ್ಮೆ ಎಚ್ಚರವಾದುದು ನೆನಪಿದೆ. ಯಾವ ಪ್ರಾಣಿಯ ಕಣ್ಣುಗಳೋ, ಅಥವಾ ಮಿನುಗುವ ನಕ್ಷತ್ರಗಳೋ, ಅಥವಾ ಬೆಂಕಿಯ ಉಂಡೆಗಳೋ ಸುತ್ತಮುತ್ತ ಸುಳಿಸುತ್ತುತಿದ್ದುವು. ಕೂಗಿಕೊಳ್ಳೋಣವೆಂದರೆ ಶಕ್ತಿ ಇದ್ದರಷ್ಟೆ? ಬಾಯ್ದೆರೆದೆ ಸ್ವರ ಹೊಮ್ಮಲಿಲ್ಲ; ಉಸಿರು ಹೊಮ್ಮಿತು. ಹೆದರಿ ಕಣ್ಮುಚ್ಚಿಕೊಂಡೆ. ಅನಂತರ ಏನಾಯಿತೋ ತಿಳಿಯದು. ನನಗೆ ಎಚ್ಚರವಾದಾಗ ಬೆಳಕು ಹರಿದಿತ್ತು.

ಕ್ರಿಮಿಕೀಟಗಳು ಕಚ್ಚಿ ಮೈಯೆಲ್ಲಾ ಹುಣ್ಣುಹುಣ್ಣಾಗಿದೆ. ಕೊಳೆತ ಶರೀರದ ದುರ್ಗಂಧ ಕ್ಷಣೇ ಕ್ಷಣೇ ಹೆಚ್ಚುತ್ತಿದ್ದು ಹೊಟ್ಟೆಯೊಳಗೆ ಕಲಕಿದಂತಾಗಿ ಕುಡಿದ ನೀರೂ ಸಹ ವಾಂತಿಯಾಯಿತು. ಅಲ್ಲಿಂದ ಸ್ವಲ್ಪವಾದರೂ ಸರಿದು ಹೋದರೆ ಲೇಸೆನಿಸಿ ತಲೆಯೆತ್ತಿದೆ. ದೃಷ್ಟಿಯು ನೇರಕ್ಕೆ ಪೊದೆಯಾಚೆ ಯಾರೋ ಮಲಗಿದಂತೆ ತೋರಿತು. ಕತ್ತು ಆನಿಸಿನೋಡಿದೆ. ಅಲ್ಲೂ ಎರಡು ಹೆಣಗಳು ಬಿದ್ದಿವೆ. ರಾಂಸಿಂಗನೊಡನೆ ಇರಲಾಗದೆ ಸರಿದು ಬಂದು, ಇಲ್ಲಿ ಇನ್ನೆರಡು ಹೆಣಗಳ ಸಮೀಪದಲ್ಲಿ ನಾನು ಬಿದ್ದಿರುವುದು ಗಮನಕ್ಕೆ ಬಂದಾಗ ನನ್ನ ದುರ್ಗತಿಗೆ ನಾನೇ ಮರ್ಮರ ಮರುಗಿದೆ.

ಹೊತ್ತು ಉರುಳುತಿತ್ತು. ಬಾಲರವಿ ಬಾನೇರಿದ.

ಎಲ್ಲೋ ದೂರದಲ್ಲಿ ಯಾರೋ ಮಾತನಾಡುವ ಧ್ವನಿ ಕೇಳಿಸಿತು. ಇಂದ್ರಿಯಗಳ ಜಾಗೃತ ಶಕ್ತಿ ಮಂದ ಮಂದವಾಗಿರುವುದರಿಂದ ಆಲೈಸಿದರೂ ಸರಿಯಾಗಿ ಕೇಳಿಸಲಿಲ್ಲ. ತನುಮನಗಳು ಉದ್ವೇಗಗೊಂಡುವು. ನೂರು ದೇವರನ್ನು ನೆನೆಯಿತು ಅಂತರಾತ್ಮ. ಮನುಷ್ಯರ ಸೊಲ್ಲು ಎಂಬುದು ಅರ್ಥವಾಗಿತ್ತು. ಕೂಗಿ ಕರೆಯೋಣವೆಂದು ಪ್ರಯತ್ನಿಸಿದೆ ; ಸ್ವರ ಹೊರಡಲಿಲ್ಲ. ಸುಸ್ತಾಗಿ ಮೇಲುಸಿರು ಬಿಡುತ್ತಾ ಅತ್ತಲೇ ನೋಡತೊಡಗಿದೆ. ಮುಳ್ಳು ಕಂಟಿಗಳ ಸರಹದ್ದಿನಲ್ಲಿ ಏಳೆಂಟು ಮಂದಿ ಪಾದರಕ್ಷೆಗಳ ಗಡಸು ಸದ್ದಿನೊಂದಿಗೆ ನಡೆದು ಬರುತಿದ್ದುದು ಕಾಣಿಸಿತು. ನನಗೆ ಹೋದ ಜೀವ ಬಂದಂತಾಯಿತು.

"ಇಲ್ಲಿ ಮೂರು ನಾಲ್ಕು ಮಂದಿ ಬಿದ್ದಿದ್ದಾರೆ. ಹೆಣ ಕೊಳೆತಿರುವುದರಿಂದ ಒಯ್ಯುವಂತಿಲ್ಲ. ಇಲ್ಲೇ ಹೂಳುವುದೊಳ್ಳೆಯದು."

"ಅಲ್ಲಿ ಬಿದ್ದವ ರಾಂಸಿಂಗ್, ಇಲ್ಲಾರು ?"

"ನಾನು....ನಾನು...."

"ಓ....ಇವನು ಬದುಕಿದ್ದಾನೆ ಡಾಕ್ಟರೇ !"

"ಒಂದಿಷ್ಟು ನೀರು ತಾ."

"ಅಯ್ಯೊ, ಶಿವನೇ !"

"ಪಾಪ.....ಪಾಪ."

ಆವರ ಮಾತುಕತೆಯಿಂದ ಅವರು ನಮ್ಮವರೆಂದು ತಿಳಿದರೂ ಕಣ್ಣು ಬಿಟ್ಟು ನೋಡುವ ತ್ರಾಣವಿರಲಿಲ್ಲ. ಅವರು ನಡೆಸುವ ಶೈತ್ಯೋಪಚಾರ

ನನಗೆ ಮುಟ್ಟಿಸಿತ್ತು. ಬಿಸಿ ಬಿಸಿ ಕಾಫಿ ಬಾಯಿಗೆ ಹೋದಾಗ ನುಂಗು ವುದು ಕಷ್ಟವಾದರೂ ನುಂಗಿದೆ. ಮಾತಾಡಲಾಗಲಿಲ್ಲ. ಕಣ್ಣುಗಳಲ್ಲಿ ಹನಿ ಗಳು ಮೊಳೆತುವು. ಒಮ್ಮೆ ಕಣ್ತೆರೆದು ಎಲ್ಲರನ್ನೂ ನೋಡಿ ಕಣ್ಮುಚ್ಚಿದೆ.

ಡಾಕ್ಟರು ಮುರಿದ ಕಾಲಿಗೆ ಕಟ್ಟು ಬಿಗಿದರು.

ಒಮ್ಮೆ ಎಚ್ಚರ... ಇನ್ನೊಮ್ಮೆ ಮಂಪರ....ಕೆಲವೊಮ್ಮೆ ಮರಣ ಸಂಕಟ. ಏನೋ ಹೇಳಲೆಂದು ಪ್ರಯತ್ನಿಸಿದೆ, ನಾಲಿಗೆ ತೊದಲಿತು.

ಅನಂತರ ನನಗೆ ಎಚ್ಚರವಾದುದು ನಮ್ಮ ರೆಜಿಮೆಂಟಿನ ಆಸ್ಪತ್ರೆ ಯಲ್ಲಿ–ಪ್ರಾಯಶಃ ಮರುದಿನವೇ ಇರಬೇಕು. ಕಾಲು ಮುರಿದ ಭಾಗ ಕೊಳೆತು ಹೋಗಿದ್ದುದರಿಂದ ಅದನ್ನು ಕತ್ತರಿಸಿ ಹಾಕಲಾಗಿತ್ತು.

ಡಾಕ್ಟರು ನನ್ನ ಕೈಯನ್ನು ಅದುಮಿ ಹಿಡಿದು ಹೇಳಿದರು.

"ನಿನ್ನ ಕಾಲು ಕತ್ತರಿಸದೆ ಗತ್ಯಂತರವಿರಲಿಲ್ಲ. ಕತ್ತರಿಸಿದೆವು ; ಪೆಟ್ಟು ಬಿದ್ದಂದೇ ಕಟ್ಟು ಹಾಕಿದ್ದರೆ ಏನೂ ಆಗುತ್ತಿರಲಿಲ್ಲ. ನಿನ್ನ ಕೈ ಸರಿಹೋಗು ತ್ತದೆ. ನೀನು ಯೋಚಿಸಬೇಡ."

ನಾನು ಮಾತಾಡಲಿಲ್ಲ. ದುಃಖದಿಂದ ಗಂಟಲು ಬಿಗಿದುಕೊಂಡಿತು.

"ಇಡೀ ಎರಡು ದಿನಗಳು ನಿಮಗಾಗಿ ಹುಡುಕಿದ್ದಾಯ್ತು. ಏನು ಮಾಡುವುದು.....ನಿನಗೆ ಪುಣ್ಯವಿಲ್ಲ.....ಹೋಗಲಿ, ಬಿಡು. ಇಷ್ಟಾದರೂ ಆಯಿತಲ್ಲ."

"ಮುಂದೇನು ಗತಿ ಡಾಕ್ಟರ್ ?"

"ದೇವರಿದ್ದಾನೆ. ಕಾಲು ಹೊಂದಿಸಿಕೊಳ್ಳುವುದು ದೊಡ್ಡದಲ್ಲ."

"ನನ್ನ ತಂದೆ ತಾಯಿಗೆ ಕಾಗದ ಬರೆಯಿರಿ." ಎಂದೆ. ಮುಂದೆ ಮಾತು ಹೊರಡಲಿಲ್ಲ.

ಅಂತರ್ವಾಣಿ ಕೂಗಿ ಹೇಳಿತು "ನೀನು ಸೇಡು ತೀರಿಸಿಕೊಂಡುದುದು ನಿನ್ನ ತಂದೆಯ ಮೇಲಲ್ಲ ನಿನ್ನ ಮೇಲೆ!"

ಎದೆಯಾಳದಿಂದ ನೀಳವಾದ ನಿಟ್ಟುಸಿರೊಂದು ಹೊರಹೊಮ್ಮಿತು.

— o —

# ಸೂ - ಹೆಂ ಗ್

ಎಲ್ಲೆಲ್ಲೂ ಪ್ರಸನ್ನ ಮನೋಹರ ವಾತಾವರಣ.....

ಅಲ್ಲಲ್ಲಿ ಮಧುಲೋಭದಿಂದ ಅಲೆಯುವ ಭ್ರಮರಾವಳಿಗಳ ಸುರಮ್ಯ ಚಿತ್ತಾರ....

ಶ್ರೀ ವಿಜಯದ ವೈಜಯಂತಿಯಂತೆ ಹೊಮ್ಮುವ ಭ್ರಮರ ಝಂಕೃತ ನಿನಾದ.....

ಆ ಹೊರ ವಲಯದ ಹಸುರು ಚೆಲ್ಲುವ ಪುಷ್ಪಭರಿತ ವೃಕ್ಷರಾಜಿಯ ತಣ್ಣೆಳಲ್ಲಿ ಹರಿದ ಸುಂದರ ಹಾದಿಯನ್ನು ಕಳೆದು ಆಸ್ಪತ್ರೆಯ ಮೆಟ್ಟಲನ್ನು ಹತ್ತಿದೊಡನೆಯೇ ಚಂಗ್-ಚುಂಗ್ ಕಣ್ಣಿಗೆ ಬಿದ್ದ. ಹತ್ತು ವರ್ಷಗಳ ನಂತರ ಆದ ಅವನ ಭೇಟಿ ಮೈಗೆ ಬಿಸಿನೀರೆರೆಚಿದಂತಾಯಿತು. ಮುಂದಡಿಯಿಡದೆ ಅಲ್ಲೆ ನಿಂತಳು ಸೂ-ಹೆಂಗ್. ಭಯಮುದ್ರಿತ ಮುಖ ನಸುಗಪ್ಪು ತಳೆಯಿತು. ಆತ ಒಂದೆರಡು ಕ್ಷಣ ಇತ್ತಲೇ ನಿಟ್ಟಿಸಿದ. ಗಂಭೀರ ಧೀರ ಪ್ರಸನ್ನಭಾವ ಮುಖದಲ್ಲಿ ಮುದ್ರಿತವಾಯಿತು. ಗೋಡೆಯ ಬದಿಯಲ್ಲಿದ್ದ ಬೆಂಚಿನಮೇಲೆ ಅವನ ಮಡದಿ ತನ್ನ ಮೂವರು ಮಕ್ಕಳೊಡನೆ ಕುಳಿತಿದ್ದಳು.

ಎದುರಿಗೆ ನೇರ ಹಾದಿಯಲ್ಲಿ ಅವನು ನಿಂತಿದ್ದುದರಿಂದ ಹೆಜ್ಜೆ ತೆಗೆಯುವುದು ಸಹ ಕಷ್ಟವೆನಿಸಿತು. ಸೂ-ಹೆಂಗ್ ತಬ್ಬಿಬ್ಬಾಗಿ ಮಾತಾಡಿಸಲೇ ಬೇಡವೇ ಎಂಬ ಯೋಚನೆಯಲ್ಲಿರುವಾಗಲೆ ಚಂಗ್ – ಚುಂಗ್ ಮೌನ ಮುರಿದ "ನಿನಗಾಗಿಯೇ ಕಾಯುತ್ತಿದ್ದೆ."

ಎಂತಹ ಆಶ್ಚರ್ಯ ! ನನಗಾಗಿ....?

ಒಂದೆರಡು ಘಳಿಗೆ ದೇಹದಾದ್ಯಂತ ಭಾವವಿಭಾವಗಳ ವಿದ್ಯುಲ್ಲಹರಿ ಬೆಂಕಿಯ ಹೊಳೆಯಂತೆ ಹರಿದಾಡಿ ಹೋಯಿತು. ಸೂ-ಹೆಂಗ್ ತಡೆತಡೆದು ನುಡಿದಳು "ನನಗಾಗಿ....?"

ಗಂಭೀರ ಧ್ವನಿಯಲ್ಲಿ ನುಡಿದ ಚಂಗ್-ಚುಂಗ್ "ಹೌದು ; ನಿನಗಾಗಿಯೇ. ನನ್ನ ಮಡದಿಗೆ ಆರೋಗ್ಯವಿಲ್ಲ. ಅವಳನ್ನು ಇಲ್ಲಿ ಅಡ್ಮಿಟ್

ಮಾಡಬೇಕಾಗಿದೆ. ಆಗಲೇ ಬಂದೆವು ; ಡಾಕ್ಟರು ಈವರೆವಿಗೂ ಸಿಗಲಿಲ್ಲ."

"ನಾನವಳನ್ನು ತೋರಿಸಿಕೊಂಡು ಬರುವೆ."

"ಆಗಬಹುದು." ಚಂಗ್-ಚುಂಗ್ ಮಡದಿಯ ಕಡೆಗೆ ತಿರುಗಿ ಹೇಳಿದ "ಆಕೆಯೊಂದಿಗೆ ಹೋಗುತ್ತೀಯೇನು ?"

ಅವಳು "ಹೂ" ಎಂದಳು.

"ಸ್ವಲ್ಪ ತುರ್ತು ಕೆಲಸವಿದೆ. ಅದನ್ನು ಮುಗಿಸಿ ಹತ್ತು-ಹದಿನೈದು ನಿಮಿಷಗಳೊಳಗಾಗಿ ಬರುವೆ. ನಿಮಗೆ ಬೇಸರವಿಲ್ಲವಷ್ಟೆ ?"

"ಆಗಲಿ....." ಎಂದ ಚಂಗ್-ಚುಂಗ್.

ಆ ಕ್ಷಣ ಜಗಲಿಯನ್ನು ಹತ್ತಿ ವಾರ್ಡಿಗೆ ಕಾಲಿಟ್ಟಾಗ ಎದೆಯ ಮಿಡಿತ ವ್ಯಾಪ್ತಿಗೆ ಮೀರಿ ಮಿಡಿಯುತಿದ್ದುದು ಗಮನಕ್ಕೆ ಬಂದಿತು. ಆಕಸ್ಮಿಕ ಭೇಟಿಯ ಭಯಮಿಶ್ರಿತ ವಿದ್ಯುತ್ ಪುಂಜ ಎದೆಯಾಳದಲ್ಲಿ ಗೊಂದಲವೆಬ್ಬಿಸಿತು. ಆತ ಕಠೋರವಾಗಿ ವರ್ತಿಸಲಿಲ್ಲವಾದರೂ ಹತ್ತು ವರ್ಷಗಳ ಹಿಂದಿನ ಚಿತ್ರಣ ಮನಃಪಟಲದ ಮೇಲೆ ಸುಳಿಸುಳಿದಳಿಯಿತು.

ಅಂದು,

ಚಂಗ್-ಚುಂಗ್‌ನೊಡನೆ ಆಗಲಿದ್ದ ಅವಳ ವಿವಾಹವನ್ನು ವಿಧಿ ವೀ-ಲಿಯಾಂಗನ ಮೂಲಕ ತಪ್ಪಿಸಿತು. ವೀ-ಲಿಯಾಂಗ್ ಗಾಯಾಳುವಾಗಿ ಆಸ್ಪತ್ರೆಗೆ ಬಂದಾಗ ಆತನ ವ್ಯಕ್ತಿತ್ವಕ್ಕೆ ಮಾರು ಹೋದಳು ಆಕೆ. ಚಂಗ್-ಚುಂಗನೊಡನೆ ಆದ ಒಪ್ಪಂದ ಮುರಿದು ಬಿತ್ತು. ಚಂಗ್-ಚುಂಗ್ ಶಾಂತ ಸ್ವಭಾವದವನಲ್ಲ. ಅವನೆಬ್ಬಿಸಿದ ಗಲಾಟೆಯೂ ಸಾಮಾನ್ಯವಲ್ಲ. ವೀ-ಲಿಯಾಂಗನನ್ನು ಮುಗಿಸಿ ಬಿಡುವ ಹವಣಿಕೆಯು ಅವನಲ್ಲಿತ್ತು. ಕೋಪ ತಾಪಗಳ ವಶೀಭೂತನಾಗಿ ಉಗ್ರನಾದ. ಸಂಕಟದ ಮಹಾನವಮಿಯ ಉದಯವಾಯಿತು. ಸೂ-ಹೆಂಗ್ ತಲ್ಲಣಿಸಿ ಹೋದಳು. ಹೊರಗೆ ತಲೆ ಹಾಕುವುದೂ ಸಹ ಕಷ್ಟವಾಯಿತು. ಆಗ ಬಂಧುಗಳು ಒಟ್ಟುಕೂಡಿ ಪರಿಸ್ಥಿತಿಯು ವಿಕೋಪಕ್ಕೆ ಹೋಗದಂತೆ ತಡೆ ಹಿಡಿದು ಆತನಿಗೆ ನಾನಾ ವಿಧದಲ್ಲಿ ಸಮಾಧಾನ ಹೇಳಿ, ಒಡಂಬಡಿಸಿ ತಮ್ಮ ಬಳಗದ ಹೆಣ್ಣೊಂದನ್ನು ಅವನಿಗೆ ಮದುವೆ ಮಾಡಿಸಿ ಬಂದೊದಗಲಿದ್ದ ಗಂಡಾಂತರವನ್ನು ತಪ್ಪಿಸಿದರು. ಅನಂತರ ಅಂದಿಂದಿಗೂ ಆತನ ದರುಶನವಾಗಿರಲಿಲ್ಲ. ಬಹುಶಃ ಆತ ಪೀಕಿಂಗಿಗೆ

ಬಂದೇ ಇರಲಿಲ್ಲವೇನೋ. ಆತನ ಸುದ್ದಿಯೂ ಸಹ ಅಷ್ಟಾಗಿ ತಿಳಿದು ಬಂದಿರಲಿಲ್ಲ. ಇಂದು ಏಕಾಏಕಿ ಆತ ತನ್ನ ಪ್ರತೀಕ್ಷೆಯಲ್ಲಿದ್ದುದಂತೂ ಆಶ್ಚರ್ಯ....ಮಹದಾಶ್ಚರ್ಯ....

ಅಂದಿನ ರುದ್ರಭೀಷಣ ಚಿತ್ರಣ ಮನದಲೆಯಲ್ಲಿ ತೇಲಿ ಬಂದಾಗ ಮೈಯಲ್ಲಿ ಕಂಪನದ ಅಲೆ ಹರಿದಾಡಿ ಹೋಯಿತು. ಆತನ ಮುಖಮುದ್ರೆಯಲ್ಲಿ ಕಠೋರ ಚರ್ಯೆಯಾಗಲೀ ದ್ವೇಷ ಭಾವನೆಯಾಗಲೀ ಕಾಣಿಸದಿದ್ದುದೂ ಸಹ ವಿಶೇಷವೆ. ಅದೇ ವಿಚಾರವನ್ನು ಮೆಲಕು ಹಾಕುತ್ತಲೇ ತನ್ನ ಕೆಲಸವನ್ನು ಮುಗಿಸಿದಳು ಸೂ-ಹೆಂಗ್. ಆತನಿಗೆ ಮಾತುಕೊಟ್ಟಂತೆ ಹದಿನೈದು ನಿಮಿಷಗಳಲ್ಲಿ ಕೆಲಸ ಮುಗಿಸಿದರೂ ಆತನ ಬಳಿಗೆ ಹೋಗಲು ಇನ್ನೂ ಎದೆಯಲ್ಲಿ ಏನೋ ಒಂದು ಬಗೆಯ ಅಳುಕು....ಇನ್ನೇನಾದರೂ ಗೊಂದಲವೆಬ್ಬಿಸಿದರೆ ಏನು ಗತಿ? ಎಂಬ ಸಂಶಯ ಭೂತವೂ ಸಹ ಎದೆಯ ಬನವನ್ನು ಆವರಿಸಿ ಬಿಟ್ಟಿತು. ಅಂಜುತ್ತಂಜುತ್ತಲೇ ಅಲ್ಲಿಗೆ ಹೋದಳು ಸೂ-ಹೆಂಗ್.

"ಡಾಕ್ಟರಲ್ಲಿಗೆ ಹೋಗಿ ಬರೋಣವೇ ?"

ಚಂಗ್-ಚುಂಗ್ ಮಡದಿಗೆಂದ "ನೀನು ಅವಳೊಂದಿಗೆ ಹೋಗಿ ಬಾ. ನಾನು ಮಕ್ಕಳೊಂದಿಗಿರುವೆ, ಆದೀತೆ ?"

"ಆಗಲಿ" ಎನ್ನುತ ಆಕೆ ಎದ್ದು ನಿಂತಳು.

ರಕ್ತಹೀನ ಶಕ್ತಿಹೀನ ಶರೀರ ಬೆಳ್ಳನೆ ಬಿಳಿಚಿಕೊಂಡಿತ್ತು. ಮುಖ ಮೈಗಳಲ್ಲಿ ಊತ, ಏದುಸಿರು ಬಿಡುವ ರೀತಿ ಮನವನ್ನು ಕರಗಿಸುವಂತಿತ್ತು. ಸೂ-ಹೆಂಗಳನ್ನು ಹಿಂಬಾಲಿಸಿದಳು ಅವಳು. ಐದು ನಿಮಿಷದಲ್ಲಿ ನಡೆಯಬಹುದಾದ ಹಾದಿಯನ್ನು ಕ್ರಮಿಸಲು ಹತ್ತು ನಿಮಿಷ ತೆಗೆದುಕೊಂಡಳೋ ಏನೋ....

ಡಾಕ್ಟರು ಅವಳ ಸ್ಥಿತಿಗತಿಯನ್ನು ಪರೀಕ್ಷಿಸಿ ಔಷಧಿಗಳ ಅನುಕ್ರಮಣಿಕೆಯನ್ನೂ ಪೌಷ್ಟಿಕ ಆಹಾರದ ಪಟ್ಟಿಯನ್ನೂ ಬರೆದುಕೊಟ್ಟು ಆಕೆ ಅನುಸರಿಸಬೇಕಾದ ವಿಧಿವಿಧಾನವನ್ನು ತಿಳಿಯ ಹೇಳಿದರು. ಇಬ್ಬರೂ ಹೊರಟರು. ಅವಳು ಪಟ್ಟಿಗಳ ಮೇಲೆ ಕಣ್ಣಾಡಿಸಿ ನಿಟ್ಟುಸಿರು ಹೊರಹಾಕಿದಳು. ಇಷ್ಟೊಂದು ಬೆಲೆಯುಳ್ಳ ಔಷಧಿ ಕಷಾಯ ತೆಗೆದುಕೊಳ್ಳುವುದು ನಮ್ಮಿಂದ ಸಾಧ್ಯವೇ ಎಂಬ ಯೋಚನೆಯು ಮನದಲ್ಲಿ ಸುಳಿದಾಗ ಶೀರ್ಣಿತ ಮುಖ

ಮುಂಡಲ ಮ್ಲಾನವಾಯಿತು. ಭಾರವಾದ ನಿಟ್ಟುಸಿರೊಂದು ತಪ್ಪಿಸಿ ಕೊಂಡಿತು. ಬಾಯಿಂದ ಶಬ್ದಗಳು ಹೊರಡಲಿಲ್ಲ.

"ಡಾಕ್ಟರು ಹೇಳಿದ ಕ್ರಮವನ್ನು ನೀನು ಖಂಡಿತ ಅನುಸರಿಸಬೇಕು."

ತನ್ನ ಒಡಲ ಸಂಕಟವನ್ನೆಲ್ಲ ಒಂದೇ ವಾಕ್ಯದಲ್ಲಿ ಹೊರಹಾಕಿದಳು ಅವಳು,

"ನಮ್ಮಂತಹ ದೀನದರಿದ್ರರಿಗೆ ದೇವರು ಕೊನೆಯ ಪಕ್ಷ ಆರೋಗ್ಯ ವನ್ನಾದರೂ ಕೊಡಬೇಕಿತ್ತು."

"ಹೆಚ್ಚು ಮನಸ್ಸಿಗೆ ಹಚ್ಚಿಕೊಳ್ಳಬೇಡ ; ದೇವರಿದ್ದಾನೆ."

"ಇಷ್ಟಕ್ಕೆಲ್ಲಾ ಹಣವಾದರೂ ಎಲ್ಲಿಂದ ?"

"ಹಾ....! ಹಾಗೆಂದರೆ ನಿನ್ನ ಮಕ್ಕಳಿಗೆ ಸ್ವಂತ ತಾಯಿ ಬೇಕಷ್ಟೆ ? ಇನ್ನೆರಡು ತಿಂಗಳೊಳಗಾಗಿ ನೀನು ಚೇತರಿಸಿಕೊಳ್ಳದಿದ್ದಲ್ಲಿ ಪ್ರಸವ ಕಾಲ ದಲ್ಲಿ ತೊಂದರೆಯಾಗುತ್ತದೆ. ನೀನು ಬೇಗನೆ ಚೇತರಿಸಿಕೊಂಡರೆ ತಾಯಿ ಮಗು ಸುಖವಾಗಿ ಮನೆಯನ್ನು ಸೇರುವಿರಿ."

ಆಕೆ ಮಾತಾಡಲಿಲ್ಲ. ತಲೆ ಬಾಗಿ ಹೆಜ್ಜೆ ಹಾಕಿದಳು.

ಸೂ-ಹೆಂಗಳ ನೋಟ ಅವಳನ್ನು ಒಂದೆರಡು ಕ್ಷಣ ನಿಟ್ಟಿಸಿತು. ನಿಶ್ಚಲ ನಯನಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡುತಿತ್ತು. ಅಂತರಂಗ ದಲ್ಲಿನ ಅಪಾರವಾದ ಶೋಕ ವ್ಯಾಕುಲತೆ ಮ್ಲಾನ ಮುಖಮುದ್ರೆಯಲ್ಲಿ ಅಚ್ಚೊತ್ತಿದ್ದ ದೃಶ್ಯ ಅತ್ಯಂತ ಕರುಣಾಜನಕವಾಗಿತ್ತು.

ಒಂದು ಘಳಿಗೆ-ಆ ಮುಹೂರ್ತದಲ್ಲಿ ಜಗತ್ತೇ ಶೋಕ ವ್ಯಾಕುಲತೆಯ ಪ್ರತೀಕದಂತೆ ತೋರಿತು. ಸೂ-ಹೆಂಗ್ ಭಾವಾವಿಷ್ಟಳಾದಳು.

* * * *

ವೀ-ಲಿಯಾಂಗ್ ವಿಸ್ಮಯ ಚಕಿತನಾಗಿ ಆಕೆಯನ್ನು ಒಂದೆರಡು ಕ್ಷಣ ನಿಟ್ಟಿಸಿದ. ಇಂದು ಎಂದಿನಂತೆ ಸೂ-ಹೆಂಗ್ ಡ್ಯೂಟಿ ಮುಗಿಸಿ ಮನೆಗೆ ಬಂದಾಗ ಆನಂದಮಯಿಯಾಗಿರಲಿಲ್ಲ. ಆಕೆಯಲ್ಲಿ ಯಾವುದೋ ಆಲಸ್ಯ ಮನೆ ಮಾಡಿದೆ ಎಂಬುದನ್ನು ಒಮ್ಮೆಗೇ ಕಂಡುಕೊಂಡ. ಅವಳ ನಡೆ ನುಡಿ ಗಳು ಯಾಂತ್ರಿಕವಾಗಿದ್ದುವು. ಚಹ ತಯಾರಿಸುವಾಗಲೂ ವಿಚಿತ್ರ ರೀತಿ ಯಲ್ಲಿ ಅನ್ಯಮನಸ್ಕಳಾಗಿದ್ದುದರಿಂದ ಹೆಚ್ಚು ಮಾತುಕತೆಯೂ ನಡೆಯಲಿಲ್ಲ.

ಕಣ್ಣುಗಳಲ್ಲಿ ಯಾವುದೋ ಅನಿರ್ವಚನೀಯ ಭಾವುಕತೆ ತುಂಬಿ ತುಳುಕು ತಿತ್ತು. ಮೇಘಾವೃತ ಆಕಾಶದಂತೆ, ಶೈವಾಲಯುಕ್ತ ಸರೋವರದಂತೆ ಚಿದಾ ಕಾಶವು ಕಾರ್ಮೋಡಗಳಿಂದ ತುಂಬಿಹೋಗಿತ್ತು. ಬಹುಶಃ... ಆಸ್ಪತ್ರೆಯಲ್ಲಿ ಯಾರಿಂದಲಾದರೂ ಆಕ್ಷೇಪಣೆಗೆ ಒಳಗಾಗಬೇಕಾಯಿತೋ ಏನೋ ಎಂಬ ಅತ್ಯಂತ ಆತಂಕಪೂರ್ಣ ಭಾವನೆಯಿಂದ ವೀ–ಲಿಯಾಂಗ್ ಕೇಳಿದ,

"ಏಕೆ....ಏನೋ ಒಂದು ಬಗೆಯಾಗಿದ್ದಿ? ಮೈಯಲ್ಲಿ ಚೆನ್ನಾಗಿಲ್ಲವೇ? ಅಥವಾ ಇನ್ನೇನಾದರೂ...." ಮಾತನ್ನು ಅಷ್ಟಕ್ಕೆ ತುಂಡುಗಡಿದು ಮಡದಿ ಯನ್ನು ಸೂಕ್ಷ್ಮವಾಗಿ ಗಮನಿಸಿದ.

ಏನೋ ಒಂದು ರೀತಿಯಲ್ಲಿ ಅಜ್ಞಳಂತೆ ಉತ್ತರಿಸಿದಳು ಅವಳು.

"ಏನೂ ಇಲ್ಲ."

"ತಲೆ ನೋಯುತ್ತದೆಯೇ ?"

ಮೊದಲು 'ಹೂ' ಎನ್ನಲು ಬಯಸಿದ್ದು, ಕಂಠಸ್ವನ ತುಟಿಯವರೆಗೆ ಹರಿದು ಬರುತ್ತಲೂ ಅಲ್ಲಿಂದಲ್ಲೇ ಅದುಮಿ, ತಕ್ಷಣ ದನಿಯನ್ನು ಬದುಲಿಸಿ– "ಏನೂ ಇಲ್ಲ ; ಹೆಚ್ಚು ಕೆಲಸದಿಂದ ಆಯಾಸವಾಗಿರಬಹುದು ಅಷ್ಟೆ."

"ನನ್ನಿಂದ ನೀನೇನೂ ಮರೆಮಾಚುತಿಲ್ಲವಷ್ಟೆ ?"

ವಿಚಿತ್ರ ರೀತಿಯಲ್ಲಿ ಜಾಹೀರಾತಿಗೆ ಬೀರುವಂತಹ ಕೃತಕ ನಗುವನ್ನು ಬೀರಿ ಅವಳು ಒಳಹೋದಳು. ಒಳಗಡೆ ಅಗತ್ಯವಾಗಿ ಮಾಡುವ ಕೆಲಸ ಬೇಕಾದಷ್ಟಿತ್ತು. ಆದರೆ, ಶರೀರ ಭಾರಾಕ್ರಾಂತವಾಗಿರುವುದರಿಂದ ಮಾಡಲು ಮನಸ್ಸೇ ಇಲ್ಲ. ಎಲ್ಲಾದರೂ ಏಕಾಂತದಲ್ಲಿ ಹೊತ್ತು ಕಳೆಯೋಣ ವೆಂಬಷ್ಟು ಯೋಚನೆ. ಆದರೆ, ಅದೂ ನಡೆಯುವಂತಿಲ್ಲ. ವೀ–ಲೀಯಾಂಗ್ ಅದೇ ತಾನೇ ಕೆಲಸ ಮುಗಿಸಿ ಬಂದುದರಿಂದ ಆತನಿಗೆ ಮಡದಿಯ ಸಹವಾಸದ ಬಯಕೆ. ಎಲ್ಲಿ ಹೋದರೂ ಹಿಂದಿಂದೆಯೆ ಬರುವ. ಆ ವಿಚಾರ ಈ ವಿಚಾರ ಪ್ರಸ್ತಾಪಿಸುತ್ತ ತಿರುಗಾಡುವ. ಸ್ವಲ್ಪ ಸಮಯವಾದರೂ ಆತನ ಕಣ್ಣು ತಪ್ಪಿಸಿ ಇರುವಂತೆಯೂ ಇಲ್ಲ. ಆದರೂ ಅಂತರ್ಗತ ಶೋಕ ವ್ಯಾಕುಲತೆ ಯನ್ನು ತೋರಗೊಡದೆ ಅಡುಗೆ ಮನೆಯ ದಿನಚರಿಯಲ್ಲಿ ತೊಡಗಿದಳು ಸೂ–ಹೆಂಗ್. ಚಿತ್ರಭಿತ್ತಿಯಲ್ಲಿ ಚಂಗ್–ಚುಂಗನ ಮುದ್ದು ಮಕ್ಕಳು ನಲಿದಾಡಿದುವು. ಆತನ ಮಡದಿಯ ಅಶಕ್ತ ಶರೀರ ಶೇಲಿಹೋಯಿತು.

ಒಮ್ಮೊಮ್ಮೆ ಆತನ ವ್ಯಕ್ತಿತ್ವವೂ ಅಕ್ಷಿಪಟಲದಮೇಲೆ ಸುಳಿದಳಿಯುವುದು. ಹತ್ತು ವರ್ಷಗಳನಂತರ ಆದ ಆತನ ಭೇಟಿ ಸುಖ-ದುಃಖಗಳ ಪರಮಾಮೃತ ವನ್ನು ಒಂದೇ ಬಾರಿಗೆ ಹೃದಯ ಬಿರಿಯುವಂತೆ ಉಣಬಡಿಸಿತು. ಆತ ದ್ವೇಷ ವರ್ಷಿತ ಸಂಘರ್ಷಣಭಾವವನ್ನು ಬದಿಗೊತ್ತಿ ಆತ್ಮೀಯತೆಯನ್ನು ತೋರಿ ದ್ದಾನೆ.ಆದರೂ ಆತನ, ರಾಗಾರುಣಪೂರ್ಣ ನಯನದ್ವಯಗಳಲ್ಲಿ ಮಿಂಚುವ ಭಾವಜ್ವಾಲೆ....ತುಟಿಗಳಂಚಿನಲ್ಲಿ ಮಿನುಗುವ ಮಾಯಕ ನಗು....ಅಂಗ ಪ್ರತ್ಯಂಗಗಳಿಂದ ಹೊಮ್ಮುವ ಭಾವವಿಭಾವಗಳ ಶೀತಲ ಸ್ಫೂರ್ತಿ....ತನ್ನಂತ ರಂಗದ ಕುಂದುಕೊರತೆಗಳನ್ನು ಸೂಜಿಗಲ್ಲಿನಂತೆ ಸೆರೆ ಹಿಡಿದು ಹೊರತರುತ್ತವೆ ....ಆಗ ಆ ವಿಕ್ಷುಬ್ಧ ಸನ್ನಿವೇಶದಲ್ಲಿ ಅಭಿಶಪ್ತ ಹೆಜ್ಜೆಗಳು ಉನ್ನತ ವೇಗದಿಂದ ಆಕೆಯನ್ನು ಆಸ್ಪತ್ರೆಯ ಒಳಾಂತರಕ್ಕೆ ಒಯ್ದು ಉಪಕಾರ ಮಾಡುತ್ತವೆ.

* * * *

ಚಂಗ್-ಚುಂಗ್ ಮಡದಿಯನ್ನು ಆಸ್ಪತ್ರೆಗೆ ಸೇರಿಸಿದ. ಆಕೆಯ ಶುಶ್ರೂಷೆಯನ್ನು ಬಹಳ ಮಟ್ಟಿಗೆ ಸೂ-ಹೆಂಗ್ ನೋಡಿಕೊಳ್ಳುತ್ತಾಳೆ. ಇತರೆ ಸೇವಿಕೆಯರಿದ್ದರೂ ಆಕೆಗೆ ಇವಳೇ ಬೇಕು. ಚಂಗ್-ಚುಂಗ್ ಕಂಡಾಗೆಲ್ಲಾ ದೀನಾದೀನನಾಗಿ "ಅವಳನ್ನೊಂದಿಷ್ಟು ಚೆನ್ನಾಗಿ ನೋಡಿಕೊಂಡು ಉಪಕಾರ ಮಾಡು ಸೂ-ಹೆಂಗ್" ಎನ್ನುತ್ತಿದ್ದ.

"ಖಂಡಿತ ನೋಡಿಕೊಳ್ಳುವೆ. ನೀನು ಆ ಬಗ್ಗೆ ಕಿಂಚಿತ್ತೂ ಯೋಚಿಸ ಬೇಡ." ಎಂಬುದು ಆಕೆಯ ನಿರ್ವಂಚನೆಯ ಉತ್ತರ.

ತನ್ನ ಬಿಡುವಿನ ವೇಳೆಯನ್ನೆಲ್ಲ ಅವಳಿಗಾಗಿಯೇ ಮೀಸಲಿಡುವಳು ಸೂ-ಹೆಂಗ್. ಅವಳ ಚಿಕಿತ್ಸೆಗೆ ತನ್ನಲ್ಲಿ ಸಾಕಷ್ಟು ಹಣವಿಲ್ಲವೆಂಬುದನ್ನು ಆತ ವ್ಯಕ್ತಪಡಿಸದಿದ್ದರೂ ಆತನ ಮುಖ ಮುದ್ರೆ ಸಾರಿ ಹೇಳುತಿತ್ತು ; ಆಕೆಯ ಖಿನ್ನ ವದನ ಸೂಚನೆ ಕೊಡುತಿತ್ತು. ಏಳು ತಿಂಗಳ ಗರ್ಭಿಣಿ : ಮೈಯಲ್ಲಿ ನೆತ್ತರಿಲ್ಲ ; ಮೂವರು ಚಿಕ್ಕಚಿಕ್ಕ ಮಕ್ಕಳು....ಚಿತ್ತಭಿತ್ತಿಯ ಮೇಲೆ ಆ ರುದ್ರಚಿತ್ತಾರ ಮೂಡಿದೊಡನೆಯೇ ಒಡಲು ಸಂಕಟದಿಂದ ತುಂಬಿ ಹೋಗುವುದು. ಹೃದಯ ಬನದ ಕೋಗಿಲೆ ವೀತರಾಗದಿಂದ ಹಾಡುವುದು.

ದಿನವೂ ಆತ ವರಾಂಡದಲ್ಲಿ ಕಾದಿರುತ್ತಾನೆ. ಮಕ್ಕಳು ಮಣ್ಣಿನ ಹುಡಿ ಯಲ್ಲಿ ಆಡುತ್ತ ಮನಮೋಹಕ ನಗುವನ್ನು ಚೆಲ್ಲುತ್ತವೆ. ಒಳಗಡೆ ರೋಗಿ

ಭವಿಷ್ಯವನ್ನು ಕುರಿತು ಚಿಂತಿಸುತ್ತ ಹಾಸಿಗೆಯಮೇಲೆ ಮೈ ಮುದುಡಿರುತ್ತಾಳೆ. ಕಣ್ಣುಗಳಲ್ಲಿ ತುಂಬಿ ತುಳುಕಿದ ಕಂಬನಿ ದಿಂಬನ್ನು ತೊಯ್ಸಿರುತ್ತದೆ.

ಹನ್ನೆರಡು ವರ್ಷಗಳ ಸರ್ವೀಸಿನಿಂದ ಸೂ-ಹೆಂಗ್ ಉತ್ತಮ ಸೇವಿಕೆಯೆಂದು ಪರಿಗಣಿಸಲ್ಪಟ್ಟಿದ್ದಾಳೆ. ದಿನವೂ ಆಕೆ ನೋಡುವುದು ಜೀವನ ದುರಂತವನ್ನೇ ; ಈ ಚಿತ್ರ ಆಕೆಗೇನೊ ಹೊಸದಲ್ಲ. ದಿನವೂ ಹತ್ತಾರು ಹೊಚ್ಚ ಹೊಸ ಶಿಶುಗಳನ್ನು ಈ ಜಗತ್ತಿಗೆ ಬರಮಾಡಿಕೊಳ್ಳುತ್ತಾಳೆ. ಅವುಗಳಲ್ಲಿ ಹಲಕೆಲವು ಕೈ ತಪ್ಪಿಹೋಗುವುದುಂಟು. ಆದರೆ, ಎಂದೂ ಇಂತಹ ಸಂಕಟವನ್ನುಂಡಿರಲಿಲ್ಲ. ಅದೂ ಸಹ ಅವಳಿಗೆ ಅಚ್ಚರಿಯೆ.

ವಾರ್ಡಿನಿಂದ ಹೊರ ಬರುವ ಅವಳನ್ನು ಚಂಗ್-ಚುಂಗ್ ಆತಂಕದಿಂದ ನಿಟ್ಟಿಸುತಿದ್ದ. ಆ ನೋಟದಲ್ಲಿ ಮರ್ಮಾಂತಿಕ ವೇದನೆ....ಅಲ್ಲ ; ಯಾವುದೋ ಅನಿರ್ವಚನೀಯ ಸಂವೇದನೆ....ಹೊಮ್ಮುತ್ತಿತ್ತು. ನಿಶ್ಚಲ ನೇತ್ರಗಳ ವಿಭ್ರಮ ಭಾವವನ್ನು ವಿಲೋಲ ಲೋಚನೆಯಾಗಿ ನಿಟ್ಟಿಸುವಳು ಅವಳು. ಕೆಲಸ ಕಾರ್ಯಗಳು ಯಾಂತ್ರಿಕವಾಗಿ ನಡೆಯುವುವು. ಹೃದಯ ಸುಖ ದುಃಖಗಳ ಬೀಡಾಗುವುದು.

ಇಂದು,

ಆಕೆಯ ಔಷಧ ಮುಗಿದಿತ್ತು. ಔಷಧ ತರುವ ಯೋಚನೆಯಿದ್ದರೂ ಹಣದ ಅಭಾವ ಮನವನ್ನು ಹಿಂಡುತಿತ್ತು. ಜಗಲಿಯಲ್ಲಿ ಕಂಬಕ್ಕೆ ಒರಗಿ ನಿಂತಿದ್ದ ಚಂಗ್-ಚುಂಗ್ ಮಕ್ಕಳೊಂದಿಗೆ ಅಂಗಡಿಗೆ ಹೋಗುವ ಯೋಚನೆಯಿಂದಿದ್ದರೂ, ಅಲ್ಲಿ ಮಕ್ಕಳು ಬೇಡಬಹುದಾದ ತಿಂಡಿ-ತಿನಿಸುಗಳನ್ನು ಕೊಡಿಸುವ ಶಕ್ತಿಯಿರದೆ ಸುಮ್ಮನಾಗಿದ್ದ. ಕೆಲಸ ಮುಗಿಸಿ ಮನೆಗೆ ಹೊರಟ ಸೂ-ಹೆಂಗ್ ಮಕ್ಕಳಿಗೆಂದಳು,

"ಬನ್ನಿ ; ಅಂಗಡಿಯ ಕಡೆ ಹೋಗಿ ಬರೋಣ."

"ಬೇಡ ; ನಿನಗೇಕೆ ತೊಂದರೆ ?" ಎಂದ ಚಂಗ್-ಚುಂಗ್.

"ತೊಂದರೆ ಏನೂ ಇಲ್ಲ ; ಬರಲಿ."

ಅಷ್ಟೆಂದುದೇ ತಡ ಮಕ್ಕಳು ಹೊರಟರು. ಚಂಗ್-ಚುಂಗನೂ ಹಿಂಬಾಲಿಸಿದ.

ಹೆಮ್ಮರಗಳ ತಂಪಿನಲ್ಲಿ ಹರಿದ ಸುರಮ್ಯ ಹಾದಿಯಲ್ಲಿ ಸ್ವಲ್ಪದೂರ ಮೌನವಾಗಿ ಸಾಗಿತು ನಡಿಗೆ. ವಿಶಾಲವಾದ ಹೊರಲಮಯದ ಆಚೆ ಸಣ್ಣ

ಪುಟ್ಟ ಅಂಗಡಿಗಳ ಸಾಲು. ಅಲ್ಲಿ ರೋಗಿಗಳಿಗೆ ಅಗತ್ಯವಾದ ಎಲ್ಲ ಸಾಮಗ್ರಿಗಳೂ ದೊರೆಯುತ್ತವೆ. ಮಕ್ಕಳಿಗೆ ಸಿಹಿಯನ್ನೂ ರೋಗಿಗೆ ಅಗತ್ಯವಾದ ಕೆಲವು ಔಷಧಗಳನ್ನೂ ತಾನೇ ಕೊಂಡುಕೊಂಡಳು. ಆತ ಬೇಡವೆಂದರೂ ಕೇಳಲಿಲ್ಲ........ಮಣಿಯಲಿಲ್ಲ....

* * * *

ಮೇಘ ಮಂಡಲದ ಘನ ಕೃಷ್ಣ ಶ್ಯಾಮಲ ವಕ್ಷಃಸ್ಥಲದಲ್ಲಿ ಮಿಂಚಿನ ಬಳ್ಳಿ ಜಾಜ್ವಲ್ಯಮಾನವಾಗಿ ಮಿಂಚಿ ಮಾಯವಾಯಿತು.

ಕಾರ್ಮೋಡಗಳಿಂದ ಸಮಾವೃತವಾದ ನೀಲಗಗನವನ್ನು ನಿಟ್ಟಿಸುತ್ತ ಮೆಟ್ಟಿಲಿಳಿದಳು ಸೂ–ಹೆಂಗ್. ಮನಸ್ಸು ಪ್ರಸ್ತುತ ಪರಿಸ್ಥಿತಿಯಲ್ಲಿ ಮುಳುಗಿ ಹೋಗಿತ್ತು. ಹನ್ನೆರಡು ವರ್ಷಗಳ ನರ್ಸ್ ಜೀವನದಲ್ಲಿ ಎಂದೂ ಇಂಥ ಕಾರಣಕ್ಕಾಗಿ ಇಷ್ಟೊಂದು ಮನಃಕ್ಲೇಶ ಉಂಟಾಗಿರಲಿಲ್ಲ....ಎದೆಯಾಳದಲ್ಲಿ ಇಷ್ಟೊಂದು ತಳಮಳ ಮೂಡಿರಲಿಲ್ಲ ; ಏನೆಂಬುದೇ ಅರ್ಥವಾಗುತ್ತಿಲ್ಲ : ಏಕೆಂಬುದೇ ತಿಳಿಯುತ್ತಿಲ್ಲ.

ಮನೆ ಮುಟ್ಟಿದಾಗ ಪೀ–ಲಿಯಾಂಗ್ ಮಡದಿಗಾಗಿ ಕಾದಿದ್ದ. ದೃಷ್ಟಿಯ ನೇರಕ್ಕೆ ದೂರದಲ್ಲಿ–ಬಹು ದೂರದಲ್ಲಿ ಮಡದಿಯ ಸ್ವರೂಪ ಸಣ್ಣ ಕಡ್ಡಿಯಂತೆ ಕಾಣಿಸಿದಾಗಲೇ ಪೀ–ಲಿಯಾಂಗನ ಮುಖ ಅರಳಿತು. ಆತನ ವದನ ಮಂಡಲದ ಶೋಭೆ ಚಿತ್ರದೀಪ್ತಿಯ ಶೋಭೆಗೆ ಉಪಮಾನವಾಗಬಲ್ಲದು. ಆತನ ಪ್ರತೀಕ್ಷೆಯಂತೆ ಕ್ಷಣ ಕ್ಷಣ ಪ್ರತಿಕ್ಷಣ ಆಕೆಯ ಪ್ರಶಸ್ತ ಹೆಜ್ಜೆಗಳು ಹತ್ತಿರ ಹತ್ತಿರವಾಗುತ್ತಿವೆ.

ಸೂ–ಹೆಂಗಳು ಪೀ–ಲಿಯಾಂಗ್ ತಲೆಬಾಗಿಲಿನಲ್ಲಿ ನಿಂತಿರುವುದನ್ನು ಅಲ್ಲಿಂದಲೇ ನೋಡಿದಳು. ಆತನ ತುಟಿಗಳಂಚಿನಲ್ಲಿ ನಲಿಯುತಿದ್ದ ಸುಹಾಸಕ್ಕೆ ಪ್ರತಿಹಾಸ ಮೂಡಿಸಿದರೂ ಅದು ಕೃತಕವಾಗಿ ತೋರಿತು. ಅವಳ ಮಾನಸಿಕ ವಿಭ್ರಮವೇಗ ತನುವನ್ನು ಗಾಣಕ್ಕೆ ಕೊಟ್ಟಂತೆ ಹಿಂಡುತಿತ್ತು. ಪೀ–ಲಿಯಾಂಗ್ ಆಚ್ಚರಿಯಿಂದ ಆಕೆಯನ್ನು ನಿಟ್ಟಿಸಿದ. ಆಕೆಯ ಚರ್ಯೆ ಪಾತ್ರಧಾರೀ ನವನಟಿಯಂತಿದೆ. ಚಲನವಲನಗಳು ಸಹಜಭಾವಕ್ಕೆ ವಿರಕ್ತಿಯ ಸೌರಭವನ್ನು ಬಳಿದಿವೆ.

ವೀ-ಲಿಯಾಂಗ್ ಅವಳು ಒಳ ಬರುತ್ತಲೂ ಆತಂಕದಿಂದ ಪ್ರಶ್ನಿಸಿದ "ಸೂ-ಹೆಂಗ್, ಇಂದೂ ಏನೋ ಒಂದು ಒಗೆಯಾಗಿದ್ದಿ. ನಿನ್ನ ರೀತಿಯೇ ಅರ್ಥವಾಗುತ್ತಿಲ್ಲ."

ಆ ಕ್ಷಣ ತುಸು ಬೆಚ್ಚಿದರೂ ಮರುಕ್ಷಣದಲ್ಲೇ ಸುಧಾರಿಸಿಕೊಳ್ಳುತ್ತ ಆಕೆ ನುಡಿದಳು.

"ಸ್ವಲ್ಪ ಆಯಾಸವಾಗಿರಬಹುದು ಅಷ್ಟೆ."

"ಏಕೆ ? ಆರೋಗ್ಯವಿಲ್ಲವೇ ?"

ಅವನಿಗೆ ಏನಾದರೂ ಹೇಳಲೇಬೇಕಾಗಿತ್ತು. ಹೇಳದಿದ್ದರೆ ಪುನಃ ಪುನಃ ಅದನ್ನೆ ಪಟ್ಟು ಹಿಡಿದು ಕೇಳಿಯೇ ಕೇಳುವ. ಒಂದು ಕ್ಷಣ ಯೋಚಿಸಿ ಹೇಳಿದಳು ಸೂ-ಹೆಂಗ್,

"ಹೆರಲಿರುವ ತಾಯಿಯೊಬ್ಬಳ ಸ್ಥಿತಿ ಬಹಳ ಶೋಚನೀಯವಾಗಿದೆ. ಅವಳ ಆರ್ಥಿಕ ಸ್ಥಿತಿಯೂ ಅಷ್ಟು ಉತ್ತಮವಾಗಿಲ್ಲ. ಮೂವರು ಚಿಕ್ಕ ಮಕ್ಕಳಿವೆ. ಅವಳನ್ನು ನೋಡಿದಾಗಿನಿಂದ ಮನದಲ್ಲಿ ಸಂಕಟ ಬೇರೂರಿ ಬಿಟ್ಟಿದೆ. ನಿನ್ನಿಂದ ಆಕೆಗೇನಾದರೂ ಸಹಾಯ ಮಾಡಲು ಸಾಧ್ಯವೇ ?"

"ನಿನಗಿದು ದಿನ ನಿತ್ಯದ ಸಮಾಚಾರ. ಅದಕ್ಕೇಕೆ ಚಿಂತೆ ? ಇಂತಹ ಕಷ್ಟನಷ್ಟಗಳನ್ನು ಎಷ್ಟು ಬಾರಿ ನೋಡಿಲ್ಲ ? ಹಾಗೆಲ್ಲಾ ಸಹಾಯ ಮಾಡುವುದಾದರೆ ಎಷ್ಟು ಮುಂದಿಗೆ ಮಾಡಲು ಸಾಧ್ಯ ?"

"ಅದು ನಿಜವೆ. ಆದರೂ ಮನಕ್ಕಂಟಿ ಹೋಗಿದೆ....ತುಂಬ ಬೇಸರ."

ವೀ-ಲಿಯಾಂಗ್ ಮಾತಾಡಲಿಲ್ಲ.

ಸೂ-ಹೆಂಗ್ ದಿನಚರಿಯಲ್ಲಿ ನಿಮಗ್ನಳಾದಳು.

* * * *

ತಣ್ಣನೆಯ ತಂಪೊರೆಯುವ ಕಾಳರಾತ್ರಿ.

ನೀಲಗಗನದ ವಕ್ಷಸ್ಥಳದಲ್ಲಿ ಶುಕ್ಲಪಕ್ಷದ ಚಂದ್ರಮ.

ಅಗಣಿತ ನಕ್ಷತ್ರಗಳ ರಾಶಿ....ರಾಶಿ.

ಪ್ರಸ್ತುತ,

ವಾತಾವರಣ ಶೀತಲವಾಗಿದ್ದರೂ ಹೃದಯಧರಿತ್ರಿ ಶೀತಲವಾಗು ವಂತಿಲ್ಲ. ರಾತ್ರಿ ಎಷ್ಟೇ ಪ್ರಯತ್ನ ಪಟ್ಟರೂ ಅವಳಿಗೆ ನಿದ್ದೆ ಹತ್ತಲಿಲ್ಲ.

ಚಿತ್ರಭಿತ್ತಿಯಲ್ಲಿ ಆ ಪುಟ್ಟ ಮಕ್ಕಳು ನಲಿಯುತ್ತಿದ್ದುವು. ತನಗೂ ಅಂತಹ ಮಕ್ಕಳ ಭಾಗ್ಯವಿದ್ದಿದ್ದರೆ ಎಂಬ ಆಲೋಚನೆಯೂ ಕಾಡುತ್ತದೆ ಚಂಗ್–ಚುಂಗನನ್ನು ತಿರಸ್ಕರಿಸಿದ ತಪ್ಪಿಗೆ ದೇವರು ಮಕ್ಕಳ ಭಾಗ್ಯ ನೀಡಲಿಲ್ಲವೇನೋ ಎಂಬ ಚಿಂತನೆ ಮನವನ್ನು ಹಿಂಡುತ್ತದೆ. ಅನಿರೀಕ್ಷಿತವಾಗಿ ಕಣ್ಣುಗಳಲ್ಲಿ ನೀರಾಡಿತು. ಹತ್ತು ವರ್ಷಗಳ ದಾಂಪತ್ಯ ಜೀವನದಲ್ಲಿ ಇಂತಹ ಉತ್ಕಟ ಆಕಾಂಕ್ಷೆ ಎಂದೂ ಮೂಡಿರಲಿಲ್ಲ. ಇಂದೇಕೆ ಹೀಗೆ ಎಂಬುದೂ ಸಹ ಅರ್ಥವಾಗುತ್ತಿಲ್ಲ.

ಮಡದಿಗೆ ನಿದ್ದೆ ಬಂದಿಲ್ಲವೆಂಬುದು ಅವನಿಗೂ ಗೊತ್ತು. ಆದರೆ, ಅವಳು ನಿದ್ದೆಯ ಸೋಗು ಹಾಕಿದುದು ನುಂಗಲಾರದ ತುತ್ತಿನಂತಾಯಿತು. ಅದೇ ಯೋಚನೆಯಲ್ಲಿ ತನ್ಮಯನಾಗಿ ಅವಳ ನಳಿದೋಳನ್ನು ಹಿಡಿದು ಅಲುಗಿಸಿ ಕೇಳಿದ "ಇದೇನು ಕತೆ ? ಸೂ–ಹೆಂಗ್ ?"

ಅದೇ ತಾನೆ ನಿದ್ದೆಯಿಂದ ಎಚ್ಚತ್ತವಳಂತೆ "ಹಾ!" ಎಂದಳು ಅವಳು.

"ನಿನಗೆ ನಿದ್ದೆ ಬರಲಿಲ್ಲವೇ ?"

"ಬಂದಿತ್ತು; ಎಲ್ಲಾ ಅರೆ–ಬರೆ; ಮತ್ತೇಕೋ ಎಚ್ಚರವಾಯಿತು."

"ನೀನು ಏನನ್ನೋ ಮನದಲ್ಲಿ ಹದುಗಿಡುತಿದ್ದಿ."

"ಅದೇ ಆಗಲೇ ಹೇಳಿದೆನಲ್ಲಾ ?"

"ಅದಷ್ಟಕ್ಕಾಗಿ.....?" ಆಶ್ಚರ್ಯಭರಿತ ಧ್ವನಿಯಲ್ಲಿ ಪ್ರಶ್ನಿಸಿದ ವೀ–ಲಿಯಾಂಗ್.

"ಗಂಡಸರಿಗೆ ಇದೆಲ್ಲಾ ಅರ್ಥವಾಗುವುದಿಲ್ಲ ಬಿಡು."

"ಒಳ್ಳೆ ಚೆನ್ನಾಗಿದೆ....ಆಕೆಗಾಗಿ ನೀನೇಕೆ ಚಿಂತಿಸಬೇಕು ?"

"ಮಕ್ಕಳು ತುಂಬ ಚಿಕ್ಕವರು, ಆರ್ಥಿಕ ಪರಿಸ್ಥಿತಿಯೂ ಉತ್ತಮವಾಗಿಲ್ಲ. ಅಂದರೂ ಸಹ ನಿನ್ನ ನಿರ್ದಯತೆ ಅರ್ಥವಾಗುತ್ತಿಲ್ಲ.....ತುಂಬ ವಿಷಾದಕರ."

ವೀ–ಲಿಯಾಂಗ್ ನಕ್ಕು ಬಿಟ್ಟ.

ಸೂ–ಹೆಂಗ್ ಪರಿತಾಪದ ಉಸಿರನ್ನು ಬಿಟ್ಟಳು.

"ಯಾವುದೋ ಹೆಂಗಸಿಗಾಗಿ ಇಷ್ಟು ಪರಿತಪಿಸುವುದೇಕೆ ? ಈ ಜಗತ್ತಿನಲ್ಲಿರುವ ಹೆಣ್ಣುಗಳಿಗೆಲ್ಲಾ ಬಹಳ ಮಟ್ಟಿಗೆ ಈ ಕಷ್ಟವಿದ್ದೇ ಇರುತ್ತದೆ."

"ನಿನ್ನೊಂದಿಗೆ ಹೇಳಿಕೊಳ್ಳುವುದು ಸಹ ವ್ಯರ್ಥ. ಒಳ್ಳೆಯದು

ಮಲಗು, ಗುಡ್ ನೈಟ್ !"

"ಈಗ ಗುಡ್ ನೈಟ್.....? ಆಗಲೇ ಗುಡ್ ಮಾರ್ನಿಂಗ್ ಹೇಳುವ ಹೊತ್ತು ಬಂದಿದೆ !"

ಸೂ-ಹೆಂಗ್ ಆ ಕಡೆ ಹೊರಳಿ ಮಲಗಿದಳು. ಸಣ್ಣಗೆ ಉಸಿರಾಡುವುದು ಕೇಳಿಸುತಿತ್ತು. ವೀ-ಲೀಯಾಂಗ್ ಕಣ್ಣು ಬಿಟ್ಟು ಕಿಟಕಿಯಿಂದ ಪಸರಿಸಿದ ಕದ್ದಿಂಗಳನ್ನು ನಿಟ್ಟಿಸುತ್ತ ಮಲಗಿದ. ಹತ್ತು ವರ್ಷಗಳ ದಾಂಪತ್ಯ ಜೀವನವನ್ನು ಮೆಲಕು ಹಾಕಿತು ಮನಸ್ಸು.

* * * *

ಬೆಳಕು ಮೂಡಿ ದಿನಚರಿ ಆರಂಭವಾದಾಗ ಅವಳು ಎಂದಿನಂತೆ ಕಾರ್ಯ ನಿರತಳಾದಳು. ಆದರೆ ಮುಖದಲ್ಲಿ ಹಿಂದಿನ ಪ್ರಸನ್ನತೆ ಇರಲಿಲ್ಲ. ಏನೋ ಒಂದು ಬಗೆಯಲ್ಲಿ ಯಾಂತ್ರಿಕವಾಗಿ ಸಾಗಿತು ದಿನಚರಿ. ಅವಳು ಅವಸರವಾಗಿ ಆಸ್ಪತ್ರೆಗೆ ಹೊರಟಳು. ಅವನೂ ತನ್ನ ಅಫೀಸಿನತ್ತ ತೆರಳಿದ. ಸಂಜೆಯಲ್ಲಿ ಅವನು ಮನೆಗೆ ಮರಳಿದ ವೇಳೆಗೆ ಅವಳು ಮನೆಗೆ ಬಂದಾಗಿತ್ತು. ಇಂದಂತೂ ಕಾಹಿಲೆ ಬಿದ್ದವಳಂತೆ ಕಾಣಿಸುತಿದ್ದಳು. ವೀ-ಲಿಯಾಂಗ್ ತಬ್ಬಿಬ್ಬಾಗಿ ಮಾತಿಲ್ಲದೆ ನಿಂತ. ಏನಾದರೂ ಕೇಳಬೇಕೆಂದರೂ ಶಬ್ದಗಳೇ ಹೊಳೆಯವು. ಆತನ ವಿಚಿತ್ರ ಗತಿಯನ್ನು ಗಮನಿಸಿ ಸೂ-ಹೆಂಗ್ ಹಣೆಯನ್ನು ಒತ್ತಿಕೊಳ್ಳುತ್ತ ಹೇಳಿದಳು "ಇಂದು ತುಂಬ ತಲೆ ನೋಯುತ್ತಿದೆ."

ಇನ್ನು ಅವನು ಹೆಚ್ಚು ಪ್ರಶ್ನಿಸದಿರಲೆಂಬ ಆಶಯದಿಂದ ತಲೆನೋವಿನ ಸೋಗು ಹಾಕಿದಳು. ಆದರೆ ಅದನ್ನು ವೀ-ಲಿಯಾಂಗ್ ನಂಬಲು ತಯಾರಿರಲಿಲ್ಲ.

"ನಾನೇನೂ ಕೇಳಲೇ ಇಲ್ಲವಲ್ಲಾ ?"

"ನೀನು ಕೇಳದಿದ್ದರೂ ನಾನು ಹೇಳಬೇಕಾಯಿತು," ಎಂದಳು ಮುಗುಳು ನಕ್ಕು.

"ಏನಾದರೂ ಮಾತ್ರೆ ತೆಗೆದುಕೊಂಡೆಯಾ ?"

"ಅಷ್ಟು ಮಾತ್ರವೂ ನನಗೆ ಬಿಡುವಾಗಲಿಲ್ಲ ಅಲ್ಲಿ."

ಆದರೆ ಆತನ ತಲೆಯನ್ನು ಹೊಕ್ಕ ವಿಚಾರವೇ ಬೇರೆ.

ದಿನಚರಿ ಸುದ್ದುಗದ್ದಲವಿಲ್ಲದೆ ಸ್ಮಶಾನ ಕೈಂಕರ್ಯಗಳಂತೆ ನಡೆಯು

ವಾಗ ಯಾವುದೋ ಅರಿ ಅಂತ್ಯಪರಿಯುದ ಜಡಿವು ಜೀವನವನ್ನು ಆವರಿಸಿ ಬಿಟ್ಟಿತು. ವೀ-ಲಿಯಾಂಗ್ ನಿರಾಶನಾದ.

ಮರುದಿನ ತನ್ನ ಕಾರ್ಯ್ಯಾಗಾರವನ್ನು ಬಿಟ್ಟವನೇ ಆಸ್ಪತ್ರೆಗೆ ಹೋದ. ಸೂ-ಹೆಂಗ್ ಬಾಗಿಲಲ್ಲಿ ನಿಂತು ಚಂಗ್-ಚುಂಗನೊಡನೆ ಮಾತುಕತೆ ಯಾಡುತಿದ್ದುದು ದೂರದಿಂದಲೇ ಕಾಣಿಸಿತು. ಒಡನೆ ಹೃದಯ ಡಿಂಡಿಮ ಒಡೆದು ಬಿರಿಯುತ್ತಿರುವಂತೆ ಭಾಸವಾಯಿತು. ಅವನೇಕೆ ಇಲ್ಲಿದ್ದಾನೆಂಬ ವಿಸ್ಮಯಕರ ಪ್ರಶ್ನೆ ಮನವನ್ನು ಆವರಿಸುವುದರೊಂದಿಗೆ ಸಂಶಯಭೂತ ಉದ್ದಂಡವಾಗಿ ಬೆಳೆಯಿತು—ಹೃದಯದ ನೆಲೆಯಲ್ಲಿ ಸ್ಥಳವೇ ಸಾಲದಂತೆ. ಅಲ್ಲೇ ಸ್ವಲ್ಪ ಹೊತ್ತು ಅಡ್ಡಾಡುವ ಸೋಗುಹಾಕಿ ಮನೆಯ ಹಾದಿ ಹಿಡಿದ.

ಇನ್ನೆರಡು ದಿನಗಳು ಸಂದುವು. ದಿನಚರಿ ಶೀತಲ ಶಾಂತಿಯಲ್ಲಿ ಕಳೆಯಿತು. ಆಸ್ಪತ್ರೆಯ ವಲಯದಲ್ಲಿ ದಿನವೂ ಆತನ ದರ್ಶನವಾಗುತಿತ್ತು. ಆದರೂ, ಮಾತಾಡಿಸಲಾಗಲೀ ಕಣ್ಣೆತ್ತಿ ನೋಡುವ ಧೈರ್ಯವಾಗಲೀ ಉಂಟಾಗಲಿಲ್ಲ.

ಇಂದು ವೀ-ಲಿಯಾಂಗ್ ಮನೆಗೆ ಬಂದಾಗ ಅವಳಿನ್ನೂ ಮನೆಗೆ ಬಂದಿರ ಲಿಲ್ಲ. ಕೆಸರಿನಲ್ಲಿ ಸಿಲುಕಿದ ನೊಣದಂತೆ ಒದ್ದಾಡಿತು ಮನಸ್ಸು. ನೇರವಾಗಿ ಆಸ್ಪತ್ರೆಯ ಹಾದಿ ಹಿಡಿದ. ಆಗ ಮಬ್ಬುಗತ್ತಲುಗವಿಯುತ್ತಿತ್ತು. ಅವಳು ಆಗಷ್ಟೆ ಆಸ್ಪತ್ರೆಯಿಂದ ಹೊರ ಬರುತಿದ್ದಳು. ಜೊತೆಯಲ್ಲಿ ಚಂಗ್-ಚುಂಗ ಇದ್ದ. ಆಸ್ಪತ್ರೆಯ ವಲಯದಂಚಿನವರೆವಿಗೂ ಜೊತೆಗೂಡಿ ಬಂದರು. ಅಲ್ಲಿಯ ಹಣ್ಣಿನಂಗಡಿಯಲ್ಲಿ ಇಬ್ಬರೂ ಹಣ್ಣುಗಳನ್ನು ಕೊಂಡುಕೊಂಡರು. ಅನಂತರ....ಇಬ್ಬರೂ ಪರಸ್ಪರ ಕೈಕುಲುಕಿದರು.

"ಏನೂ ಯೋಚಿಸಬೇಡಿ; ಇನ್ನು ಒಳ್ಳೆಯದಾಗುತ್ತೆ." ಎಂದಳು ಅವಳು.

ಅವನು ಆಸ್ಪತ್ರೆಯ ಕಡೆ ಹೊರಟ.

ಸೂ-ಹೆಂಗ್ ಮನೆಯ ಹಾದಿ ಹಿಡಿದಳು.

ಹತ್ತು ಹೆಜ್ಜೆ ಹಾಕುವುದರೊಳಗಾಗಿ ವೀ-ಲಿಯಾಂಗ್ ಕೂಡಿಕೊಂಡ.

"ಇದೇಕೆ ಇಷ್ಟು ಹೊತ್ತು ?"

"ಒಂದು ಕೇಸಿನ ಸ್ಥಿತಿ ಹದಗೆಟ್ಟಿತ್ತು."

"ನಿನ್ನ ಆರೋಗ್ಯವಂತೂ ಈಚೆಗೆ ಚೆನ್ನಾಗಿಲ್ಲ. ಕೆಲವು ದಿನ ರಜೆ

ತೆಗೆದುಕೊಂಡಿದ್ದರೆ ಒಳ್ಳೆಯದಿತ್ತು."

"ಈಗಿನ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲ."

"ಏಕೆ?"

"ಮುಖ್ಯವಾಗಿ ನನಗೇನೂ ಆಗಿಲ್ಲ: ಎರಡನೆಯದಾಗಿ ನನ್ನನ್ನು ನಂಬಿದ ಗರ್ಭಿಣಿ ಸ್ತ್ರೀಯರಿದ್ದಾರೆ. ಅವರು ನಿರಾಸೆಗೊಳ್ಳಬಾರದು."

"ಇದು ಯಾವಾಗಲೂ ಇದ್ದದ್ದೆ."

"........"

"ನೀನು ದಾದಿಯಾಗಿ ತೋರುವ ಸಹಜ ಸೌಜನ್ಯತೆ ನೋಡುವವರಿಗೆ ಇನ್ನೇನೋ ಒಂದು ಬಗೆಯ ಜುಗುಪ್ಸೆ ಹುಟ್ಟಿಸಬಹುದು."

"ಅಂದರೆ....?"

"ನಿನ್ನ ಭಾವನೆ ಏನೇ ಇರಲಿ, ವೀಕ್ಷಕರಿಗೆ ಅದು ವಿಪರೀತಾರ್ಥವನ್ನು ಕಲ್ಪಿಸುತ್ತದೆ."

"ಅಂದರೆ ಅದು ನಿನಗಷ್ಟೆ.....? ದೃಷ್ಟಿಯಂತೆ ಸೃಷ್ಟಿ-"

"ಅಲ್ಲ, ಅಲ್ಲ."

"ನನಗೆಲ್ಲಾ ಗೊತ್ತು ಸುಮ್ಮನಿರು."

* * * *

ಮನೆಯಲ್ಲಿ ಎಳ್ಳುಬೀರಿದರೂ ಕೇಳಿಸುವಂತಹ ನಿಶ್ಯಬ್ದ.

ಗೃಹಿಣಿ ಕೆಲಸ ಕಾರ್ಯಗಳಲ್ಲಿ ನಿಮಗ್ನಳಾದಳು.

ವೀ-ಲಿಯಾಂಗ್ ಒಂದು ಘಳಿಗೆ ನಿಂತು ನೋಡಿ, ಸಭ್ಯತೆಯನ್ನು ಮೀರ ಬಾರದೆಂದೆಣಿಸಿ ಮಡದಿಗೆ ಸಹಾಯಕನಾಗಲು ಮುಂದಾದ. ಆದರೂ ಮನಸ್ಸು ಕತ್ತಿಯಲುಗಿನ ಮೇಲೆ ಹರಿದಾಡುತಿತ್ತು. ಹತ್ತು ವರ್ಷಗಳನಂತರ ಆತನ ಪುನರ್ ಪ್ರವೇಶ ಅಸಹನೀಯವಾಗುತ್ತಿದೆ. ಒಂದೇ ಏಟಿಗೆ ಆತನನ್ನು ಮುಗಿಸಿಬಿಡಬಹುದಾಗಿತ್ತು ಎಂಬ ಯೋಚನೆ ಆಗಾಗ ತಲೆಯೆತ್ತುತ್ತದೆ. ಅದೇ ನೇರಕ್ಕೆ ಸಭ್ಯತೆಯನ್ನು ಮೀರಬೇಡ ಎಂಬ ಉದ್ದಂಡ ವಿವೇಚನೆ ಬೇರೆ. ಕಷ್ಟ–ಕಾರ್ಪಣ್ಯಗಳಲ್ಲಿ ತೊಳಲುತಿತ್ತು ಮನಸ್ಸು.

ಹೊತ್ತು ಹೇಗೆ ಉರುಳುತಿತ್ತೆಂಬುದರ ಅರಿವೇ ಇರಲಿಲ್ಲ. ಅಡುಗೆ ಊಟ ಗಳ ಸಮಯದಲ್ಲೂ ಬಹಳ ಮಟ್ಟಿಗೆ ಮೌನಧಾರಣೆಯೇ ನಡೆದುದರಿಂದ

ಮನಸ್ಸಿಗೆ ಎಲ್ಲಿಲ್ಲದ ಬೇಸರ.....ಕಳವಳ.....ಆತಂಕ....ರಾತ್ರಿ ಬಹಳ ಹೊತ್ತಾಗಿದ್ದರೂ ಮಲಗದೆ ಗವುಸವನ್ನು ಹೆಡೆಮುಡಿಗಟ್ಟಲು ಪುಸ್ತಕ ಪಠಣವನ್ನು ಕೈಕೊಂಡಿದ್ದ. ಅನಂತರ ಪವಡಿಸಲು ಬಂದ ಸೂ-ಹೆಂಗ್ ಶಯ್ಯಾಪ್ರಾಂತ್ಯದಲ್ಲಿ ಮಲಗಿ ನೋಟವನ್ನು ಮಾಡಿನ ನೇರಕ್ಕೆ ಹರಿಸಿದ್ದಳು. ಮನಸ್ಸು ಯೋಚನಾಂಬುಧಿಯಲ್ಲಿ ಪೂರ್ಣ ಮುಳುಗಿತ್ತು. ನೋಡಿ ತುಸು ಅಚ್ಚರಿಯಿಂದ ಕೇಳಿದ.

"ನಿದ್ದೆ ಬರಲಿಲ್ಲವೇ ?"

"ಇಲ್ಲ...."

"ಅದೇಕೆ."

"ನಿನಗಾಗಿ ಕಾದಿದ್ದೆ."

ಅವಳು ಹಾಗೆಂದರೂ ಆತನ ಚಿಂತನೆಯೇ ಬೇರೆ. ಹಾಸಿಗೆಯ ಮೇಲೆ ಕುಳಿತು ಕಾಲದೆಶೆಯಲ್ಲಿದ್ದ ಹೊದ್ದಿಕೆಯನ್ನು ಎಳೆದುಕೊಂಡ. ಹೊತ್ತು ಹನ್ನೆರಡರ ಅಂಚನ್ನು ಆಗಲೇ ದಾಟಿ ಮುಂದೆ ಹೋಗಿದೆ. ಕಿಟಕಿಯಲ್ಲಿ ನಕ್ಷತ್ರಗಳು ಮೈದೋರಿದ್ದುವು. ಮನದಲ್ಲಿ ನೂರು ಭಾವನೆಗಳಿದ್ದರೂ ತುಟಿಗಳು ಬಿರಿಯವು. ಹೃದಯದೇಗುಲದಲ್ಲಿ ಮೊಳೆತ ಕಸಿವಿಸಿ ಸುಪ್ತವಾಗಿದೆ. ವೀ-ಲಿಯಾಂಗ್ ತಳಮಳಿಸಿದ. ಆಕೆ ನಿದ್ದೆಯ ಸೋಗು ಹಾಕಿದಳು. ಹೊತ್ತು ಉರುಳಿ ಬೆಳಗಿನ ಶೀತಲ ಗಾಳಿ ಬೀಸಿದರೂ ನಿದ್ದೆಯ ಸುಳಿವಿಲ್ಲ. ಆತನ ರೀತಿಯನ್ನು ಗಮನಿಸಿದ ಸೂ-ಹೆಂಗ್ ಆತಂಕದಿಂದ ಕೇಳಿದಳು.

"ನಿನಗೆ ನಿದ್ದೆ ಬರಲಿಲ್ಲವೇ ?"

"ನನ್ನ ಎದೆಗೆ ಕಿಚ್ಚು ಹಚ್ಚಿದ್ದಿ. ಹೇಗೆ ನಿದ್ದೆ ಬಂದೀತು ?"

"ಅಂದರೆ....? ನನ್ನಿಂದಾದ ತೊಂದರೆಯಾದರೂ ಏನು ?"

"ನೀನು ಚಾಂಗ್-ಚುಂಗನೊಡನೆ ಓಡಾಡಿಕೊಂಡಿರುವುದನ್ನು ಮೂರು ದಿನಗಳಿಂದ ಗಮನಿಸುತ್ತಿದ್ದೇನೆ."

"ಮೂರು ದಿನಗಳಿಂದ ಮಾತ್ರವೇನು? ಮೂರು ತಿಂಗಳುಗಳಿಂದ ಆತ ಮಡದಿಯೊಡನೆ ಬರುತಿದ್ದಾನೆ. ಅಂದಿನಿಂದಲೂ ಮಾತುಕತೆಯಾಡುತ್ತಿರುವೆ. ಆತನ ಸತಿಯನ್ನೇ ತುಂಬ ಕಷ್ಟದಲ್ಲಿದ್ದಾಳೆಂದು ನಾನು ಹೇಳಿದ್ದು. ಅವಳಿಗಾಗಿ ನಾನು ಕೆಲವು ಔಷಧಿಗಳನ್ನು ಕೊಂಡುಕೊಟ್ಟೆ. ಈಗಲೂ

ಆಕೆಯ ಸ್ಥಿತಿ ತೃಪ್ತಿಕರವಾಗಿಲ್ಲ. ಏನಾಗುತ್ತೆ ಎಂಬುದನ್ನು ಹೇಳುವುದು ಕಷ್ಟ. ದುಃಖದಲ್ಲಿರುವ ಆತನಿಗೆ ಒಂದೆರಡು ಸಮಾಧಾನದ ಮಾತುಗಳನ್ನು ಹೇಳಿದುದು ತಪ್ಪೆ ?"

"ಆದರೂ, ಸಹ ಹೆಚ್ಚಿನ ಸಂಬಂಧ ಸರಿಯಲ್ಲ."

"ಹೆಚ್ಚಿನದೇನೂ ಇಲ್ಲ. ತನು ನೊಂದ ಆತನಿಗೆ ಒಂದೆರಡು ಸಾಂತ್ವನದ ನುಡಿಗಳು....ಮಾನವರು ಅಂದಮೇಲೆ ಅಷ್ಟೂ ಇರಬೇಡವೆ ?"

ಆತ ಇನ್ನೇನೂ ಹೇಳಲಿಲ್ಲ. ಆ ಪ್ರಸಂಗ ಅಲ್ಲಿಗೆ ಮುಕ್ತಾಯವಾಯಿತು. ಕ್ಷಣ ಕ್ಷಣವೂ ಸಭ್ಯತೆಯನ್ನು ಸಾರಿ ಹೇಳುತಿತ್ತು ಮನಸ್ಸು. ಆದರೂ ಎದೆಯ ನೆಲೆಯಲ್ಲಿ ಚುಚ್ಚಿದ ಆ ಮುಳ್ಳು ಇನ್ನೂ ಇನ್ನೂ ಒತ್ತುತ್ತಲೇ ಇದೆ. ಸಿರ್ಘೂಮ ಅಗ್ನಿಜ್ವಾಲೆ ದೇಹದಾದ್ಯಂತ ಒಂದೇಸಮನೆ ಸುಡುವಂತೆ ಹರಿದಾಡುತ್ತದೆ.

* * * *

ನೀಲವಸನೆ ಗಗನಪದ್ಮೆ ಧೂಮಮಾಲೆಯ ತೆರೆಯಲ್ಲಿ ಅಡಗಿಹಳೇಕೆ ?

ಅವಾಂಛನೀಯ ಶೋಕ ವ್ಯಾಕುಲ ವೇದನೆ ಹೃದಯದೇಗುಲದಲ್ಲಿ ಹುದುಗಿ ತನುಮನಗಳನ್ನು ಬಾಧಿಸುತ್ತಿದೆ ಏಕೆ ?

ನಿರಂತರ ಪರಿವರ್ತಮಾನ ಪ್ರಕೃತಿ ಹರಸಬಲ್ಲಳೇ ? ಈ ದುಃಖಿತ ಜೀವನವನ್ನು ಉದ್ಧರಿಸಬಲ್ಲಳೇ ?

ಹಾ ....! ಈ ಮಾಯಾ ಜಗತ್ತಿನಲ್ಲಿ ಯಾರಿಗೆ ಯಾರು ?

ದಿನಚರಿ ಎಂದಿನಂತೆ ಸಾಗಿದರೂ ಮನಸ್ಸು ಅಗಾಧವಾದ ಚಿಂತೆಗೊಳಗಾಗಿದೆ. ಹೇಗೆ ಮಾಡಿದರೂ ಎಷ್ಟೇ ತಡೆ ಹಿಡಿದರೂ ಒಮ್ಮೊಮ್ಮೆ ಅದೇ ಆ ದುಃಖ ತನಗರಿಯದಂತೆಯೇ ತಡೆಗಟ್ಟೆಯನ್ನು ಹರಿಹಾಯ್ದು ಮುನ್ನುಗ್ಗಿ ಮುಖಬಿಂಬ ಕೆಂಪು ತಳೆಯುವುದು. ಆಗ ತನಗೆ ತಾನೇ ಅಂಕುಶವಾದರೂ ದುರ್ಬಲತೆ ತನಗೇನೇ ಅಚ್ಚರಿ ಮೂಡಿಸುವಂತೆ ಮೈ ದೋರುತ್ತದೆ.

ಮನೆಗೆಲಸ ಮುಗಿಸಿ ಆಸ್ಪತ್ರೆಗೆ ಆಗಮಿಸಿದ ಸೂ–ಹೆಂಗಳಿಗೆ ಮೊದಲು ದೃಗ್ಗೋಚರಿಸಿದ ಚಿತ್ರ–ಅಂಗಳದಲ್ಲಿ ಮಣ್ಣಾಡುವ ಆ ಮುದ್ದು ಮಕ್ಕಳು. ತುಟಿಗಳಲ್ಲಿ ನಲಿಯುವ ಅಮಾಯಕ ನಗು. ಚಿಂಗೆನ್ನೆಗಳಲ್ಲಿ ಹೊಮ್ಮಿದ ಚಂದನರಾಗದ ರಂಗು. ಗಾಳಿಗೆ ಅಲೆದಾಡುವ ಮುಂಗುರುಳು. ಕಣ್ಣುಗಳಲ್ಲಿ

ಮಿಂಚುವ ಕಾಂತಿ. ಮುಖಮಂಡಲದಲ್ಲಿ ಹೊಳೆಯುವ ಮಾಂಗಲ್ಯಕ್ಕೆ ಆ ಸಪ್ತ(ದಿತ ಚಿರಂಜೀವ ಸತ್ಯದ ಸೌದಾಮಿನಿಯೇ ಉಪಮಾನವಾಗಬಲ್ಲದು.

ಒಂದು ನಿಮಿಷ ನಿಂತು ನೋಡಿದಳು ಸೂ–ಹೆಂಗ್.

ಆಡುವ ಮಕ್ಕಳು ಮಣ್ಣಿನ ಕೈಯಲ್ಲೇ ಓಡಿ ಬಂದವು ಬಳಿಗೆ. ಮೂವರಿಗೂ ಕೆನ್ನೆಯಮೇಲೆ ಹೂಮುತ್ತನೊತ್ತಿ ಮುದ್ದುಗೈದು ಒಳಹೋದಳು. ಚಂಗ್–ಚುಂಗ್ ಮಡದಿಯ ಬಳಿ ಕುಳಿತಿದ್ದ. ಆಕೆಯ ಮ್ಲಾನವದನ ಮೇಘಾಚ್ಛಾದಿತ ಚಂದ್ರಮನಂತಿದೆ. ಸೂ–ಹೆಂಗ್ ಬಳಿಗೆ ಬರುತ್ತಲೂ ಅವಳೆಂದಳು "ಬೆಳಗಿನಿಂದ ಹೊಟ್ಟೆನೋವು."

ಅವಳನ್ನು ಪರೀಕ್ಷಿಸಿ ಲೇಬರ್ ವಾರ್ಡಿಗೆ ಬರಮಾಡಿಕೊಂಡಳು ಸೂ–ಹೆಂಗ್. ದಿನವೂ ಹತ್ತಿಪ್ಪತ್ತು ಶಿಶುಗಳನ್ನು ಈ ಜಗತ್ತಿಗೆ ಬರಮಾಡಿಕೊಳ್ಳುವ ಅವಳಿಗೆ ಇಂದಿನದೇನೂ ಹೆಚ್ಚೆನಿಸಲಿಲ್ಲ. ತಾಯಿ ಮಕ್ಕಳು ಸುಖವಾಗಿ ಬೇರ್ಪಡೆಯಾದರೂ ಆಕೆ ಸುಸ್ತಾಗಿದ್ದಳು. ಅವಳನ್ನು ವಾರ್ಡಿಗೆ ಕರೆತಂದು ಮುಂದಿನ ಚಿಕಿತ್ಸೆ ಕೈಕೊಂಡರು ಡಾಕ್ಟರು.

ಇತರ ವಾರ್ಡುಗಳ ಕೆಲಸ ಮುಗಿಸಿ ಬಂದಾಗ ಬಾಗಿಲ ಬಳಿ ನಿಂತಿದ್ದ ಚಂಗ್–ಚುಂಗನ ಕಣ್ಣುಗಳಲ್ಲಿ ನೀರಾಡುತಿತ್ತು. ದೈನ್ಯವೇ ಮೂರ್ತಿಯೆತ್ತಿ ಬಂದಂತೆ ದೀನಾದೀನನಾಗಿ ಸಪ್ಪೆಮೋರೆಯಿಂದ ನಿಟ್ಟಿಸಿದ. ದುರ್ವಿಧಿಯ ಖಡ್ಗ ಹತಿಯನ್ನು ತಾಳಲಾಗದೆ ಜೀವ ತತ್ತರಿಸಿತ್ತು. ಸೂ–ಹೆಂಗಳನ್ನು ನೋಡುತ್ತಲೂ ಕಣಂಚಿನಲ್ಲಿ ಮಿಸುಗುತಿದ್ದ ಹನಿ ಧಾರಾಕಾರವಾಗಿ ಕೆನ್ನೆಯ ಮೇಲಿಳಿಯಿತು. ಕಂಬನಿಯನ್ನು ತೀಡಿಕೊಂಡು ಅವಳ ಹಿಂದೆಯೇ ಒಳಬಂದ. ಮಂಚದಮೇಲೆ ಮಲಗಿದ ಹೆಣ್ಣು ತಡೆತಡೆದು ಉಸಿರಾಡುತಿತ್ತು. ಸೂ–ಹೆಂಗ್ ನಾಡಿ ಹಿಡಿದು ನೋಡಿದಳು. ಸ್ಥಿತಿಗತಿ ಏರು ಪೇರಾಗಿದೆ. ರಕ್ತ ಸಂಯೋಜನೆ ನಡೆಯುತಿತ್ತು. ಔಷಧಿ ಇಂಜಕ್ಷನ್ ಮಾತ್ರೆಗಳ ಪರಂಪರೆ ಮೇಜಿನಮೇಲಿದೆ.

ಆದರೆ.....

* * * *

ಜೀವನ ಸಂಧ್ಯೆಯಲ್ಲಿ ಜೀವಚ್ಛವದಂತೆ ಮಲಗಿದೆ–ಹೆಣ್ಣು.
ಮುಗ್ಧದುಗ್ಧ ಶಿಶು ತೊಟ್ಟಿಲಲ್ಲಿ ನಿದ್ದೆಗೈದಿದೆ–ಮೋಹದ ಮುದ್ದೆಯಂತೆ.

ನೋಟ ಚಾರ್ಟಿನ ಕಡೆ ಹೊರಳಿತು. ಅದರ ರೀತಿ ನೀತಿಯನ್ನು ಗಮನಿಸಿದರೆ ಇನ್ನೊಂದೆರಡು ದಿನಗಳ ಗಡುವನ್ನು ದಾಟಿದರೂ ದಾಟಬಹುದು. ಇಲ್ಲವೇ ಇಂದೇ ಅಂಕ ಮುಗಿದರೂ ಮುಗಿಯಬಹುದು. ಎದೆಯಾಳದಲ್ಲಿ ಯಾವುದೋ ಭಯಂಕರ ಕೀಟ ಕೊರೆಯುತ್ತಿರುವಂತೆ ಭಾಸವಾಯಿತು. ಸ್ಥಿತಿಗತಿಯನ್ನು ನೋಡಲಾಗದೆ ಹೊರಬಂದಳು. ಕಣ್ಣುಗಳಂಚಿನಲ್ಲಿ ಕಂಬನಿ ಫಳಕ್ಕನೆ ಮೂಡಿತು. ಚಂಗ್–ಚುಂಗ್ ಹಿಂದೆಯೇ ಹೊರಬಂದು ಬಿಕ್ಕಿಬಿಕ್ಕಿ ಅಳತೊಡಗಿದ.

ಒಂದು ಘಳಿಗೆ ಮೌನವಾಗಿ ನಿಂತಿದ್ದು, ಶೋಕ ವ್ಯಾಕುಲತೆಯಿಂದ "ದೇವರು ನಿನಗೆ ಧೈರ್ಯ ನೀಡಲಿ." ಎಂದಷ್ಟು ನುಡಿದು ಮೆಟ್ಟಿಲಿಳಿಯುತ್ತಿದ್ದಂತೆ, ವಲಯದಾಚೆ ದೂರದ ಬೇಲಿಯ ಬಳಿ ವೀ–ಲಿಯಾಂಗ್ ನಿಂತಿದ್ದುದು ಕಾಣಿಸಿತು. ಅತ್ತಲೇ ಹೆಜ್ಜೆ ಹಾಕಿದಳು. ಅವನು ಮಡದಿಯ ಸಮೀಪಕ್ಕೈದುವುದನ್ನು ಪ್ರತೀಕ್ಷಿಸುತ್ತ ಅಲ್ಲೆ ನಿಂತ. ಅವಳು ಸಮೀಪಿಸುತ್ತಲೂ ಇಬ್ಬರೂ ಕೂಡಿ ಮುಂದೆ ನಡೆದರು. ವೀ–ಲಿಯಾಂಗ್ ಮಡದಿಯ ಮುಖದ ಮ್ಲಾನತೆಯನ್ನೂ ಚಂಗ್–ಚುಂಗನ ದೀನಸ್ಥಿತಿಯನ್ನೂ ಗಮನಿಸಿ ಕೇಳಿದ,

"ಹೇಗಿದ್ದಾಳೆ ಆಕೆ ? ಗುಣವಾಗಬಹುದೇ ?"

"ಬಹಳ ಕಷ್ಟ."

ಒಂದು ಘಳಿಗೆ ಯೋಚಿಸಿ ನೂರು ಯಾನ್‌ಗಳ ನೋಟೊಂದನ್ನು ಅವಳ ಕ್ಕೈಗಿಟ್ಟು ಹೇಳಿದ "ಅವಳಿಗೆ ಇದರಿಂದ ಏನೆಲ್ಲಾ ಬೇಕೋ ಅದನ್ನು ಕೊಂಡುಕೊಡು."

ಸೂ–ಹೆಂಗ್ ಅವನನ್ನೆ ಒಂದು ಕ್ಷಣ ನಿಟ್ಟಿಸಿ ನೋಡಿ ಅತ್ಯಂತ ಅಸಮಾಧಾನದಿಂದ ನುಡಿದಳು.

"ಅಂದೇ ನೀನು ಮನಸ್ಸು ಮಾಡಿದ್ದರೆ ಏನಾದರೂ ಮಾಡಬಹುದಾಗಿತ್ತು. ಇಂದಿನ ಪರಿಸ್ಥಿತಿಯಲ್ಲಿ ಮಾಡುವುದೇನಿದೆ ?"

ವೀ–ಲಿಯಾಂಗ್ ಹತಾಶನಾದವನಂತೆ ಸುಮ್ಮನಾದ. ಆಕೆ ಗತಿಸಿದರೆ ತನ್ನವಳು ಆತನೆಡೆಗೆ ವಾಲಿಯಾಳೇನೋ ಎಂಬ ಭಯ ಮನವನ್ನು ಆವರಿಸಿತು. ಮೊದಲೇ ಹಣ ನೀಡಿದ್ದರೆ ಒಳ್ಳೆಯದಿತ್ತು. ನಾನು ತಪ್ಪು ಮಾಡಿ

ಬಿಟ್ಟೆ ಎಂದು ಮನದಲ್ಲಿಯೇ ಚಿಂತಿಸಿದ. ಸ್ವಲ್ಪ ದೂರ ಮಾತಿಲ್ಲದೆ ಸಾಗಿತು ಹಾದಿ. ಅನಂತರ ನಿಡಿದಾದ ನಿಟ್ಟುಸಿರು ಬಿಟ್ಟು ಅವಳೆಂದಳು.

"ನಾಲ್ಕು ಮಕ್ಕಳು ತಬ್ಬಲಿಯಾಗುತ್ತವೆ ನನಗೆ ಅದೇ ದುಃಖ."

ಆ ಆಡುವ ಅರಗಿಣಿಗಳಿಗೆ ಇರಬಹುದಾದ ತಾಯಿಯ ಅವಶ್ಯಕತೆ ಚಿತ್ತಭಿತ್ತಿಯಲ್ಲಿ ಚಲನ ಚಿತ್ರದಂತೆ ಸುಳಿದಳಿಯಿತು. ತೊಟ್ಟಿಲ ಶಿಸುವಿನ ಸ್ಥಿತಿಗತಿಯನ್ನೂ ಭವಿಷ್ಯತ್ತಿನ ಕಷ್ಟಪರಂಪರೆಯನ್ನೂ ಕುರಿತು ಚಿಂತಿಸಿದಳು ಆಕೆ. ಕಣ್ಣು ಮೂಗು ಮುಖಗಳು ಚಂದನವೊರೆದಂತೆ ರಂಗು ತಳೆದುವು.

"ಏನಾದರಾಗಲಿ, ಅದನ್ನು ನೀನೇಕೆ ಮನಸ್ಸಿಗೆ ಹಚ್ಚಿಕೊಳ್ಳಬೇಕು?"

ವೀ-ಲಿಯಾಂಗನ ಧ್ವನಿ ಭಾವನಾಲೋಕದಲ್ಲಿ ಮುಳುಗಿದ್ದ ಅವಳನ್ನು ವಾಸ್ತವ ಜಗತ್ತಿಗೆ ಎಳೆ ತಂದಿತು. ತುಟಿಗಳನ್ನು ಕಚ್ಚಿ ದುಃಖವನ್ನು ನುಂಗಿ ಅವಳೆಂದಳು "ಕಣ್ಣಿನಿಂದ ನೋಡಿದ್ದರಿಂದ ಸಂಕಟ ಅಷ್ಟೆ."

"ನೀನು ಕೆಲವು ದಿನ ರಜೆ ತೆಗೆದುಕೊಂಡು ಬಿಡು."

ಆಕೆಯ ಗಂಭೀರ ಮೌನ ವ್ಯಯಲ್ಲಿ ನವಿರೇಳಿಸಿತು. ದೇಹದಾದ್ಯಂತ ವಿದ್ಯುಲ್ಲಹರಿ ಹರಿದಾಡಿ ಹೋದಂತೆ ಉದ್ಭಾಸಿತವಾಯಿತು. ವೀ-ಲಿಯಾಂಗ್ ಚಿಂತಿತನಾದ. ಕಾಲುಗಳು ಸೋತು ಹೋದಂತೆ ನಡೆಯಲಾರದೆ ನಡೆದುವು.

ಪರಸ್ಪರ ವ್ಯತಿರಿಕ್ತ ಭಾವನೆಗಳಲ್ಲಿ ಅಶುಭ ಕಲ್ಪನೆ ನಡೆಯುತಿತ್ತು.

ಅವಳು ಮನೆ ಮುಟ್ಟಿದ ನಂತರ ದಿನಚರಿಯಲ್ಲಿ ತೊಡಗಿದರೂ ಎಲ್ಲವೂ ಯಾಂತ್ರಿಕವಾಗಿ ನಡೆಯುತಿತ್ತು. ಅಮಾಯಕ ಶಿಶುಗಳ ಮನಮೋಹಕ ಚಿತ್ರ ಚಿದಾಕಾಶವನ್ನು ಕಾರ್ಮೋಡಗಳಿಂದ ತುಂಬಿ, ಒಡಲಿಗೆ ಸಂಕಟವನ್ನು ಊಡಿಸುತ್ತದೆ. ಎಷ್ಟೇ ಪ್ರಯತ್ನಿಸಿದರೂ ಆ ದುಃಖಭರಿತ ಜೀವನದಿಂದ ಮನವನ್ನು ಸೆಳೆದುಕೊಳ್ಳಲಾಗಲಿಲ್ಲ. ಮುಗ್ಧ ಶಿಸುಗಳ ಉದ್ಧಾರ ಕುರಿತು ಎಷ್ಟು ಯೋಚಿಸಿದರೂ ಹೊಳೆಯದಾದಾಗ ಕಣ್ಣುಗಳು ತಟತಟನೆ ಹನಿಯುತಿದ್ದುವು.

* * * *

ಓ....! ಕಾಲ ಪುರುಷ ! ನಿನ್ನ ಲೀಲೆ ಅಪರಂಪಾರ !

ಇರುಳು ಉರುಳಿತು. ಮುಂಬೆಳಕು ಮೂಡಿತು.

ಉದಯ ಗಾನವನ್ನು ಆರಂಭಿಸಿದುವು ಪಕ್ಷಿಗಳು.

ಎಂದಿನಂತೆಯೇ ದಿನಚರಿ ಇಂದೂ ಆರಂಭವಾಯಿತು. ಮನೆಯಲ್ಲಿ ಅನುದಿನದ ಕೆಲಸ ಕಾರ್ಯಗಳನ್ನು ಲಗುಬಗನೆ ಮುಗಿಸಿ ಆಸ್ಪತ್ರೆಗೆ ಹೋದಳು ಸೂ–ಹೆಂಗ್. ಅಲ್ಲಿ ಮೊದಲು ತಿಳಿದು ಬಂದ ಸುದ್ದಿಯೆಂದರೆ ಚಂಗ್–ಚುಂಗ್ ವಿಧುರನಾಗಿ ಮೊದಲ ಮೂರು ಮಕ್ಕಳೊಡನೆ ಅಲ್ಲಿಂದ ಹೊರಟು ಹೋಗಿದ್ದ. ಎಳೆ ಮಗುವನ್ನು ಆಸ್ಪತ್ರೆಗೆ ಬಿಡಲಾಗಿತ್ತು. ವಾರ್ಡಿಗೆ ಹೋಗಿ ಮಗುವನ್ನು ಎದೆಗಪ್ಪಿಕೊಂಡು ಕಂಬನಿ ಮಿಡಿದಳು. ಚಂಗ್-ಚುಂಗ್ ಅವಳಿಗಾಗಿ ಚೀಟಿಯೊಂದನ್ನು ಅಲ್ಲಿ ಇಟ್ಟು ಹೋಗಿದ್ದ. ಅದರಲ್ಲಿದ್ದುದು ಒಂದೇ ಪಂಕ್ತಿ.

"ಸೂ–ಹೆಂಗ್ ಮಗುವನ್ನು ಸಾಕಿಕೊಳ್ಳಲು ಇಷ್ಟ ಪಡುವುದಾದಲ್ಲಿ ನನಗೆ ಬಹಳ ಸಂತೋಷವಿದೆ."

ಕಾಗದವನ್ನು ಓದುತಿದ್ದಂತೆಯೇ ವೀ–ಲಿಯಾಂಗ್ ಒಳ ಬಂದ.

"ಆಕೆ ಹೋದುದು ನನಗೀಗಷ್ಟೆ ತಿಳಿಯಿತು. ನೀನದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತೀಯೆಂದು ಬಂದೆ."

ಕಾಗದವನ್ನು ನೋಡಿ ಮಗುವನ್ನು ಮುದ್ದಿಟ್ಟು ವೀ–ಲಿಯಾಂಗ್ ನುಡಿದ,

"ಮಗುವಾದುದು ಆಕೆಗಲ್ಲ ; ನಿನಗೆ. ಇನ್ನು ದುಃಖಿಸಬೇಡ."

ಸೂ–ಹೆಂಗಳ ಮುಖ ಮಳೆ ಬಿಸಿಲಾಯಿತು.

— o —

# ಬಾಬಿ

ಥಿಗ್. ಥಿಗ್. ಥಿಗ್. ಥಿಗ್.

ಲರಕ್. ಲರಕ್. ಲರಕ್. ಲರಕ್.

ಹೆಜ್ಜೆಯ ಗಡುಸನ್ನು ಕೇಳಿ ಸ್ವಲ್ಪ ಮೆಲ್ಲನೆ ನಡೆಯಲು ಪ್ರಯತ್ನ ಪಟ್ಟ ಹೆನ್ರಿ. ಪೋಲಿಸ್ ಖಾತೆಗೆ ಸೇರಿದ ಮೇಲೆ ಅವು ಹಾಗೆಯೆ. ಸ್ವಲ್ಪ ಗಮನ ತಪ್ಪಿದರೆ ಸಾಕು. ಹೆಚ್ಚು ಸದ್ದು ಮಾಡುತ್ತವೆ. ಅಂತಲೇ ಪ್ರಯತ್ನ ಪೂರ್ವಕವಾಗಿ ಮೆಲ್ಲಗೆ ಹೆಜ್ಜೆ ಹಾಕಿದ. ಮಂಜಿನ ತೆಳುವಾದ ತೆರೆಯಲ್ಲಿ ದೀಪದ ಕಾಂತಿ ಮುಸುಕಾಗಿದೆ. ಕುಳಿರ್ಗಾಳಿ ಚಾವಟಿ ಏಟಿನಂತೆ ರೊಯ್ಯನೆ ಬೀಸಿತು.ಒಡನೆ ತಾನು ಬೀಸುವ ಚಾವಟಿ ಚಿತ್ರಭಿತ್ತಿಯಲ್ಲಿ ಸುಳಿದಳಿದು ತುಟಿ ಗಳಲ್ಲಿ ಶುಷ್ಕ ನಗೆ ಮಿನುಗಿ ಮಾಯವಾಯಿತು. ಹೆನ್ರಿ ದಿಟ್ಟತನದಿಂದ ಮುಂದಡಿಯಿಟ್ಟ.....ಥಿಗ್.....ಥಿಗ್.....ಥಿಗ್.....ಥಿಗ್.

ಅಹಹ ! ವಿಪರೀತ ಚಳಿ....ಲಂಡನ್ ನಗರಿಯ ಚಳಿ.....

ಉಣ್ಣೆಯ ಬಟ್ಟೆಯನ್ನು ಕೊರೆದು ತೂರಿ ಮೈಗೆ ತಾಗುತ್ತದೆ–ಹಿಮ ಗಾಳಿ. ಕಲ್ಲುಹುಡಿಗಳನ್ನು ಬೀಸಿ ಒಗೆದಂತೆ ರಪ್ಪನೆ ಬಡಿಯುತ್ತವೆ ಬರ್ಫದ ತುಣುಕುಗಳು. ಮಂಜಿನಿಂದ ತೊಯ್ದು ಹಾದಿಯಲ್ಲಿ ಹೆಜ್ಜೆಯ ಗುರುತು ಗಳು ಸ್ವಚ್ಛಂದವಾಗಿ ಬೀಳುತ್ತಿವೆ. ಇನ್ನು ಒಂದೆರಡು ವಾರ ಕಳೆದರೆ ಮಂಜು ದಟ್ಟವಾಗಿ ಬಿದ್ದು ರಸ್ತೆ ಮನೆ ಮಠಗಳೆಲ್ಲಾ ಮುಚ್ಚಿ ಹೋಗು ತ್ತವೆ. ಅನಂತರ ಗಸ್ತು ತಿರುಗುವವರ ಪಾಡು ದೇವರಿಗೇ ಪ್ರೀತಿ....ಆತ ಇರುವುದು ಹೌದಾಗಿದ್ದರೆ.....ಖಂಡಿತವಾಗಿಯೂ.....

ಥಿಗ್. ಥಿಗ್. ಥಿಗ್. ಥಿಗ್.

ಲರಕ್. ಲರಕ್. ಲರಕ್. ಲರಕ್.

ಅರೆರೆ ! ಇದೇನು ? ಈ ಪಾದ ರಕ್ಷೆಗಳೂ ಸಂಪು ಹೂಡಿವೆಯೆ– ಎಲಿನಾ ಮಾಲಿ ಜಾಲಿಯರಂತೆ? ಮಾಲಿ ಜಾಲಿಯರಾದರೂ ಒಂದು ರೀತಿ. ಉಂಡು ತಿಂದು ನಕ್ಕು ನಲಿಯುವ ವಯಸ್ಸು. ಶಿಶು ಸಹಜ ಸ್ವಭಾವ.

ಆದರೆ ಎಲಿನಾ ಏಕೆ ಹೇಗೆ? ಅವಳಿಗೇನು ಕಡಿಮೆ ? ಕೈ ತುಂಬ ದುಡಿಯು ತ್ತಾಳೆ. ಹೊಟ್ಟೆತುಂಬ ಉಂಡು ಸುಖವಾಗಿರಬಾರದೇ ? ನನಗೆ ಬಡ್ತಿ ಬಂದರೆಷ್ಟು ? ಬಿಟ್ಟರೆಷ್ಟು ? ಆವಳೇಕೆ ಇದರಲ್ಲೆಲ್ಲಾ ತಲೆಹಾಕಬೇಕು ? ಪೋಲೀಸ್ ಖಾತೆ ಅಂದರೆ ಮಕ್ಕಳಾಟವೇ ? ಮನಸ್ಸು ಕೆಟ್ಟಾಗ ಸಣ್ಣ ಕಿಡಿಯೂ ಕಿಚ್ಚುರಿಸುತ್ತದೆ. ಇದೆಲ್ಲಾ ಇವಳಿಗೇಕೆ ಅರ್ಥವಾಗುವುದಿಲ್ಲ ? ಗೃಹಿಣಿಯಾದವಳು ನಾಲಿಗೆಯನ್ನು ಹರಿಯಬಿಡಬಾರದು. ತಾನು ಬೇಕಾದಷ್ಟು ತಿಂಡಿ ತಿನಿಸು ತರುವೆ ಎಂಬ ಹೆಮ್ಮೆ ಇದ್ದರೂ ಇರಲಿ, ಅದನ್ನು ತೋರಿ ಕೊಳ್ಳಬಾರದು. ತಿಂಡಿ ತಿನಿಸು ನೀಡುವಾಗ ಅವಳಿಗೆ ಅದೆಷ್ಟು ಹೆಮ್ಮೆ? ಹೂಂ ! ಇರಲಿ....ಇರಲಿ, ನನಗೊಂದೆರಡು ಬಡ್ತಿ ಬಂತೆಂದರೆ ಎಷ್ಟು ತಿಂಡಿ ತಿನಿಸು ಬೇಕು? ತಿಂದು ಅಜೀರ್ಣವಾಗುವಷ್ಟು ತರುವೆ.... ನಾಲ್ಕು ಮಂದಿ ಕಳ್ಳರನ್ನು ಹಿಡಿದೆನೆಂದರೆ ಸೈ ! ಬಡ್ತಿಯ ಮೇಲೆ ಬಡ್ತಿ ! ....ಬಡ್ತಿಯ ಮೇಲೆ ಬಡ್ತಿ !

ಅಂದು ಜೂಲಿ ಕೇಳಿದ್ದೇನು ?

"ಅಪ್ಪಾ! ವರ್ಷವೂ ತಾಯಿಗೆ ಬಡ್ತಿ ಸಿಕ್ಕುತ್ತೆ. ದಿನವೂ ತಿಂಡಿ ತಿನಿಸು ತರುತ್ತಾಳೆ. ಹಾಗೆ ನಿನಗೇಕೆ ಬಡ್ತಿ ಸಿಕ್ಕುವುದಿಲ್ಲ ? ತಿಂಡಿ ತಿನಿಸುಗಳೇಕೆ ಸಿಕ್ಕುವುದಿಲ್ಲ? ಬಹುಶಃ ನೀನು ಚೆನ್ನಾಗಿ ಕೆಲಸ ಮಾಡುವುದಿಲ್ಲವೇನೋ!"

"ಅವಳು ದೊಡ್ಡ ಹೋಟೆಲಿನಲ್ಲಿ ಕೆಲಸ ಮಾಡುತ್ತಾಳೆ. ತಿಂಡಿ ಗಿಂಡಿ ಸಿಗುತ್ತೆ. ನನಗೆ ಪೋಲೀಸ್ ಇಲಾಖೆಯಲ್ಲಿ ತಿಂಡಿ ಎಲ್ಲಿಂದ ಬರಬೇಕು ? ನನ್ನದು ಸರಕಾರಿ ನೌಕರಿ. ನಿರ್ದಿಷ್ಟ ಸಂಬಳ, ಆವಳದು ಹಾಗಲ್ಲ. ಹೋಟೆಲಿನ ಉದ್ಯಮ ಬೆಳೆಸಿಕೊಳ್ಳಲು ಎಷ್ಟಾದರೂ ಹಣ ಕೊಡುತ್ತಾರೆ. ನನ್ನದು ಹಾಗೋ ?"

"ನೀನು ಏಕೆ ಅಡುಗೆಯವನಾಗಿ ಸೇರಬಾರದು?" ಮಾಲಿಯ ಪ್ರಶ್ನೆ.

"ಸರಕಾರಿ ನೌಕರಿ ಇರುವಾಗ ನಾನು ಅಡುಗೆಯವನಾಗಿ ಏಕೆ ಸೇರಲಿ? ಸಾರ್ಜೆಂಟಾದರೆ ನನಗೂ ಕೈ ತುಂಬ ಸಂಬಳ ಬರುತ್ತೆ ಸುಮ್ಮನಿರು."

"ಅದೆಂದಿಗೊ.....?ಯಾವಾಗ ನೋಡಿದರೂ ದುಡ್ಡಿಲ್ಲ ಎನ್ನುತ್ತಿರುತ್ತಿ."

"ಏನು ಮಾಡೋಣ ? ಯಾವುದೂ ತಟ್ಟನೆ ಆಗುವುದಿಲ್ಲ."

"ಈ ಹಾಳು ಉದ್ಯೋಗ ಬಿಟ್ಟು ಯಾವುದಾದರೂ ಉತ್ತಮ

ಉದ್ಯೋಗಕ್ಕಿಳಿ." ಎಂಬುದು ಮಡದಿಯ ಇತ್ತೀಚಿನ ಸಲಹೆ.

ಆದರೆ....ಈ ಉದ್ಯೋಗಕ್ಕೆ ಹೊಂದಿಕೊಳ್ಳಲು ಎಷ್ಟು ಹೆಣಗಿದ್ದೇನೆ ಎಂಬುದು ಆಕೆಗೇನು ಗೊತ್ತು ? ಮತ್ತೆ ಈಗ ಬಿಟ್ಟುಕೊಡುವುದೆಂದರೆ ಹೇಗೆ ?....ಈ ಎಲ್ಲಾ ಯೋಚನೆಗಳಲ್ಲಿ ಮಿದುಳು ಛಿನ್ನವಿಚ್ಛಿನ್ನವಾಗಿ ಸಹಸ್ರ ಸ್ರೋತಗಳಾಗಿ ಹರಿದು ಹೋಗುತ್ತದೆ. ಮಡದಿ ಎಲಿನಾಳಿಗೆ ಈ ಬಡ್ತಿ ಬಂದಮೇಲೆ ಅವಳ ಗಳಿಕೆ ದ್ವಿಗುಣವಾಗಿ ನನ್ನ ಸಂಬಳದ ಎರಡರಷ್ಟಾಗಿದೆ. ಅವಳಿಗಿಂತ ಮೊದಲೇ ತಾನೇರಬೇಕೆಂದು ಬಯಸಿದುದು ಬರಿಯ ವ್ಯರ್ಥ. ಅವಳ ಗಳಿಕೆ ತನ್ನ ಹೆಗ್ಗಳಿಕೆಯಾದರೂ ತನಗಿಲ್ಲದ ಹೆಚ್ಚಳ ಅವಳಿಗೆ ಅಗ್ಗಳಿಕೆ ತಂದರೇನು ಗತಿ ?...ನನಗೆ ಹಿಂದಿನ ಸಾರ್ಜೆಂಟ್ ಹಿಂಬಡ್ತಿ ಕೊಡದಿದ್ದಲ್ಲಿ ಸ್ವಲ್ಪವಾದರೂ ಮುಂದೆ ಹೋಗಬಹುದಾಗಿತ್ತು. ಹಾಳಾದವನು ನನ್ನ ಹಾದಿಗೆ ಮುಳ್ಳು ನೆಟ್ಟ. ಇರಲಿ ದಕ್ಷತೆಗೆ ಎಂದೂ ಚ್ಯುತಿ ಇಲ್ಲ.....ಖಂಡಿತವಾಗಿಯೂ ಇಲ್ಲ....

ಈಗ ಎಲಿನಾ ಮಕ್ಕಳೊಂದಿಗೆ ಮುಸಿ ಮುಸಿ ನಗುತ್ತಾಳೆ.....ನಗಲಿ.... ನಗಲಿ ಅವಳಿಗೆ ಸೋಲುವಷ್ಟು ಪರಮ ಮೂರ್ಖನಲ್ಲ ನಾನು. ನನಗೀಗ ಅದೃಷ್ಟವಿಲ್ಲದಿರಬಹುದು ಅಷ್ಟೆ. ಮುಂದೆಂದಾದರೂ ಒಳ್ಳೆಯ ಕಾಲ ಬಂದೇ ಬರುತ್ತೆ ... ಆಗ.....

"....ಆಗ....?"

ತನಗೆ ತಾನೇ ಮುಗುಳು ನಕ್ಕ ಹೆನ್ರಿ. ಭಾವನಾಲೋಕದಲ್ಲಿ ವಿಹರಿಸುತಿದ್ದರೂ ಕರ್ತವ್ಯ ಪರಾಙ್ಮುಖನಾಗಿರಲಿಲ್ಲ. ದಿಟ್ಟಿಯನ್ನು ಎಡ ಬಲಗಳಲ್ಲಿ ಚೆಲ್ಲಿ ವಿಶಿಲ್ ಊದುತ್ತಾ ಹಾದಿ ನಡೆದಿದ್ದ. ಭೀಮವೇಗದಿಂದ ಬೀಸುವ ಹಿಮಗಾಳಿ ಅವನನ್ನು ತಳ್ಳಿಕೊಂಡು ಹೋಯಿತು ಮೈ ತುಂಬ ಉಣ್ಣೆಯ ಬಟ್ಟೆ ತೊಟ್ಟಿದ್ದರೂ ಒಳಗಿಂದೊಳಗೇ ನಡುಗಿತು ಮೈ.

....ಮುದ್ದು ಮಡದಿ ಎಲಿನಾ ಕೆಟ್ಟವಳಲ್ಲ. ಅವಳ ಭಾವನೆಗಳೆಲ್ಲಾ ವೇಗಗಾಮಿನಿಯಾದ ಥೇಮ್ಸ್ ನದಿಯಂತೆ. ಪೂರ್ಣ ವ್ಯವಹಾರ ಜ್ಞಾನವುಳ್ಳ ಅವಳು ಯೋಚಿಸಬಾರದೇಕೆ ? ಓದಿದ್ದಾಳೆ ; ಕಲಿತಿದ್ದಾಳೆ ; ಆದರೂ ಹುಡುಗು ಬುದ್ಧಿ. ಅಂತಹ ಚಿಕ್ಕ ಹೆಣ್ಣೂ ಅಲ್ಲ ಆಕೆ. ಚೆನ್ನಾಗಿ ಯೋಚಿಸಬಲ್ಲವಳು. ಗೃಹಕೃತ್ಯದಲ್ಲಿ ನಿಷ್ಣಾತೆ. ಆದರೆ, ಯಾವಾಗಲೂ "ನಿನಗೆ ಬಡ್ತಿ

ಬಂತೇ ?" ಎಂದು ಕೇಳುವುದು ಸರಿಯಲ್ಲ. ಆ ಒಂದೊಂದು ಅಕ್ಷರವೂ ತಾನು ಹೆಚ್ಚು ದುಡಿಯುವೆ ಎಂಬ ಅಭಿಮಾನವನ್ನು ಸಾರಿ ಹೇಳುತ್ತವೆ. ಒಮ್ಮೊಮ್ಮೆ ಅವಳು ತರುವ ವಿಧವಿಧ ತಿಂಡಿ ತಿನಿಸುಗಳನ್ನು ತಿನ್ನುವುದೇ ಬೇಡ ಎನ್ನಿಸುತ್ತದೆ. ನಾನು ಕೆಲವು ಬಾರಿ ಬಡ್ತಿಯ ಬಗ್ಗೆ ಪ್ರಸ್ತಾಪಿಸ ಬಾರದೆಂದು ಹೇಳಿದುದೂ ಸಹ ವ್ಯರ್ಥ. ಪೋಲೀಸ್ ಖಾತೆಗೆ ಸೇರುವಾಗ ಎಲಿನಾ ಅಂದದ್ದೇನು ? ಅವಳ ಪ್ರೋತ್ಸಾಹವಿಲ್ಲದಿದ್ದರೆ ನಾನು ಸೇರುತಿದ್ದೆನೇ.....? ಅದನ್ನೀಗ ಆಕೆ ಯೋಚಿಸುವುದಿಲ್ಲವೇಕೆ ?

"ಹೆನ್ರಿ.....! ನಿನಗಾಗಲೇ ಮೂವತ್ತು ವರ್ಷ ದಾಟಿತು. ಇದುವರೆವಿಗೆ ಕೆಲಸವಿಲ್ಲದೆ ತೊಂದರೆ ಪಟ್ಟದ್ದೇ ಸಾಕಾಗಿದೆ. ಮುಂದೆ ಒಳ್ಳೆಯ ಕೆಲಸ ಸಿಗುತ್ತದೆಂಬ ನಂಬುಗೆಯೂ ಇಲ್ಲ. ಸುಮ್ಮನೆ ಈ ಕೆಲಸ ಒಪ್ಪಿಕೊಂಡು ಬಿಡು."

"ಈ ವ್ಯಾಪಾರ ಕುದುರಿಕೊಂಡಲ್ಲಿ ಮುಂದೆ ಕೈತುಂಬ ಗಳಿಸಿಕೊಳ್ಳ ಬಹುದೆಂಬ ಯೋಚನೆ ಎಲಿನಾ.....ಅವಸರದ ಕ್ರಮ ಕೈಕೊಳ್ಳಲು ನನಗೆ ಇಷ್ಟವೇ ಇಲ್ಲ."

"ಈಗಾಗಲೇ ಎಷ್ಟು ವರ್ಷಗಳಾದುವು....? ವ್ಯಾಪಾರ ಕುದುರುವುದಿದ್ದರೆ ಈ ಅವಧಿಯೊಳಗಾಗಿ ಕುದುರಿಕೊಳ್ಳಬಹುದಾಗಿತ್ತು. ಇದನ್ನು ನೆಚ್ಚಿ ಹೆಣಗುವುದಕ್ಕಿಂತ ಆ ಕೆಲಸ ಹಿಡಿಯುವುದು ಲೇಸು."

"ಹಾಗಿದ್ದರೆ...."

"ಯೋಚಿಸಲೇಬೇಡ."

"ನನಗೆ ಮನಸ್ಸೇ ಇಲ್ಲ.....ಪೋಲೀಸ್ ಹುದ್ದೆ ಅಂತಹ ಒಳ್ಳೆಯ ಹುದ್ದೆಯಲ್ಲ."

"ಈಗ ಬಿಟ್ಟರೆ ಅದಕ್ಕೂ ಗತಿಯಿಲ್ಲದೆ ಹೋದೀತು."

"ಸೇರಿಕೊಳ್ಳಲೇ ಹಾಗಾದರೆ ?"

"ಇದಕ್ಕಿಂತ ಖಂಡಿತಾ ಕ್ಷೇಮ.....ಅಷ್ಟುಮಾತ್ರ ಹೇಳಬಲ್ಲೆ."

ಇಷ್ಟೆಲ್ಲಾ ಉತ್ತೇಜನ ನೀಡಿದ ಹೆಣ್ಣು ಎಲಿನಾ.....ಆದರೆ, ಈಗೇಕೆ ಇದರಲ್ಲೆಲ್ಲಾ ತಲೆ ಹಾಕುತ್ತಾಳೆ ? ನನ್ನ ಮನಃಕ್ಷೋಭೆ ಮುಖಮಂಡಲದ ಮೇಲೆ ಪ್ರತಿಫಲಿತವಾಗುವುದನ್ನು ಕಂಡರೂ ಸಹ ಕಾಣದಂತೆ ವ್ಯವಹರಿಸುವುದನ್ನು ನೋಡಿದರೆ ನನಗೆ ಖಂಡಿತಾ ಸಿಟ್ಟು ಬರುತ್ತದೆ. ಅವಳಿಗಿಂತ

ಹೆಚ್ಚುಗಳಿಸಿ ನಾನು 'ಗಂಡು' ಎಂಬುದನ್ನು ತೋರಿಕೊಡುವೆ. ಒಂದಲ್ಲ, ಒಂದು ದಿನ ನನಗೆ ಅಂತಹ ಸುಸಮಯ ಬಂದೇ ಬರುತ್ತದೆ. ಈಗೇಕೆ ? ಹುಂ.....ನೋಡೋಣ ಎಷ್ಟು ಕಾಲ ಹೀಗೆ ?

ಹಾ.....! ಈ ಚಳಿಯೇನು ಇಷ್ಟು ಕೊರೆಯುತ್ತೆ? ತಡೆಯುವಂತೆಯೇ ಇಲ್ಲ. ಈ ಹಾಳು ಉದ್ಯೋಗವಿಲ್ಲದಿದ್ದರೆ ಮನೆಯಲ್ಲಿ ಸುಖವಾಗಿ ಬೆಚ್ಚಗೆ ಹೊದ್ದು ಮಲಗಬಹುದಾಗಿತ್ತು. ಹಾ....ಅದಕ್ಕೂ ಪಡೆದುಕೊಂಡು ಬಂದಿರ ಬೇಕಲ್ಲ.

ಮೆಥಾಡಿಸ್ಟ್ ಚರ್ಚ್ ಗಂಭೀರ ಧ್ವನಿಯಲ್ಲಿ ಗಂಟೆ ಭಾರಿಸಿತು. ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು, ಹತ್ತು, ಹನ್ನೊಂದು, ಹನ್ನೆರಡು.

ಓ....ಇನ್ನೆರಡು ಗಂಟೆ ಸುತ್ತಿ ಬಿಟ್ಟರೆ ಮುಗಿಯಿತು. ಅನಂತರ ಮೂರನೇ ಪಾಳಿಯ ಸರದಿ. ಹಾಯಾಗಿ ಬೆಳಗ್ಗೆ ಹತ್ತು ಗಂಟೆಯವರೆ ವಿಗೂ ನಿದ್ದೆ ಹೊಡೆಯಬಹುದು. ಆ ವೇಳೆಗೆ ಜೂಲಿ ಮಾಲಿಯರು ಶಾಲೆಗೆ ಹೋಗಿರುತ್ತಾರೆ. ಎಲಿಸಾ ಹೋಟೆಲಿನಲ್ಲಿರುತ್ತಾಳೆ. ಸದ್ದು ಗದ್ದಲಗಳ ಸೊಲ್ಲೇ ಇರುವುದಿಲ್ಲ. ಒಬ್ಬನೇ ಆರಾಮವಾಗಿ ಟಿ. ವಿ. ನೋಡಿದರೆ ಸೈ. ಹಿಹ್ಹಿಹ್ಹೀ !

ಸುಮಾರಾಗಿ ಈ ದಿನಗಳಲ್ಲಿ ಇಷ್ಟು ಚಳಿ ಇರುವುದು ಅಪರೂಪ. ಈ ಸಲ ಈಗಲೇ ಶುರುವಾಗಿದೆ ಹಾಳಾದ್ದು ! ಅಹಹ !....ಎಂತಹ ಚಳಿ!

ಹಿಮಗಾಳಿಯ ಹೊಡೆತ ಇನ್ನಷ್ಟು ತೀವ್ರವಾಗುತ್ತಲೂ ತುಸು ತತ್ತರಿಸಿತು ಪ್ರಾಣಪಕ್ಷಿ. ಹೆಜ್ಜೆಯನ್ನು ಇನ್ನಷ್ಟು ತೀವ್ರಗೊಳಿಸಿದ ಹೆನ್ರಿ. ಚಳಿಯ ಒತ್ತಡಕ್ಕೆ ಮಣಿಯದೆ. ರೊಯ್ಯನೆ ಬೀಸಿ ಬಂದ ಹಿಮಗಾಳಿಯಲ್ಲಿ ತೂರಿ ಬಂದ ಬರ್ಫದ ತುಣುಕುಗಳು ಪಟ್ ಪಟ್ಟನೆ ಮೈಗೆ ತಾಗಿದುವು.

ಮರದ ಮೇಲಿನ ಪಕ್ಷಿ ಚಳಿಯನ್ನು ತಡೆಯಲಾರದೆಯೋ ಏನೋ ಚಟ ಪಟನೆ ರೆಕ್ಕೆ ಬಡಿಯಿತು. ಕತ್ತೆತ್ತಿ ನೋಡಿದ. ಆ ಮಂಜು ಮುಸುಕಿದ ವಾತಾ ವರಣದಲ್ಲಿ ಏನೂ ಕಾಣಿಸದು. ಶುಕ್ಲಪಕ್ಷದ ಚಂದ್ರನಾಗಲೀ ಮಿನುಮಿನು ಗುವ ತಾರಾಕೋಟಿಯಾಗಲೀ ದೃಷ್ಟಿ ಗೋಚರಿಸದಂತೆ ಮಂಜು ತೆರೆ ಹಿಡಿದಿದೆ.

ರಸ್ತೆಯಲ್ಲಿ ಪಥಿಕರ ಸಂಖ್ಯೆ ಕಡಿಮೆಯಾದರೂ ವಾಹನಗಳ ಸಂಖ್ಯೆ ಕಡಿಮೆಯಾಗಿಲ್ಲ. ಯಾವ ಯಾವ ಬಾರ್‌ಗಳ ಕಡೆಯಿಂದಲೋ ಮನೆಗಳ ಕಡೆ ಹೋಗುವ ಕಾರುಗಳು ಸ್ಥಿಮಿತ ತಪ್ಪಿ ರಸ್ತೆಯ ತುಂಬ ಹರಿಯುವು ದನ್ನು ನೋಡಿದರೆ ಎಲ್ಲಿ ಮೈ ಮೇಲೆ ನುಗ್ಗಿ ಪ್ರಾಣಕ್ಕೆ ಸಂಚಕಾರ ತರುತ್ತವೆಯೋ ಎಂಬ ಭಯ ಮೂಡುತ್ತದೆ. ಹಣ ಮದ....ಯೌವನ ಮದ ಮನುಷ್ಯನನ್ನು ಎಷ್ಟು ಹಾಳು ಮಾಡುತ್ತವೆ....? ದೇವರ ದಯ ದಿಂದ ನನಗೆ ಯಾವ ಮದವೂ ಇಲ್ಲ. ಎಲಿನಾ ಪುಣ್ಯವಂತೆ!

ಹಿಪ್ಹಿಪ್ಹ!

ಸಿನಿಮಾಗಳು ಬಿಟ್ಟುವು.

ಒಮ್ಮೆಲೇ ರಸ್ತೆಯಲ್ಲಿ ಜನ ಪ್ರವಾಹ ವಾಹನ ಪ್ರವಾಹ ಥೇಮ್ಸ್ ನದಿಯ ಜಲರಾಶಿಯಂತೆ ಹರಿದು ಬಂದಿತು. ನಿರ್ಮಾನುಷವಾಗಿದ್ದ ರಸ್ತೆ ಗಳೆಲ್ಲಾ ಗದ್ದಲಮಯವಾದುವು. ಉನ್ಮತ್ತವೇಗದಲ್ಲಿ ಜನವಾರಿಧಿ ಸಾಗು ತ್ತಿದೆ. ಶರವೇಗದಲ್ಲಿ ಕಾರುಗಳು ಸಾಗಿ ಹೋದುವು. ಬಹಳ ಮಟ್ಟಿಗೆ ಸ್ತ್ರೀಪುರುಷರು ಸಿಗರೇಟು–ಸಿಗಾರುಗಳನ್ನು ಹೊಂದಿದ್ದರು. ಪಾದರಕ್ಷೆಗಳ ಪಟ ಪಟತ್ಕಾರ ನಿಶ್ಶಬ್ದತೆಯ ಮೇಲೆ ಸುತ್ತಿಗೆಯ ಪೆಟ್ಟಿನಂತೆ ಬೀಳುತಿತ್ತು. ಅರ್ಧಗಂಟೆಯೊಳಗಾಗಿ ರಸ್ತೆಗಳು ಪುನಃ ನಿರ್ಮಾನುಷವಾದುವು.

ರೊಯ್ ಇ ಇ ಇ ಇ....

ಕುಳಿರ್ಗಾಳಿ ರೊಯ್ಯನೆ ಬೀಸಿ ಮುಖದ ಮೇಲಿನ ಚರ್ಮ ಚಿಟಚಿಟನೆ ಬಿರಿಯಿತು. ಮಂಕಿ ಕ್ಯಾಪನ್ನು ಎಳೆದೆಳೆದು ಮುಖವನ್ನು ಮರೆ ಮಾಡಿ ಕೊಂಡ ಹೆನ್ರಿ. ಅಬ್ಬಬ್ಬ! ಬರ್ಫದ ತುಣುಕುಗಳು ಕಲ್ಲು ಬೀಸಿ ಒಗೆದಂತೆ ಮೈಗೆ ತಾಗಿದುವು. ಅಂ....ಅಯ್‌ಯ್....

ಈ ಸಲ ಇನ್ನೊಂದು ಜೋಡಿ ಉಣ್ಣೆಯ ಬಟ್ಟೆ ಕೊಳ್ಳದಿದ್ದರೆ ಆಗು ವಂತೆಯೇ ಇಲ್ಲ. ನನಗಷ್ಟೇ ಅಲ್ಲ ಎಲಿನಾ ಮಾಲಿ ಜಾಲಿಯರಿಗೂ ಕೊಳ್ಳ ಬೇಕು. ಎಲಿನಾ ಕೊಂಡು ತರುವ ಮುಂಚೆ ನಾನೇ ಕೊಂಡು ತಂದರೆ ಎಲಿನಾ ಕೊಳ್ಳುವಂತಿಲ್ಲ; ತಾನೇ ಕೊಂಡು ತಂದೆನೆಂಬ ಹೆಮ್ಮೆಯನ್ನೂ ಆಕೆ ಪ್ರದರ್ಶಿಸುವಂತಿಲ್ಲ! ಈ ಸಲ ಸಂಬಳ ಬಂದೊಡನೆ ಮೊದಲು ಕೊಳ್ಳು ವುದು ಉಣ್ಣೆಯಬಟ್ಟೆ. ನೋಡಿದೊಡನೆ ಎಲಿನಾ ಬೆಪ್ಪಾಗುವಂತಿರಬೇಕು!

ಥಿಗ್. ಥಿಗ್. ಥಿಗ್. ಥಿಗ್.

ಲರಕ್. ಲರಕ್. ಲರಕ್. ಲರಕ್.

ಹಿರಿಯ ಬೂಟು, ಪೋಲೀಸ್ ಉಡುಪು, ಒಳಜೇಬಿನಲ್ಲಿ ಪಿಸ್ತೂಲು, ಬಲಗೈಯಲ್ಲಿ ತುಂಡು ದೊಣ್ಣೆ, ಎಡಗೈಯಲ್ಲಿ ವಿಶಿಲ್, ನಡಿಗೆಯ ದಿಟ್ಟತನ ಒಂದೊಂದೂ ವ್ಯಕ್ತಿತ್ವಕ್ಕೆ ಉದ್ಯೋಗಕ್ಕೆ ಚೇತನವನ್ನೂಡಿಸುತ್ತಿವೆ. ಪೋಲೀಸ್ ಜೋರಾಗಿ ವಿಶಿಲ್ ಊದಿದ. ಒಂದು ಫರ್ಲಾಂಗಿನವರೆವಿಗೂ ಕೇಳಿಸುವಂತೆ ಕಹಳೆಯೋಪಾದಿಯಲ್ಲಿ ಮೊಳಗಿತು ಧ್ವನಿ. ನಿಶ್ಯಬ್ದರಾಶಿಯನ್ನು ಭೇದಿಸಿಕೊಂಡು ಪದಾಘಾತಗಳ ಪಟಪಟಾತ್ಕಾರ ಕರ್ಣ ಪಟಲಗಳನ್ನು ತಾಗುತಿತ್ತು. ಟಾರು ಬಳಿದ ಕರ‍್ರನೆಯ ರಸ್ತೆಗಳಲ್ಲಿ ಆಗೊಮ್ಮೆ ಈಗೊಮ್ಮೆ ಕಾರುಗಳು ಹರಿಯುತ್ತಿವೆ. ಮೆಥಡಿಸ್ಟ್ ಚರ್ಚು ಗಂಭೀರ ಧ್ವನಿಯಲ್ಲಿ ಗಂಟೆ ಭಾರಿಸಿತು.

ಢಣ್ !

ಗಂಟೆ ಒಂದಾಯಿತು. ಹೊತ್ತು ಉರುಳಿದಂತೆಲ್ಲಾ ಹಾದಿಗರು ಕಣ್ಮರೆಯಾಗುತಿದ್ದಾರೆ. ಕಾರುಗಳ ಸದ್ದೂ ಅಡಗುತ್ತಿದೆ. ಸಿಟಿ ಸರ್ವಿಸ್ ಬಸ್ಸುಗಳೂ ತಮ್ಮ ತಮ್ಮ ನಿಲ್ಮನೆಯನ್ನು ಸೇರಿಕೊಂಡು ನಿದ್ದೆ ಹೊಡೆಯುತ್ತಿವೆ. ಗಸ್ತು ತಿರುಗುವ ಪೋಲೀಸ್ ವ್ಯಾನುಗಳು ವಿನಾ ಬೇರಾವ ಸದ್ದು ಗದ್ದಲಗಳು ಇಲ್ಲ. ಸಿನಿಮಾ ಹೋಟೆಲುಗಳ ದೀಪಗಳು ನಂದಿವೆ. ಮನೆಮನೆಗಳ ದೀಪಗಳೂ ನಿದ್ದೆ ಹೋಗಿವೆ. ಈಗ ರಸ್ತೆಯಲ್ಲಿ ಹೆನ್ರಿ ಏಕಾಕಿ–ನಿಶಾಚರ ಪಿಶಾಚಿಯಂತೆ.

ಒಮ್ಮೊಮ್ಮೆ ನಾಯಿಗಳು ಬೊಗಳುವ ಸದ್ದೂ ಕೆಲವೊಮ್ಮೆ ನಿಶಾಚರ ಪಕ್ಷಿಗಳ ಚೀಂಕಾರವೂ ಕೇಳಿಬರುವುದುಂಟು. ಅದ್ಭುತ ಶಾಂತಸಂಪತ್ತಿಯ ಮೇಲೆ ಸುತ್ತಿಗೆಯ ಪೆಟ್ಟಿನಂತೆ ಬೀಳುವ ಪದಾಘಾತಗಳ ವಿನಾ ಎಲ್ಲೆಲ್ಲೂ ತುಂಬಿ ಹರಡಿದ ನಿಶ್ಯಬ್ದ. ಶಾಂತ ಮಹಾ ಸಾಮ್ರಾಜ್ಯದಲ್ಲಿ ತೆಳ್ಳನೆಯ ಮಂಜಿನುಡೆಯುಟ್ಟ ಸ್ವರ್ಗಲಕ್ಷ್ಮಿಯಂತೆ ಕಣ್ಗೆಸೆಯುತಿತ್ತು ಲಂಡನ್ !

ರುದ್ರ ಗಂಭೀರ ನಿಶೆ.

ಚಂದ್ರ ಶೀತಲ ಫೇನರಾಶಿ.

ಎಡ ಬಲಗಳಲ್ಲಿ ಸಾಲು ಸಾಲಾಗಿನ ಹಿರಿಯ ಕಟ್ಟಡಗಳ ಮಂಜಿನ ತೆರೆ

ಯಲ್ಲಿ ಮಿಂದು ಮಸುಕಾಗಿವೆ. ಬೃಹದ್ ಕಟ್ಟಡಗಳ ನೆಲೆಯನ್ನು ದಾಟುತ್ತಾ ಮುಂದೆ ನಡೆದ ಹೆನ್ರಿ. ಗಟ್ಟಿಯಾಗಿ ವಿಶಿಲ್ ಹಾಕಿ ಹಿರಿಯ ಕಟ್ಟಡಗಳೆಡೆಗೆ ಕಣ್ಣು ಹಾಯಿಸಿ ನಿಟ್ಟಿಸಿ ನೋಡಿದ,

ಈ ಕಾಲದಲ್ಲೂ ಕಳ್ಳರು ಕಾಕರು! ಇವರಿಗೇಕೆ ರೋಗ ಬರುವುದಿಲ್ಲ?

ತನ್ನಷ್ಟಕ್ಕೆ ತಾನೇ ಸಿಡಿಮಿಡಿಗೊಂಡ.

ಹಾದಿ ಸಾಗುತಿತ್ತು.

ಗೂಊಊ ! ಗೂಊಊ !

ಥೂ ಹಾಳು ಗೂಗೆ! ಇದರ ಗಂಟಲು ಕಟ್ಟಿ ಹೋಗ. ಎಷ್ಟು ಜನರ ಪತನಕ್ಕೆ ನಾಂದಿಯೋ ಇದರ ಹಾಡು !

ದೀಪದ ನೆಲೆಗೆ ಬರುತ್ತಲೂ ಕಾಲ್ತುಳವನ್ನು ಸೇರಿಕೊಳ್ಳುತಿದ್ದ ಅವನ ನೆರಳು ದೀಪ ಹಿಂದಾಗುತ್ತಲೂ ಮುಂದಕ್ಕೋಡುತಿತ್ತು. ಹಾದಿಯ ನೇರಕ್ಕೆ ಚೂಪಗೆ ಹತ್ತು ಮೊಳದುದ್ದಕ್ಕೂ ಓಡುತಿದ್ದ ಹಿರಿಯ ನೆರಳನ್ನವಲೋಕಿಸುತ್ತಾ ಹೆಜ್ಜೆ ಹಾಕಿದ ಹೆನ್ರಿ. ಕಿಂಗ್ಸ್‌ವೇ ಹಾದು ಕ್ವೀನ್ ವಿಕ್ಟೋರಿಯಾ ಮೆಮೋರಿಯಲ್ ಲೈಬ್ರರಿಯ ಬಳಿ ಬಂದಾಗ ಎದುರಿನ ಕೆಂಪು ಕಟ್ಟಡದ ಬಳಿ ಬಿಲೆಯುಳ್ಳ ಬಟ್ಟೆಗಳನ್ನು ತೊಟ್ಟ ವ್ಯಕ್ತಿ ಅತ್ತಿತ್ತ ನಿಟ್ಟಿಸುತ್ತ ನಿಂತಿದ್ದುದು ದಿಟ್ಟಿಗೆ ಬಿತ್ತು. ಆ ನಿರ್ಮಾನುಷ ಪ್ರದೇಶದಲ್ಲಿ ಏಕಾಕಿಯಾಗಿ ನಿಂತಿದ್ದುದು ಸ್ವಲ್ಪ ಅನುಮಾನ ಮೂಡಿಸಿತು. ಈ ಅಪರಾತ್ರಿಯಲ್ಲಿ ನಿಂತಿರಲು ಕಾರಣವೇನಿರಬಹುದು? ಕಳ್ಳನೇ? ಕಳ್ಳನಾಗಿದ್ದ ಪಕ್ಷದಲ್ಲಿ ನನ್ನನ್ನು ನೋಡಿದೊಡನೆ ಓಡದೆ ಇರುತ್ತಿರಲಿಲ್ಲ. ಅಂದಮೇಲೆ ಯಾರಾದರೂ ಸಭ್ಯರಿರಬಹುದೇ? ಹಾಗಿದ್ದರೆ....

ಧಿಗ್. ಧಿಗ್. ಧಿಗ್. ಧಿಗ್.

ಹೆನ್ರಿ ಯೋಚಿಸುತ್ತಲೇ ಅವನ ಬಳಿಗೈದ. ಪೋಲೀಸಿನವ ನೇರವಾಗಿ ಇತ್ತಲೇ ಬರುವುದನ್ನು ನೋಡಿಯೂ ಅವನು ಕದಲದೆ ನಿಂತದುದನ್ನು ನೋಡಿ ಹೆನ್ರಿ ತನ್ನೊಳಗೇ ಉದ್ಗಾರ ತೆಗೆದ....ಅವನ ದಿಟ್ಟತನ ನಿಜವಾಗಿಯೂ ಮೆಚ್ಚಿಕೊಳ್ಳುವಂತಾದ್ದು. ಯಾರೋ ಹತ್ತು ಬಾರಿ ಜೈಲು ಕಂಡವನೇ ಇರಬೇಕು.....!

ದಪದಪನೆ ಹೆಜ್ಜೆ ಹಾಕಿ ಸನಿಹಕ್ಕೈದು ಏರಿದ ದನಿಯಲ್ಲಿ ಕೇಳಿದ ಹೆನ್ರಿ

"ಯಾರಯ್ಯಾ ನೀನು ?"

"ನಾನು .... ನಾನು.....?"

"ಹ್ಞಾ....ಹೇಳು."

"ನಾನು.....?"

"ಹೌದು. ನಿನ್ನನ್ನೇ ಕೇಳಿದ್ದು."

"ನಾನೇ !"

"ನಾನೇ ಅಂದರೆ ?"

"....."

"ಹುಂ. ಹೇಳು, ನೀನು ಯಾರು ?"

"ಬಾಬಿ !"

"ಈ ಹೊತ್ತಿನಲ್ಲಿ ಇಲ್ಲೇಕೆ ನಿಂತಿದ್ದಿ ?"

........ಇಂಥ ಹತ್ತು ಕಳ್ಳರನ್ನು ಹಿಡಿದರೆ ಸಾಕು. ನಾನು ನಾಳೆಯೇ ಸಾರ್ಜೆಂಟಾಗುವೆ! ಎಲಿನಾ ಒಂದೇಬಾರಿಗೆ ತಲೆಬಾಗುವಂತೆ—ಅವಳ ಅಗ್ಗಳಿಕೆ ಅಲ್ಲೇ ಮರೆಯಾಗಿ ಹೋಗುವಂತೆ ಮೆರೆಯುತ್ತೇನೆ ! ಅನಂತರ ಜೂಲಿ ಮಾಲಿ ನನ್ನ ಕಡೆಗೆ !

ಹೆನ್ರಿ ಪುಳಕಿತನಾದ.

"ಏಯ್ ! ಈ ಹೊತ್ತಿನಲ್ಲಿ ಇಲ್ಲೇಕೆ ನಿಂತಿದ್ದಿ ?"

"ಅದೆಲ್ಲಾ ನಿನಗೇಕೆ ?" ಎನ್ನಬೇಕೆನಿಸಿದರೂ ಒಂದು ಘಳಿಗೆ ಯೋಚಿಸಿ ಬಾಬಿ ನುಡಿದ "ನನ್ನ ಗೆಳೆಯನಿಗಾಗಿ ಕಾಯುತ್ತಿರುವೆ."

"ಯಾರು ನಿನ್ನ ಗೆಳೆಯ ?"

ಹಿಮಗಾಳಿ 'ರುಂ'ನೆ ಅಪ್ಪಳಿಸುವಂತೆ ಬೀಸಿತು.

ಬಾಬಿ ತನ್ನ ಹಿಂಬದಿಯಲ್ಲಿದ್ದ ಕೆಂಪು ಕಟ್ಟಡದೆಡೆಗೆ ಕಣ್ಣು ಹೊರಳಿಸಿ ಒಂದು ಕ್ಷಣ ಸಿಟ್ಟಸಿ ನೋಡಿ—"ನಿನಗೇಕೆ ಅಷ್ಟೊಂದು ಆಸಕ್ತಿ ?"

"ಸುಮ್ಮನೆ ಕೇಳಿದೆ ಅಷ್ಟೆ."

"ಜಿಮ್ಮಿ....ನನ್ನ ಗೆಳೆಯ."

"ಈ ಸರಿ ರಾತ್ರಿಯಲ್ಲಿ ಕಾಯುವುದೆಂದರೇನು?.....ಏತಕ್ಕಾಗಿ ಕಾಯುತ್ತಿರುವೆ."

"ಅವನೀಗ ಇಲ್ಲಿಗೆ ಬರಲಿದ್ದಾನೆ."

"ಈಗ.....? ಈ ಅಪರಾತ್ರಿಯಲ್ಲಿ ?"

"ಹೌದು....."

"ಉದ್ದೇಶ.........?"

"ಹಿಂದೆ–ಬಹಳ ಹಿಂದೆ ನಾವು ದೀರ್ಘವಾಗಿ ಅಗಲಬೇಕಾದ ಪ್ರಸಂಗ ಬಂದಾಗ ಸಸ್ನೇಹಪೂರ್ವಕವಾಗಿ ಮಾಡಿಕೊಂಡ ಒಪ್ಪಂದ ಅದು."

"ಏತಕ್ಕಾಗಿ ?"

"ಹನ್ನೆರಡು ವರ್ಷಗಳ ಹಿಂದೆ ಮಧ್ಯರಾತ್ರಿ ಒಂದು ಗಂಟೆ ಐವತ್ತೈದು ನಿಮಿಷಗಳಿಗೆ ಸರಿಯಾಗಿ ನನ್ನನ್ನು ಅಭಿನಂದಿಸಲು ಇಲ್ಲಿಗೆ ಬಂದಿದ್ದ. ಇದೇ ಸ್ಥಳದಲ್ಲಿ, ಇದೇ ಘಳಿಗೆಯಲ್ಲಿ ಪುನರ್ಭೇಟಿಯಾಗೋಣವೆಂದು ಆಗ ಒಪ್ಪಂದ ಮಾಡಿಕೊಂಡಿದ್ದೆವು. ಆ ಒಪ್ಪಂದದ ಪ್ರಕಾರ ಇಂದಿಗೆ ಹನ್ನೆರಡು ವರ್ಷಗಳು ತುಂಬಿದುವು."

ಅಂದಿನ ಆ ಸ್ನೇಹದ ನೆನವರಿಕೆಯಿಂದ ಬಾಬಿಯ ಮುಖ ಮಂಡಲ ಮಂಗಳಮಯವಾಯಿತು. ಎರಡೂ ಕೈಗಳನ್ನು ಎದೆಯ ಮೇಲೆ ಜೋಡಿಸಿ ನಿಂತ.

"ಓ.....ಹೋ.....ಹೋ ! ಬಾರಿ ವಿಶೇಷ !" ಹೆನ್ರಿ ನಕ್ಕ.

"ವಿಶೇಷವೇ ?" ಕೊರಳು ಕೊಂಕಿಸಿದ ಬಾಬಿ.

"ಓಹೋ....ಧಾರಾಳವಾಗಿ !"

"ಇಂದಿಗೆ–ಈ ಒಂದು ಐವತ್ತೈದಕ್ಕೆ ಸರಿಯಾಗಿ–ನನಗೆ ಐವತ್ತು ವರ್ಷಗಳು ತುಂಬುತ್ತವೆ. ಅವನು ಎಲ್ಲಿದ್ದರೂ ಈ ಮುಹೂರ್ತದಲ್ಲಿ ನನ್ನನ್ನು ಅಭಿನಂದಿಸಲು ಇಲ್ಲಿಗೆ ಬಂದೇ ಬರುತ್ತಾನೆ.....ಬದುಕಿದ್ದರೆ ಖಂಡಿತ ವಾಗಿಯೂ ಬರುತ್ತಾನೆ."

"ಶ್ಶ್ ! ಎಂಥ ಮಾತು ?"

"ಏಕೆ.....?

"ಗೆಳೆಯ ಎನ್ನುತ್ತಿ, ಬದುಕಿದ್ದರೆ ಎನ್ನುತ್ತಿ, ಇದೆಂಥ ಆಶ್ಚರ್ಯ ?"

"ಗೆಳೆಯನಾದವನು ಸಾಯದೆ ಬದುಕಿರಲು ಸಾಧ್ಯವೇ ?"

"ಹಾಗಲ್ಲ. ಗೆಳೆಯನೆಂದಮೇಲೆ ಕೊನೆಯಪಕ್ಷ ಅವನು ಬದುಕಿರುವ

ವಿಷಯ ನಿನಗೆ ತಿಳಿಯದೇ ?....ಇದೆಂತಹ ಸ್ನೇಹ ?"

"ಅವನೆಲ್ಲೋ ನಾನೆಲ್ಲೋ."

"ಕಾಗದ ಪತ್ರ....?"

"ಉಹೂ, ಇಲ್ಲವೇ ಇಲ್ಲ."

"ಅದೇಕೆ ?"

"ಇಬ್ಬರಿಗೂ ನಿಗದಿಯಾದ ನೆಲೆಯಿಲ್ಲ."

"ಅಂದರೆ ?"

"ದೇಶ ವಿದೇಶಗಳ ಅಲೆದಾಟ."

"ಓ....ಸರಿ" ಒಂದು ಘಳಿಗೆ ಯೋಚಿಸಿ ಕೇಳಿದ ಹೆನ್ರಿ "ಈ ನಡುವೆ ನೀವು ಒಮ್ಮೆಯೂ ಭೇಟಿ ಮಾಡಲಿಲ್ಲವೆ ?"

"ಇಲ್ಲವೇ ಇಲ್ಲ."

"ಭೇಷ್ ! ಬಹಳ ಚೆನ್ನಾಗಿದೆ."

ಹಿಹ್ಹಿಹ್ಹೀ !

"ನೀನೇಕೆ ಇದರಲ್ಲೆಲ್ಲಾ ತಲೆ ಹಾಕುತ್ತಿ ? ನಿನಗೇಕೆ ಅಷ್ಟು ಅನುಮಾನ ?"

"ಸಮ್ಮನೆ....ಅಷ್ಟೆ "

"ನಿನಗೇನಾದರೂ ಇದರಿಂದ ಲಾಭವುಂಟೆ ?"

"ಎಲ್ಲಿಯ ಲಾಭ ?"

"ಆದರೂ, ಬಹಳ ಖುಷಿಯಾಗಿದ್ದಿ !"

"ನಿನ್ನ ನೀತಿ ನೋಡಿ ನಗು ಬಂತು ಅಷ್ಟೆ."

"ಬಹಳ ಚಳಿ."

"ಒಂದು ಸಿಗಾರು ಹಚ್ಚೋಣವೇ ?"

"ಹೂ."

"ಬಹಳ ಗಾಳಿ. ಕಡ್ಡಿ ಗೀರುವಂತಿಲ್ಲ, ಸ್ವಲ್ಪ ಅಡ್ಡ ನಿಂತುಕೊ," ಜೇಬಿನಿಂದ ಕಡ್ಡಿಪೆಟ್ಟಿಗೆಯನ್ನು ತೆಗೆಯುತ್ತಾ ನುಡಿದ ಬಾಬಿ.

ಹಿಮಗಾಳಿ 'ರುಂ'ನೆ ಬೀಸುತ್ತಲೇ ಇತ್ತು. ಗಿಡಮರಗಳು ಮರ್ಮರ ಸದ್ದುಗೈಯ್ಯುತ್ತಲೇ ಇವೆ.

ಹೆನ್ರಿ ಅಡ್ಡ ನಿಂತ. ಬಾಬಿ ಕಡ್ಡಿ ಗೀರಿದ. ಒಂದು, ಎರಡು, ಮೂರು, ಉಹೂ, ಎಲ್ಲವೂ ವ್ಯರ್ಥ. ಒಡನೆ ಮೇಲಂಗಿಯ ಗುಂಡಿ ಕಳಚಿ ಬಿಚ್ಚಿ ಹಿಡಿದು ಗಾಳಿ ತೂರದಂತೆ ಅಡ್ಡಗೋಡೆ ನಿರ್ಮಿಸಿದ ಹೆನ್ರಿ. ಈ ಸಲ ಕಡ್ಡಿ ಉರಿಯಿತು. ಬಾಬಿ ಮೈಬಾಗಿ ಸಿಗಾರು ಹಚ್ಚಿದ. ಮಬ್ಬು ಬೆಳಕಿನಲ್ಲಿ ಮಸುಕು ಮಸುಕಾಗಿ ನಿಂತ ವ್ಯಕ್ತಿಯ ಮುಖ ಕಡ್ಡಿಯ ಬೆಳಕಿನಲ್ಲಿ ಸ್ಪಷ್ಟ ವಾಗಿ ಕಾಣಿಸಿತು. ನೋಡೆ, ಬಾಬಿ ಬಲ್ಲಾರ್ಡ್! ಓ, ಎಂತಹ ಆಶ್ಚರ್ಯ! ದೇಶವಿದೇಶಗಳ ಪರಿಶೋಧ ನಡೆಸಿದರೂ ಕಾಣಸಿಗದ ಚೋರ ಮಹಾಶಯ ಬಾಬಿ ಬಲ್ಲಾರ್ಡ್! ಅವನನ್ನುಹಿಡಿದುಕೊಟ್ಟವರಿಗೆ ಎಂಟು ಸಾವಿರ ಪೌಂಡುಗಳನ್ನು ಕೊಡುವುದಾಗಿ ಸರಕಾರ ಪ್ರಚುರ ಪಡಿಸಿತ್ತು.........ಹನ್ನೆ ರಡು ಮಾಸಗಳಿಂದ ಅವನಿಗಾಗಿ ಎಷ್ಟು ಶೋಧ ಮಾಡಲಿಲ್ಲ....? ಎಷ್ಟೇ ಪ್ರಯತ್ನ ಪಟ್ಟರೂ ಕಾಣಸಿಗದೆ ಮುಗಿಳ ಮಾಯವಾಗಿದ್ದ ವ್ಯಕ್ತಿ ಈಗೆಲ್ಲಿಂದ ಬಂದ.....? ತನ್ನ ಗುರುತು ಹತ್ತಿತೆಂದು ಈಗ ಸ್ವಲ್ಪ ತಿಳಿದರೂ ಸಾಕು, ಮತ್ತೆ ಕೈ ಕೊಟ್ಟಾನು !....ಸಿಕ್ಕಿದನಲ್ಲಾ. ಅದೇ ಪುಣ್ಯ ! ಒಂದೇ ಬಾರಿಗೆ ಎಂಟು ಸಾವಿರ ! ಇನ್ನೆಲ್ಲಿ ಮುಸಿ ಮುಸಿ ನಗುತ್ತಾಳೆ ಎಲಿನಾ ?

ಆನಂದೋತ್ಸಾಹದಲ್ಲಿ ಭಾವೋದ್ವೇಗದಲ್ಲಿ ಮೈ ತೆಕ್ಕನೆ ಬೆಚ್ಚಗಾಗಿ ಪುಳಕಿತವಾಯಿತು. ತಟ್ಟನೆ ಅವನ ಕೈಯನ್ನು ಅದುಮಿ ಹಿಡಿದ ಹೆನ್ರಿ. ಅರೆ ! ಅವನೆಲ್ಲಿ ? ಎಂತಹ ಆಶ್ಚರ್ಯ ? ಅವನು ಕೈಕೊಟ್ಟದ್ದಾದರೂ ಹೇಗೆ ? ಛೀ ! ಇದೇನು ಸಾಮಾನ್ಯ ಆಶ್ಚರ್ಯವೇ ಧಿಕ್ ಹೆನ್ರಿ !

ಒಮ್ಮೆಲೇ ಮೈಯ್ಯಲ್ಲಿ ನೂರ್ಮಡಿಯ ಚೇತನ ಜರ್ರನೆ ಇಳಿದು ಹೋಗಿ ಮೈಗೆ ತಣ್ಣೀರೆರೆಚಿದಂತೆ ತಣ್ಣಗಾಯಿತು. ಭಯಾಶ್ಚರ್ಯಗಳಿಂದ ಉಡುಗಿ ದಿಗ್ಮೂಢನಂತೆ ಜಡೀಭೂತನಾಗಿ ನಿಂತ ಹೆನ್ರಿ. ಭಯ ಭೀತಿ ಗಳಿಂದ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯಿತು. ಓಡಿ ಹೋಗೋಣವೇ ಎಂಬ ಯೋಚನೆ ಮೂಡುವುದರೊಳಗಾಗಿ ದೃಷ್ಟಿಯ ನೇರಕ್ಕೆ ಸಿಗಾರಿನ ಸಣ್ಣ ಬೆಂಕಿ ದೂರದೂರವಾಗಿ ಸರಿದು ಹೋಗುತ್ತಿರುವುದು ಸ್ಪಷ್ಟವಾಗಿ ಕಾಣಿಸಹತ್ತಿತು. ಆಳೆತ್ತರಕ್ಕೆ ಸರಿದು ಹೋಗುತ್ತಿರುವ ಆ ಕಿಡಿಯನ್ನು ನಿಟ್ಟಿಸುತಿದ್ದಂತೆಯೇ, ಕೇವಲ ಕೆಲವು ಕ್ಷಣಗಳೊಳಗಾಗಿ ಕೆಂಪು ಕಟ್ಟಡದ ಸಾಲು ಮೆಟ್ಟಿಲುಗಳನ್ನು ಅದೇ ವ್ಯಕ್ತಿ ಹತ್ತುತ್ತಿದೆ ! ಪೋರ್ಟಿಕೋದಲ್ಲಿ

ಉರಿಯುತಿದ್ದ ದೀಪದ ಬೆಳಕಿನಲ್ಲಿ ಅವನು ಸರಿಯಾಗಿ ಕಾಣಿಸಿದ. ಅದೇ ಅವನೇ ? ಓ....! ನಿಜವಾಗಿಯೂ ಅವನೇ ಬಾಬಿ ಬಲ್ಲಾರ್ಡ್ ! ಭಯ ಭೀತಿಗಳಿಂದ ಮೂರ್ತಿಮತ್ತಾಗಿ ನಿಟ್ಟಿಸಿದ ಹೆನ್ರಿ. ಮೆಲ್ಲನೆ–ಬಹು ಮೆಲ್ಲನೆ ಹೃದಯದ ನೆತ್ತರು ಹೆಪ್ಪುಗಟ್ಟುತ್ತಿರುವಂತೆ ಭಾಸವಾಯಿತು. ಆಪಾದ ಮಸ್ತಕವೂ ಜುಮುಜುಮುಗುಟ್ಟಿ ನಸು ಕಂಪನದ ಅಲೆ ವಿದ್ಯುಲ್ಲತೆಯಂತೆ ಹರಿದಾಡಿ ಹೋಯಿತು. ಮೈ ರೋಮಾಂಚಿತವಾಗಿ ಕಣ್ಣೆವೆ ಮಿಟುಕಿಸದೆ ಅತ್ತಲೇ ನಿಟ್ಟಿಸಿದ ಹೆನ್ರಿ. ಹತ್ತು ಹನ್ನೆರಡು ಮೆಟ್ಟಿಲುಗಳನ್ನು ಚಕಚಕನೆ ಹತ್ತಿ ಬಾಗಿಲ ಬಳಿ ಒಂದು ಘಳಿಗೆ ನಿಂತ ಬಾಬಿ. ಈಗ ದೀಪದ ನೆಲೆಯಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿದ್ದಾನೆ....ನಿಜವಾಗಿಯೂ ಬಲ್ಲಾರ್ಡ್ !

ಎಲಾ ಇವನಾ !

ಎಂತಹ ಚಾಣಾಕ್ಷ! ಇಂಗ್ಲೆಂಡಿನಲ್ಲಿ ಮಾತ್ರವಲ್ಲ; ದೇಶವಿದೇಶ ಗಳಲ್ಲೂ ಈತ ಪ್ರಸಿದ್ಧ, ಅಬ್ಬಬ್ಬ! ಇವನನ್ನು ಹಿಡಿಯುವುದು ಸಾಮಾನ್ಯ ವಲ್ಲ. ಇರಲಿ, ನಾನೂ ನೋಡಿಯೇ ಬಿಡುವೆ !

ಶೋಣವರ್ಣದ ಪ್ರಾಸಾದದ ಮುಚ್ಚಿದ ಬಾಗಿಲು ಮುಚ್ಚಿದಂತೆಯೇ ಇದೆ. ವ್ಯಕ್ತಿ ಮಂಗಳ ಮಾಯ !

ಅರರೆ ! ಅವನೆಲ್ಲಿ ಹೋದ ?

ಪ್ರಾಯಶಃ ಸ್ವಲ್ಪ ಮಟ್ಟಿಗೆ ಕದ ತೆರೆದು ಮುಚ್ಚಿರಬಹುದು. ನಾನು ಕಂಡುಕೊಳ್ಳಲಿಲ್ಲ ಅಷ್ಟೆ. ತೆರೆದು ಮುಚ್ಚಿದ ಕಾರ್ಯ ಬಹಳ ಸೂಕ್ಷ್ಮವಾಗಿ ನಡೆದಿದೆ. ನಾನೂ ಅಷ್ಟೇ ಸೂಕ್ಷ್ಮವಾಗಿ ಗಮನಿಸಿದ್ದರೆ ಜಾಣನಾಗಿರುತಿದ್ದೆ. ಆದರೂ....ಮನುಷ್ಯ ಬಹಳ ಸೂಕ್ಷ್ಮ....ಬಹಳ ಸೂಕ್ಷ್ಮ !

ಆಶ್ಚರ್ಯ.....ಪರಮಾಶ್ಚರ್ಯ !

ಹೆನ್ರಿ ಒಂದು ಘಳಿಗೆ ಸ್ಥಂಭೀಭೂತನಾದ. ತನುಮನಗಳು ನಿಷ್ಕ್ರಿಯೆ ಯಾದಂತೆ ಭಾಸವಾಯಿತು. ಆ ಹಿರಿಯ ಪ್ರಾಸಾದದೊಳಗಡೆ ದೀಪವಿದ್ದಂತೆ ತೋರಿಬರಲಿಲ್ಲ. ಸುತ್ತಮುತ್ತಿನ ಯಾವ ಕಿಟಕಿಯಲ್ಲಿಯೂ ಬೆಳಕು ಹರಿದಿರ ಲಿಲ್ಲ. ಹೆನ್ರಿಗೆ ಶಂಕೆಯ ಮೇಲೆ ಶಂಕೆ. ಆಶ್ಚರ್ಯದ ಮೇಲೆ ಆಶ್ಚರ್ಯ. ಮಂಜಿನ ವ್ಯಕ್ತಿಯನ್ನೂ ಸಹ ಉನ್ಮತ್ತಗೊಳಿಸುವಂತಿತ್ತು ಆ ಸನ್ನಿವೇಶ. ಪೋಲೀಸ್ ಠಾಣೆಗೆ ತಕ್ಷಣ ವಯರ್‌ಲೆಸ್ ಸುದ್ದಿ ಕಳುಹಿಸಿದ. ಕೆಲವೇ

ಕೆಲವು ನಿಮಿಷಗಳೊಳಗಾಗಿ ಪೋಲೀಸ್ ವ್ಯಾನು ಸದ್ದಿಲ್ಲದೆ ಬಂದು ನಿಂತಿತು. ಶಸ್ತ್ರ ಸಜ್ಜಿತ ಪೋಲೀಸರು ವ್ಯಾನಿನಿಂದ ಬುದು ಬುದು ಇಳಿದರು. ಹೆನ್ರಿ ಹಿಡಿದಿಟ್ಟಿದ್ದ ಉಸಿರನ್ನೆಲ್ಲಾ ಒಂದೇ ಬಾರಿಗೆ ಹರಿಯ ಬಿಟ್ಟು ಹಿರಿಯ ಕಟ್ಟಡದೆಡೆಗೆ ಕೈತೋರಿ,

"ಅಲ್ಲಿ.....!" ಉದ್ವೇಗದಿಂದ ಗಂಟಲು ಬಿಗಿಯಿತು.

"ಏನು ? ಏನು ? ?"

"ಬಾಬಿ!" ಹೆನ್ರಿ ಪಿಸುಗುಟ್ಟಿದ.

"ಯಾವ ಬಾಬಿ ?"

ಎಲ್ಲರೂ ಸುತ್ತುವರಿದು ಅದೇ ಪ್ರಶ್ನೆ ಹಾಕಿದರು "ಯಾವ ಬಾಬಿ ?"

"ಬಾಬಿ ಬಲ್ಲಾರ್ಡ್ !"

"ಬಾಬಿ ಬಲ್ಲಾರ್ಡ್.....?"

"ಹೌದು ಅವನೇ !"

"ಎಲ್ಲಿದ್ದಾನೆ ?"

"ಇದುವರೆವಿಗೂ ಇಲ್ಲೇ ಇದ್ದ."

"ಮತ್ತೇಕೆ ಹಿಡಿಯಲಿಲ್ಲ?"

"ಬಹಳ ಸೂಕ್ಷ್ಮದಲ್ಲಿ ತಪ್ಪಿಸಿಕೊಂಡ."

"ಎಲ್ಲಿ ಹೋದ ?"

"ಈಗ ಎಲ್ಲಿದ್ದಾನೆ ?"

ಎಲ್ಲರೂ ಸತ್ತುವರಿದು ಒಂದೇ ಬಾರಿಗೆ ಪಿಸುದನಿಯಲ್ಲಿ "ಎಲ್ಲಿ–ಎಲ್ಲಿ?"

"ಇಲ್ಲೇ ಈ ಕೆಂಪು ಕಟ್ಟಡದೊಳಗೆ."

ಹಲವಾರು ದನಿಗಳು ಒಮ್ಮೆಲೇ ಪಿಸುಗುಟ್ಟಿದುವು "ನಡೆಯಿರಿ, ಅದರ ಸುತ್ತಮುತ್ತ ಮುತ್ತಿಗೆ ಹಾಕೋಣ."

"ಹೂಂ ನಡೆಯಿರಿ"

"ಬೇಗ ಬೇಗ."

"ಹಾ ! ಸದ್ದು ಮಾಡಬಾರದು."

"ಓಡಿ, ಬನ್ನಿ. ಓಡಿ....ಓಡಿ."

ಎಲ್ಲರೂ ಗದ್ದಲ ಮಾಡದೆ ಕೆಂಪು ಕಟ್ಟಡದ ಸುತ್ತಮುತ್ತ ಮುತ್ತಿಗೆ

ಹಾಕಿದರು. ಪ್ರತಿ ಕಿಟಕಿ ಬಾಗಿಲುಗಳ ಬಳಿ ಕಾವಲು ಹಾಕಿದನಂತರ ಸಾರ್ಜೆಂಟ್ ಬೀಗದ ಕೈಗಳ ಗುಡಿಯೊಂದರ ಸಹಾಯದಿಂದ ಮುಂಬಾಗಿಲ ಬೀಗವನ್ನು ತೆರೆದ. ಒಳಗಡೆ ಕಗ್ಗತ್ತಲು ಕವಿದಿತ್ತು. ಸಾರ್ಜೆಂಟ್ ಬಲ ಗೈಯಲ್ಲಿ ಬಾರುಮಾಡಿದ ಪಿಸ್ತೂಲನ್ನೂ ಎಡಗೈಯಲ್ಲಿ ಪ್ರಕಾಶಮಾನವಾದ ಟಾರ್ಚನ್ನೂ ಹಿಡಿದುಕೊಂಡು ಮುಂದಡಿ ಇಟ್ಟ. ಮೈಯಲ್ಲಿ ಬಿಸಿ ಮೂಡಿ ನೆತ್ತರು ಜರ್‍ರನೆ ಹರಿದಾಡತೊಡಗಿತು.

ಮಧ್ಯೆ ಸುಸಜ್ಜಿತವಾದ ದಿವಾನ ಖಾನೆ. ಎಡಬಲಗಳಲ್ಲಿ ದೊಡ್ಡ ದೊಡ್ಡ ಕೊಠಡಿಗಳು. ಆಫೀಸಿಗೆ ಅವಶ್ಯಕವಾದ ಕುರ್ಚಿಮೇಜುಗಳು. ಹೆನ್ರಿ ಬಾರು ಮಾಡಿದ ಪಿಸ್ತೂಲಿನೊಡನೆ ಹಿಂಬಾಲಿಸಿ ಅಲ್ಲಲ್ಲೆ ಗೋಡೆಯಮೇಲಿನ ಸ್ವಿಚ್ಚುಗಳನ್ನು ಒತ್ತುತ್ತಾ ಬಂದ. ಕತ್ತಲಾವರಿಸಿದ್ದ ಮನೆ ಬೆಳ್ಳಂ-ಬೆಳಕಿನಿಂದ ತುಂಬಿತು. ಬಲ ಪಕ್ಕದ ಕೊಠಡಿಯಲ್ಲಿ ಹರವಾದ ಮೇಜಿನ ಮುಂದೆ ಕುಳಿತು ಬಾಬಿ ತಲೆಬಾಗಿ ಏನನ್ನೊ ಬರೆಯುತಿದ್ದಾನೆ !

ಎಲಾ ಇವನಾ !

ದೀಪವಿಲ್ಲದೆ ಬರೆಯುವುದೆಂತು ? ಎಂತಹ ಆಶ್ಚರ್ಯ ? ಹೊರಗಿನ ಕೊಠಡಿಗಳಲ್ಲಿ ದೀಪಗಳು ಇದ್ದಕಿದ್ದಂತೆ ಹತ್ತಿ ಕಣ್ಣು ಕುಕ್ಕುವ ಟಾರ್ಚಿನ ಬೆಳಕು ಒಳಗೆ ಹರಿದು ಬಂದರೂ ಸಹ ಅವನ ಗಮನಕ್ಕೆ ಬಂದಂತೆ ತೋರ ಲಿಲ್ಲ !

ಆಶ್ಚರ್ಯ.....ಪರಮಾಶ್ಚರ್ಯ !

ಮರಜೀವಿ—ಅಲ್ಲ—ನಿರ್ಜೀವಿ !

ಇಬ್ಬರೂ ಸದ್ದಿಲ್ಲದೆ ಒಳಗಡೆ ಅಡಿ ಇಟ್ಟರು. ಟಾರ್ಚಿನ ಬೆಳಕಿನಲ್ಲಿ ಆತ ಸ್ಪಷ್ಟವಾಗಿ ಕಾಣಿಸುತಿದ್ದಾನೆ. ನಿಜವಾಗಿಯೂ ಬಲ್ಲಾರ್ಡ್ ! ಅಪ್ಪಟ ಮಾಂತ್ರಿಕ ! ತಲೆಯೆತ್ತಿಯೂ ಸಹ ನೋಡಲಿಲ್ಲ. ಬಾಯಿಯಲ್ಲಿ ಸಿಗಾರು ಇನ್ನೂ ಉರಿಯುತ್ತಿದೆ. ಅತ್ತಿತ್ತ ಚಲಿಸದೆ ತದೇಕ ಚಿತ್ತದಿಂದ ಬರೆಯುತ್ತಲೇ ಇದ್ದಾನೆ, ಏನೆನ್ನಬೇಕೋ ಹೊಳೆಯುವುದಿಲ್ಲ. ಇದೇನಚ್ಚರಿಯೋ ಅರ್ಥ ವಾಗುತ್ತಿಲ್ಲ.....

ಬಾಬಿ ಬಲ್ಲಾರ್ಡ್ ಪೋಲೀಸರಿಗೆ ಅಗತ್ಯವಾಗಿ ಬೇಕಾಗಿದ್ದ ವ್ಯಕ್ತಿ. ಕೆಲವು ಬಾರಿ ಅಲ್ಲ ಇಲ್ಲಿ ಕಣ್ಣಿಗೆ ಬಿದ್ದು ತಪ್ಪಿಸಿಕೊಂಡಿದ್ದರೂ ಕಳೆದ

ವರ್ಷದಿಂದ ಯಾರ ಕಣ್ಣಿಗೂ ಬಿದ್ದಿರಲಿಲ್ಲ. ರಿಜರ್ವ್ ಬ್ಯಾಂಕಿನಲ್ಲಿ ಹಾಡ ಹಗಲೇ ದರೋಡೆಮಾಡಿ ಪೋಲೀಸರ ಕಣ್ಣಿಗೆ ಮಣ್ಣೆರಚಿ ಜಯಭೇರಿ ಹೊಡೆದವ. ಅಂದಿನಿಂದ ಇಂದಿನವರೆಗೆ ಪತ್ತೆಯೇ ಇರಲಿಲ್ಲ. ಇಂಗ್ಲೆಂಡಿಗೆ ಇಂಗ್ಲೆಂಡೇ ಅವನಿಗಾಗಿ ಪರಿಶೋಧಿಸುತಿತ್ತು.

ಇಬ್ಬರೂ ಹೊಸ್ತಿಲನ್ನು ದಾಟಿ ಮೇಜಿನ ಬಳಿಗೆ ಧಾವಿಸಿದರು.

"ಬಾಬಿ ಬಲ್ಲಾರ್ಡ್ !"

"ಹೌದು....ನಾನೇ !"

ಬಾಬಿ ಹುಬ್ಬೆತ್ತಿ ನೋಡಿದ. ಹುಣ್ಣಿಮೆ ಚಂದ್ರನ ಶೈತ್ಯಕ್ಕಿಂತಲೂ ಶೀತಲ ಭಾವ ಮುಖದಲ್ಲಿ ಮನೆ ಮಾಡಿತ್ತು....ಆರೆ! ಏನಾಶ್ಚರ್ಯ ? ಖಂಡಿತ ಜಾದೂಗಾರ ! ಪಳಗಿದ ವ್ಯಕ್ತಿ....!

"ನೀನೀಗ ನಮ್ಮ ಸೆರೆಯಾಳು ! ಒಂದು ಚಕಾರ ಎತ್ತಿದರೂ ನಿನ್ನನ್ನು ಇಲ್ಲೇ ಸುಟ್ಟುಬಿಡುವೆ ! ಎಚ್ಚರಿಕೆ ! !"

"ತಿಳಿದಿರು ಎಚ್ಚರಿಕೆ !"

ಬಾಬಿ ಲೇಖನಿಯನ್ನು ಮೇಜಿನ ಮೇಲಿಟ್ಟು ಸಿಗಾರನ್ನು ಒಂದು ದಮ್ ಎಳೆದ.

"ನನ್ನನ್ನು ಸೆರೆ ಹಿಡಿದು ನೀವೇನು ಮಾಡಬಲ್ಲಿರಿ ?"

"ಕಾದು ನೋಡು !"

"ಜಿಮ್ಮಿ ವಾಲ್ಕಾಟ್ !" ಹುಬ್ಬುಗಳನ್ನು ಗಂಟಿಕ್ಕಿ ಒಂದು ಘಳಿಗೆ ಯೋಚಿಸಿ ಬಾಬಿ ನುಡಿದ "ನಿಮಗೆ ಧೈರ್ಯವಿದ್ದರೆ-ಶಕ್ತಿಯಿದ್ದರೆ ಜಿಮ್ಮಿ ವಾಲ್ಕಾಟನನ್ನು ಹಿಡಿಯಿರಿ."

"ಮೊದಲು ನೀನು ! ಅನಂತರ ಅವನು !"

ಬಾಬಿ ಮಾತಾಡದೆ ಸಿಗಾರಿನ ಹೊಗೆಯನ್ನು 'ಫ್ರಫ್'ನೆ ಊದಿದ. ಮುಖಭಾವ ಕಿಂಚಿತ್ತೂ ಬದಲಾಗಲಿಲ್ಲ. ನೋಟ ತಾನು ಬರೆದ ಕಾಗದದ ಮೇಲೆ ಹೊರಳಿತು.

"ಈ ನಿಮಿಷದೊಳಗಾಗಿ ಅವನಿಲ್ಲಿಗೆ ಬರಲೇಬೇಕಾಗಿತ್ತು."

"ಯಾರು ?"

"ಜಿಮ್ಮಿ ವಾಲ್ಕಾಟ್ !"

"ಜಿಮ್ಮಿ ವಾಲ್ಕಾಟ್....ಇಲ್ಲಿಗೆ ?"

"ಹೌದು........"

"ನಿಜವಾಗಿ ....?"

"ಹೌದು."

"ಈಗ ಬರುತ್ತಾನೆಯೆ ?

"ಹೌದು."

ಬಾಬಿ ಗಡಿಯಾರದ ಕಡೆ ದಿಟ್ಟಿ ಹೊರಳಿಸಿದ.

"ಓ ....! ಇನ್ನು ಐದು ನಿಮಿಷಗಳಿವೆ ಅಷ್ಟರೊಳಗಾಗಿ ಅವನು ಬರಲಿಕ್ಕೂ ಸಾಕು. ನೀವು ಐದು ನಿಮಿಷ ಕಾದು ನೋಡುವುದು ಒಳ್ಳೆಯದು."

ಅರೆರೆ ! ಎಷ್ಟು ನಿರ್ದಯದಿಂದ ಎಷ್ಟು ಸಹಜ ಸಂಪತ್ತಿಯಿಂದ ನುಡಿಯುತಿದ್ದಾನೆ ! ದನಿಯಲ್ಲಿ ಮಂಜನ್ನೂ ಮೀರಿಸುವಂತಹ ತಂಪು ! ಐದು ನಿಮಿಷಗಳ ಗಡುವನ್ನು ಹೇಳಿ ತಪ್ಪಿಸಿಕೊಳ್ಳುವ ಹಂಚಿಕೆ ಇರಬಹುದೇ? ಅಬ್ಬಬ್ಬಾ ಈತ ಸಾಮಾನ್ಯನಲ್ಲ ! ಮಹಾ ಕಿಲಾಡಿ ! ಅಪ್ಪಟ ಕಳ್ಳ !..... ಈ ಸಲ ಇವನ ಜನ್ಮ ಜಾಲಾಡದಿದ್ದರೆ.....

ತಕ್ಷಣ ಸಾರ್ಜೆಂಟ್ ತೋಳು ಹಿಡಿದ. ಆ ಕಡೆಯಿಂದ ಹೆನ್ರಿಯೂ ನುಗ್ಗಿದ. ಅರೆ! ಅಲ್ಲೇನುಂಟು ? ಯಾರಿದ್ದಾರೆ ? ಬರಿ ಕುರ್ಚಿ! ಮೇಜಿನ ಮೇಲೆ ಬರೆದ ಕಾಗದ ಲೇಖನಿ !

ಮಾಟಗಾರ !

ಜಾದೂಗಾರ !

"ಆಗಲೂ ನನಗೆ ಕೈಕೊಟ್ಟದ್ದು ಹೀಗೆಯೆ !" ಹೆನ್ರಿ ಚೀರಿದ.

ಇಬ್ಬರ ಮುಖದ ಮೇಲೂ ಬೆವರಿನ ಹನಿಗಳು ತುಂತುರು ತುಂತುರಾಗಿ ಮೂಡಿದುವು. ಚಳಿಯಲ್ಲಿಯೂ ಮೈ ತೊಪ್ಪನೆ ತೊಯ್ಯಿತು. ಮುಖದಲ್ಲಿ ಭಯ ಭೀತಿಗಳ ಛಾಯೆ ದಿಟ್ಟವಾಗಿ ಸುಳಿದಳಿಯಿತು. ಇಬ್ಬರೂ ಪರಸ್ಪರ ಮಿಕಿಮಿಕಿ ನೋಡಿಕೊಂಡರು.

"ಏನಾಶ್ಚರ್ಯ !"

"ಈಗೇನು ಮಾಡೋಣ ?"

"ಮನೆಯನ್ನೆಲ್ಲಾ ನೋಡಿ ಬಿಡುವಾ,"

"ಎಲ್ಲಾದರೂ ಗುಪ್ತ ದ್ವಾರಗಳಿವೆಯೊ ಏನೋ."

"ಗುಪ್ತ ದ್ವಾರವೂ ಇಲ್ಲ ; ಏನೂ ಇಲ್ಲ. ಅಪ್ಪಟ ಜಾದೂಗಾರ !"

"ಆದರೂ ಬಿಡಬಾರದು !"

ಒಡನೆ ಇಬ್ಬರೂ ಪತ್ತೆಗೆ ಕೈ ಹಚ್ಚಿದರು. ಇಡೀ ಕೊಠಡಿ, ಸಂದಿಗೊಂದಿ, ಕೊನೆಗೆ ಇಡೀ ಮನೆ. ಎಲ್ಲಿ ಹುಡುಕಿದರೂ ಪತ್ತೆಯೇ ಇಲ್ಲ. ಇಬ್ಬರೂ ಜೇಸ್ತು ಬಿದ್ದು ಮಂಜಿನ ಮುದ್ದೆಯಂತಾಗಿ ಸೆಟೆದು ಮುಖ ಮುಖ ನೋಡುತ್ತಾ ನಿಂತರು. ನರನಾಡಿಗಳಲ್ಲಿ ರಕ್ತ ಸಂಚಾರ ಇಮ್ಮಡಿಯಾಗಿ ಹರಿದಾಡಿ ಹೃದಯ ದಡದಡನೆ ಮಿಡಿಯ ಹತ್ತಿತು.

ಹಾ....!

ಹೆನ್ರಿ ಕಾಗದವನ್ನು ಕೈಗೆ ತೆಗೆದುಕೊಂಡ. ಬರೆದ ಒಕ್ಕಣೆಯೇನೋ ಸ್ಪಷ್ಟವಾಗಿದೆ. ಆದರೆ ಅದಾವ ಲೋಕದ ಲಿಪಿಯೋ !

ಅಯ್ಯೋ, ದೇವರೇ !.....ಏನಿರಬಹುದು ?

ಪರಮಾಶ್ಚರ್ಯ!

ಇದೇನು ? ಮಾಯವೇ ಮಂತ್ರವೇ ? ಅಥವಾ ದೆವ್ವ ಪಿಶಾಚಿಯೆ?

ಏನಿದು ?

"ಒಂದುವೇಳೆ ದೆವ್ವ ಪಿಶಾಚಿಯಾಗಿದ್ದರೆ ನಮ್ಮನ್ನು ಸುಮ್ಮನೆ ಬಿಡುತಿತ್ತೆ ? ಛೀ ; ಛೀ ! ಏನೆಂಬುದನ್ನು ತಿಳಿದುಕೊಳ್ಳದೆ ಮುನ್ನುಗ್ಗಿದುದು ನಿಜವಾಗಿಯೂ ತಪ್ಪು."

"ಏನೇ ಇರಲಿ, ಎದೆಗುಂದುವುದೇಕೆ ? ಕೈಯಲ್ಲಿ ಪಿಸ್ತೂಲುಂಟು !"

"ಸರಿ, ಇನ್ನೊಮ್ಮೆ ನೋಡಿಯೇ ಬಿಡೋಣ. ಆದರೆ....ಈತನನ್ನು ಸಂಬುವುದೂ ಕಷ್ಟ. ಮರೆಯಲ್ಲಿ ನಿಂತು ನಮ್ಮಮೇಲೆ ಗುಂಡಿಕ್ಕಿದರೆ....!"

"ಅವನೊಬ್ಬ, ನಾವಿಷ್ಟುಮಂದಿ....ಅನಿಂದೇನಾದೀತು ?"

"ಆದರೂ....ಆತನ ವಿಚಿತ್ರ ರೀತಿಯನ್ನು ನೋಡಿದರೆ ಮೈ 'ಜುಂ' ಎನ್ನುತ್ತೆ."

ಆಶ್ಚರ್ಯಚಕಿತರಾಗಿ ಒಂದು ಘಳಿಗೆ ನಿಂತರು. ಒಳಗಿನ ಗಲಿಬಿಲಿಯನ್ನರಿತು ಹೊರಗಿದ್ದ ಸಿಪಾಯಿಗಳು ಒಳನುಗ್ಗಿ ಬಂದರು. ಎಷ್ಟು ಪರಿಶೋಧಿಸಿದರೂ ಹೊರಗಡೆ ಹೋಗಬಹುದಾದ ಯಾವ ಕಳ್ಳಗಂಡಿಯೂ ಇರಲಿಲ್ಲ. ಕಿಟಕಿಗಳಿಗಂತೂ ಬಿರಟೆ ಹಾಕಿ ಮುಚ್ಚಲಾಗಿದೆ.

ಅಂದಮೇಲೆ....?

ದುರ್ದಮ್ಯವಾದ ಉದ್ವೇಗದ ಸುಳಿಯಲ್ಲಿ ಸಿಕ್ಕಿ ಎಲ್ಲರೂ ಬೆಪ್ಪಾಗಿ ಸೊಪ್ಪಾಗಿ ಉಸಿರಿಡಿದು ನಿಂತರು. ಭಯಾಶ್ಚರ್ಯಗಳ ಮುದ್ರೆ ಮುಖದ ಮೇಲೊತ್ತಿತು. ಸಾರ್ಜೆಂಟನ ಅಪ್ಪಣೆಗಾಗಿ ಎಲ್ಲರೂ ಎದುರು ನೋಡಿದರು.

"ಮನೆಯೊಳಗೆ ಗುಪ್ತ ಕೊಠಡಿಗಳಿರಬಹುದೇ, ಹುಡುಕಿನೋಡಿ."

ಸುಮ್ಮನೆ ನಿಲ್ಲಲಾರದೆ ಮತ್ತೆ ಹುಡುಕಲು ಅಪ್ಪಣೆ ಮಾಡಿದ ಸಾರ್ಜೆಂಟ್.

ಹೆನ್ರಿ ಮಯಣದ ಬೊಂಬೆಯಂತೆ ನಿಂತ.

ಸಿಪಾಯಿಗಳು ಪುನಃ ಪತ್ತೆಗೆ ಕೈ ಹಚ್ಚಿದರು. ಈ ಸಲ ಮನೆಯನ್ನಷ್ಟೇ ಅಲ್ಲ; ಕುರ್ಚಿ ಮೇಜು ಹಾಸಿಗೆ ದಿಂಬುಗಳ ತಪಾಸಣೆಯೂ ನಡೆಯಿತು.

ಓಹ್ ! ಅವನೆಲ್ಲಿದ್ದಾನೆ ?

ಸಾರ್ಜೆಂಟ್ ಹೆನ್ರಿಯೊಡನೆ ಹೊರಬಾಗಿಲಿಗೆ ಬಂದ. ವಿಷಯ ಗಂಟಲ ಗಾಳವಾಯಿತು. ಇಪ್ಪತ್ತೈದು ವರ್ಷಗಳ ಸರ್ವಿಸಿನಲ್ಲಿ ಇದು ಮೊದಲನೆಯ ಸೋಲು ! ಭಾರೀ ಸೋಲು ! ಅಬ್ಬಬ್ಬಾ ! ಇವನು ಅಸಾಮಾನ್ಯ !

"ಎಂತಹ ಆಶ್ಚರ್ಯ ಹೆನ್ರಿ ?"

"ನಿಜವಾಗಿಯೂ ಬಹಳ ಆಶ್ಚರ್ಯ."

"ಪಕ್ಕಾ ಕಳ್ಳ....!"

"ಶ್ಶ್ ! ನಾವು ಸೋತೆವಲ್ಲ...."

"ಅವನ ಆ ಕಟು ಧೈರ್ಯ, ಆ ಪ್ರಶಾಂತ ಭಾವ ಮನುಷ್ಯ ಮಾತ್ರರಿಗೆ ಸಲ್ಲ...."

"ಛೀಃ ! ಎಂದೆಂದೂ ಇಷ್ಟೊಂದು ಬೇಸ್ತು ಬಿದ್ದಿರಲಿಲ್ಲ," ಎನ್ನುತ್ತ ಕೈ ಹಿಸಿಕಿಕೊಂಡ ಹೆನ್ರಿ.

ಇಬ್ಬರೂ ಮೆಟ್ಟಲಿಳಿದು ಅಂಗಳದ ಕಡೆಗೆ ಹಣಿಕಿದರು. ಕಗ್ಗತ್ತಲೆಯ ತೆರೆಯಲ್ಲಿ ಸಣ್ಣ ಬೆಂಕಿಯ ಕಿಡಿಯೊಂದು ನೆಲದಿಂದ ಆಳೆತ್ತರದಲ್ಲಿ ಸರಿದು ಹೋಗುತ್ತಿದೆ. ಅದನ್ನೋಡುತ್ತಲೂ ಹೆನ್ರಿ ಉದ್ರೇಕದಿಂದ ಪಿಸುಗುಟ್ಟಿದ. "ಅದೋ....ಅದೋ !"

"ಏನು ?....ಏನು ?"

"ಅಲ್ಲಿ ನೋಡು ಸಿಗಾರಿನ ಕಿಡಿ ! ಅದೇ ಅವನೇ !"

"ಎಲ್ಲಿ....ಎಲ್ಲಿ ?"

"ಅಲ್ಲಿ, ಅಲ್ಲಿ ! ನನ್ನ ಕೈ ನೇರಕ್ಕೆ ಸರಿಯಾಗಿ ನೋಡು !"

ಕಿಡಿಯ ಕಡೆಗೆ ಕೈ ತೋರಿದ ಹೆನ್ರಿ. ಕತ್ತಲೆಯಲ್ಲಿ ಕೈ ಕಂಪಿಸುತ್ತಿದ್ದು ದನ್ನು ಗಮನಿಸಲಿಲ್ಲ ಸಾರ್ಜೆಂಟ್. ಆತುರದಿಂದ ಕೇಳಿದ "ಎಲ್ಲಿ ? ಸರಿಯಾಗಿ ತೋರಿಸು."

"ಅದೋ ! ಅದೋ ! ರಸ್ತೆಯ ಬದಿಯಲ್ಲಿ....ಸಣ್ಣ ಕಿಡಿ ! ಮುಂದು ಮುಂದಕ್ಕೆ ಸರಿಯುತ್ತಿದೆ ಸರಿಯಾಗಿ ನೋಡು !"

"ಹೊಡಿ !"

ಠಳಾರ್ !

ಠ ಾರ್ !

ಪಿಸ್ತೂಲಿನ ಸದ್ದು ಕೇಳಿದೊಡನೆ ಒಳಗಡೆಯಿದ್ದ ಪೋಲೀಸರು ಧಾವಿಸಿ ಬಂದರು. ರಭಸದಿಂದ ಬಂದವರು ನೆಲದ ಮೇಲೆ ಬಿದ್ದಿದ್ದ ಹೆನ್ರಿ ಮತ್ತು ಸಾರ್ಜೆಂಟರನ್ನು ಎಡವಿ ಮುಗ್ಗರಿಸಿದರು. ಅವರೆಡೆಗೆ ಟಾರ್ಚ್ ಬೆಳಕನ್ನು ಹಾಯಿಸಿ ನೋಡಿದರೆ ಇಬ್ಬರೂ ಪ್ರಜ್ಞೆ ತಪ್ಪಿ ಬಿದ್ದಿದ್ದಾರೆ ! ಗುರಿ ಹಿಡಿದ ಕೈಗಳೆರಡೂ ಹಿಡಿದ ನೇರಕ್ಕೆ ಇವೆ ! ಗುರಿ ಇಟ್ಟ ಪಿಸ್ತೂಲುಗಳು ಹಾರಿವೆ ! ಆದರೆ, ಇವರು ಪ್ರಜ್ಞೆ ತಪ್ಪಿಬಿದ್ದುದೇಕೆ ? ಅದು ಎಲ್ಲರಿಗೂ ನುಂಗಲಾರದ ತುತ್ತು ; ಬಗೆಹರಿಸಲಾಗದ ಸಮಸ್ಯೆ.

ಆ ದುರ್ಭರ ಸನ್ನಿವೇಶದಲ್ಲಿ ಮನೆಗೆ ಬೀಗ ಹಾಕುವುದನ್ನು ಮರೆತು ಹೆನ್ರಿ ಮತ್ತು ಸಾರ್ಜೆಂಟರನ್ನು ಹೊತ್ತು ವ್ಯಾನಿಗೆ ಹಾಕಿದರು. ವ್ಯಾನನ್ನು ಹಿಂತಿರುಗಿಸಿ ನೇರರಸ್ತೆಗೆ ಹರಿಸುವಾಗ ಒಳಗಿದ್ದವರು ಚೀರಿದರು "ಅದೋ ! ....ಅದೋ !"

"ಎಲ್ಲಿ ?.....ಎಲ್ಲಿ....?"

ಹೆನ್ರಿ ದಡಕ್ಕನೆ ಎದ್ದ. ಒಣಗಿದ ತುಟಿಗಳನ್ನು ನಾಲಿಗೆ ಸವರಿತು. ದಡದಡ ಮಿಡಿಯುವ ಹೃದಯವನ್ನು ಎರಡು ಕೈಗಳಿಂದಲೂ ಒತ್ತಿ ಹಿಡಿದು ಕೊಂಡು ಒಂದೇ ಉಸಿರಿಗೆ ಕೇಳಿದ "ಎಲ್ಲಿ ? ಎಲ್ಲಿ ? ?"

"ಎಲ್ಲಿ....?"

ಸಾರ್ಜೆಂಟನೂ ಗಡಬಡಿಸಿ ಎದ್ದ. ಭಯ ಭೀತಿಯಿಂದ ನೆತ್ತರು

ಹೆಪ್ಪು ಗಟ್ಟಿದಂತೆ ಮುಖ ನಸುಗಪ್ಪು ತಳೆದಿತ್ತು.

ಕೆಂಪು ಪ್ರಾಸಾದದ ಸಾಲು ಮೆಟ್ಟಿಲುಗಳನ್ನು ಹತುತ್ತಿದ್ದ ಬಾಬಿ ಬಲ್ಲಾರ್ಡ್ ಸಿಗಾರಿನ ಬೆಂಕಿ ಕಿಡಿಯು ಹಿಂದೆ ಮುಸಕು ಮುಸುಕಾಗಿ ಕಣ್ಣಿಗೆ ಬಿದ್ದ. ಮೆಟ್ಟಿಲುಗಳನ್ನು ಹತ್ತಿ ದೀಪದ ನೆಲೆಗೆ ಅಡಿಯಿಟ್ಟಾಗ ಸ್ಪಷ್ಟವಾಗಿ ಕಾಣಿಸಿದ. ಒಡನೆ ಡ್ರೈವರ್ ಆಕ್ಸಿಲರೇಟರ್ ಒತ್ತಿದ ಭರದಲ್ಲಿ ನೂರಿನ್ನೂರು ಮೈಲಿಯ ವೇಗದಲ್ಲಿ ಓಡಿತು–ವ್ಯಾನು.

ಹೆನ್ರಿ ಅಚ್ಚರಿಯ ಕುಂಡದಲ್ಲಿ ಮುಳುಗೆದ್ದ.

ಸಾರ್ಜೆಂಟ್ ಭಯಾಶ್ಚರ್ಯಗಳಿಂದ ತತ್ತರಿಸಿ ಅಂದ "ಬಾಬಿ ಬಲ್ಲಾರ್ಡ್ ಎಂದೋ ಸತ್ತು ಹೋಗಿರಬಹುದು. ಇದು ಅವನ ಭೂತವೇ ಹೊರತು ಇನ್ನೇನೂ ಅಲ್ಲ !"

"ನಿಜ.....ನಿಜ." ಅನೇಕ ಧ್ವನಿಗಳು ಸಮರ್ಥಿಸಿದುವು.

"ಆತನಲ್ಲಿ ಇನ್ನೊಂದು ವಿಶೇಷವನ್ನು ಗಮನಿಸಿದಿರೇನು ?" ಕೇಳಿದ ಹೆನ್ರಿ.

"ಏನು....ಏನು ?"

ಈ ಚಳಿಗಾಲದಲ್ಲಿ ಆತ ಧರಿಸಿದುದು ಬೇಸಿಗೆ ಸೂಟು !"

"ಓ....ಹೌದು !"

"ಅವನು ಯಾವ ಸೂಟು ಧರಿಸಿ ಸತ್ತಿದ್ದನೋ ಅದರಲ್ಲೇ ಕಾಣಿಸಿ ಕೊಂಡಿದ್ದಾನೆ ! ಅದನ್ನು ತಿಳಿದುಕೊಳ್ಳಲಾರದ ನಾವು ಬೇಸ್ತು ಬಿದ್ದೆವು."

"ಓ....! ಸರಿ, ಸರಿ !"

"ಖಂಡಿತವಾಗಿಯೂ ಇದು ಬಾಬಿಯ ಭೂತ! ಇಲ್ಲದಿದ್ದಲ್ಲಿ ಈ ಚಳಿಯಲ್ಲಿ ಬೇಸಿಗೆ ಉಡುಪು ಧರಿಸಿರುವುದು ಸಾಧ್ಯವೇ ಇಲ್ಲ !"

"ನಿಜ ಕಣಯ್ಯಾ ; ನಿಜ," ಸಮರ್ಥಿಸಿದ ಸಾರ್ಜೆಂಟ್.

ಇಂದು ನಾನು ಸೋತರೂ ಎಲಿನಾ ಗೆದ್ದಿದ್ದಾಳೆ ಎಂದುಕೊಂಡ ಹೆನ್ರಿ.

ಆದರೂ, ಆ ಘಟನೆ ಸಮಸ್ಯೆಯಾಗಿಯೇ ಉಳಿಯಿತು.

— o —

# ನಯನತಾರಾದೇವಿ

ಅದೊಂದು ಸುಪ್ರಸಿದ್ಧ ಮನೆತನ.

ತಮಗೆ ಸರಿಸಮಾನರಾದ ಪ್ರಸಿದ್ಧ ಮನೆತನಗಳಲ್ಲಿ ವಿನಾ ಸಾಮಾನ್ಯ ರಲ್ಲಿ ಎಂದೂ ಸಂಬಂಧ ಬೆಳೆಸಿದವರಲ್ಲ. ಶಾಸ್ತ್ರ ಸಂಪ್ರದಾಯಗಳನ್ನು ಪೂರ್ಣಲಕ್ಷ್ಯವಿಟ್ಟು ಗಮನಿಸುವುದೂ ಹೆಚ್ಚು. ಸೃಷ್ಟಿಯ ಸತ್ಯ ಜಾಗೃತ ಜೀವನಗಳ ಬಾಂಧವ್ಯ ಆತ್ಮ ದೇಹಗಳಂತೆ ಎಂಬುದು ಅವರ ಮತ.. ಅದ ರಂತೆಯೇ ಜೀವನ ವಿಕಾಸ.....ಅಂತೆಯೇ ಆಚಾರ–ವ್ಯವಹಾರ.....

ಅವರ ನಿಲ್ದಾಣ ಗುಡ್ಡಗಾಡುಗಳ ಪ್ರದೇಶ. ಹಸುರ್ಗಟ್ಟಿದ ಆ ಪುಣ್ಯ ಪ್ರದೇಶದಲ್ಲಿ ಕಾಫಿ ಏಲಕ್ಕಿ ಟೀ ಹೇರಳವಾಗಿ ಬೆಳೆಯಲ್ಪಡುತ್ತದೆ. ಗುಡ್ಡ ಬೆಟ್ಟಗಳ ತಪ್ಪಲಿನಲ್ಲಿ ಬತ್ತ ರಾಗಿ ಸೊಂಪಾಗಿ ಬೆಳೆಯುತ್ತವೆ. ಎಷ್ಟೆಷ್ಟು ತಲೆ ಮಾರುಗಳಿಂದ ಆ ಫಲವದ್ಭರಿತ ಪ್ರಕೃತಿಯ ಮನಮೋಹಕ ನಲೆವೀಡು ಮನುಷ್ಯನ ವಶೀಭೂತವಾಗಿದೆಯೋ ದೇವರಿಗೇ ಗೊತ್ತು. ಬೇಸಗೆಯ ದಳ್ಳುರಿಯಲ್ಲೂ ಹಸುರು ಚೆಲ್ಲುತ್ತದೆ ವನಶ್ರೀ. ತನುಮನಗಳಿಗೆ ರಸೋ ಲ್ಲಾಸ ಬಯಸುವವರು ತಿಂಗಳಾನುಗಟ್ಟಲೆ ಈ ಸುಂದರ ನೆಲೆಯಲ್ಲಿ ನೆಲೆಸಿ ಕಾಯಕಲ್ಪಮಾಡಿಕೊಳ್ಳುವುದೂ ಉಂಟು ; ಪರಮಾನಂದದಿಂದ ದಿನ ಗಳೆಯುವುದೂ ಉಂಟು.

ಆ ಮನೆತನ ಎಷ್ಟು ಪ್ರಸಿದ್ಧವೋ ಅಷ್ಟೇ ಆ ಪ್ರದೇಶವೂ ಪ್ರಸಿದ್ಧ.

ಗೃಹಸ್ಥ ಮೇರುವಿನಂತೆ ಸ್ಥಿರ ಗಂಭೀರ. ಗೃಹಿಣಿ ಅರ್ಥಾತ್ ಭೂದೇವಿಯಂತೆ ಮಾತೃ ಸ್ವರೂಪಿಣಿ. ಪರಕಲ್ಯಾಣ ಕಾಮನೆ–ರಾಗಾತ್ಮಕ ಶ್ರದ್ಧೆ–ನಿರ್ಮಲಚಿತ್ತ–ಭಾವಾತ್ಮಕಹೃದಯ ಅವರ ಜೀವನವನ್ನು ಸಂವೇದನಾ ಶೀಲವನ್ನಾಗಿಸಿವೆ. ಹೃದಯ ಮಂದಿರದಲ್ಲಿ ಸಹಸ್ರ ಸ್ರೋತ ವಾಗಿ ಹರಿಯುವ ಗುಣವಿಶೇಷಗಳ ಸರಿತೆ ಬೇಸಿಗೆಯಲ್ಲಿ ಬತ್ತಿಹೋಗುವ ಹಳ್ಳದಂತಲ್ಲ–ಅನುಗಾಲವೂ ಹರಿಯುವ ಗಂಗಾ ಸಲಿಲ ನಿರ್ಝರಣಿಯಂತೆ.

ಪಂಚ ಪಾಂಡವರಂತೆ ಐದು ಮಂದಿ ಗಂಡು ಮಕ್ಕಳು ಸಾಲಾಗಿ ಜನಿಸಿದಾಗ ಕೇವಲ ಒಂದು ಹೆಣ್ಣು ಮಗುವಿಗಾಗಿ–ಎಲ್ಲಾ ಸಾಮಾನ್ಯ

ತಾಯಂದಿರಂತೆ ಆಸೆ ಪಟ್ಟಳು ಆ ಗೃಹಿಣಿ. ದಂಪತಿಗಳು ತೀರ್ಥಯಾತ್ರೆಕೈಕೊಂಡರು. ದೇವಾಲಯಗಳಲ್ಲಿ ನಂದಾದೀಪ ಕುಡಿಗಟ್ಟಿದಂತೆ ಉರಿಯಿತು. ಪೂಜೆ ಅರ್ಚನೆ ಇತ್ಯಾದಿಗಳೂ ಸಂಭ್ರಮದಿಂದ ನಡೆದುವು. ಹೃದಯಗಾನ ಮಧುರ ಗೀತೆಯನ್ನು ಹಾಡಿತು. ಅಂಗನೆ ಮಾತೃಭಾವದಿಂದ ಪುಳಕಿತಳಾದಳು.

ಆರನೆಯ ಗರ್ಭದಲ್ಲಿ ಆಕೆ ಬಯಸಿದಂತೆ ಅತ್ಯಂತ ಸುಂದರವಾದ ಹೆಣ್ಣು ಮಗು ಜನಿಸಿ ದಂಪತಿಗಳ ಹೃದಯ ತುಂಬಿ ಬಂದಿತು. ಸಂತಸ ಸಂಭ್ರಮಗಳನ್ನು ಕಂಠಪೂರ್ತಿ ಸವಿದು ಭಗವಂತನಿಗೆ ಆತ್ಮ ನಿವೇದನೆ ಮಾಡಿಕೊಂಡರು. ಬಂಧುವರ್ಗಕ್ಕೂ ಸ್ನೇಹವರ್ಗಕ್ಕೂ ಔತಣ ಕೂಟಾದಿಗಳು ಅತ್ಯಂತ ಸಂಭ್ರಮದಿಂದ ನಡೆದುವು. ಬ್ರಾಹ್ಮಣ ವರ್ಗಕ್ಕೆ ದಕ್ಷಿಣೆ ದಾನಾದಿಗಳೂ ಬಡವರ್ಗಕ್ಕೆ ಕಾಳು ಕಡ್ಡಿಗಳೂ ಹಂಚಲ್ಪಟ್ಟುವು. ಹಾಲು ಸಕ್ಕರೆಗಳೊಂದಾದಂತೆ ಸುಖ ಸಂತೋಷಗಳೊಂದಾದುವು.

ದಂಪತಿಗಳು ಆಗಾಗ್ಗೆ ಪ್ರೇಕ್ಷಣೀಯ ಸ್ಥಳಗಳಿಗೆ ಆರಾಮವಾಗಿ ಹೋಗಿ ಬರುವುದುಂಟು. ಹಾಗೆ ಹೋದಾಗ ತಮ್ಮ ಹಳೆಯ ಗೆಳೆಯನಾದ ನೇತ್ರವೈದ್ಯರನ್ನು ಸಂಧಿಸಿದರು. ಅವರು ಮಗುವಿನ ನೇತ್ರದ್ವಯಗಳನ್ನು ನೋಡಿ "ಮಗುವಿನ ಕಣ್ಣುಗಳು ಅಷ್ಟು ದೃಷ್ಟಿಯುತವಾಗಿಲ್ಲ. ಸ್ವಲ್ಪ ಕಾಲ ಕಾದು ನೋಡಿ" ಎಂದರು ಅತ್ಯಂತ ವಿಷಾದಪೂರ್ವಕವಾಗಿ.

ಒಮ್ಮೆಲೇ ದಂಪತಿಗಳ ಎದೆಯಾಳದಲ್ಲಿ ಹಾಹಾಕಾರವೆದ್ದಿತು.

ಆ ಸುಂದರ ನಯನಗಳಿಗನುಗುಣವಾಗಿ "ನಯನತಾರಾದೇವಿ" ಎಂದು ಹೆಸರಿಸಿದ ತಂದೆತಾಯಿಯರು ಈ ಮಗು ಹುಟ್ಟದಿದ್ದರೂ ಕೊರತೆ ಇರಲಿಲ್ಲ ಎಂಬಷ್ಟು ವ್ಯಥೆ ಗೀಡಾದರು. ವಂಶ ಪರಂಪರಾನುಗತವಾಗಿ ಆ ಮನೆತನದಲ್ಲಿ ಯಾರಿಗೂ ಅಂಧತ್ವ ಅಂದಿಂದಿಗೂ ಇದ್ದಿಲ್ಲವೆಂಬುದು ಸ್ಪಷ್ಟ ತಿಳಿದ ವಿಷಯ. ಗೃಹಣಿಯ ಮನೆತನವೂ ಅಪರಂಜಿಯಂತೆ ಚೊಕ್ಕ. ಆಕೆ ವರ ಲಕ್ಷ್ಮಿಯಂತಹ ಹೆಣ್ಣು. ಅಂದಮೇಲೆ ಮಗುವಿನ ಅಂಧತ್ವ ನುಂಗಲಾರದ ತುತ್ತಿನಂತಾಗಿ ಕಣ್ಣುಗಳ ಮೂಲ ದೋಷವನ್ನು ಯಾವ ಶಾಸ್ತ್ರದ ಅಳತೆ ಗೋಲೂ ಅಳೆಯಲಾರದಾಯಿತು.

ನೇತ್ರ ವೈದ್ಯರಿಂದ ನೇತ್ರ ವೈದ್ಯರಲ್ಲಿಗೆ ಅಲೆದಲೆದು ದಂಪತಿಗಳು

ಬೇಸತ್ತರು. ಅರ್ಥಾತ್, ಅಂಧತ್ವ ಪರಿಹಾರವಾಗದಿದ್ದರೂ ಮಗು ಸುಕೋಮಲವಾಗಿ ಬೆಳೆಯುತಿತ್ತು. ಮುದ್ದು ಮಾತುಗಳಿಂದ ಹೃದಯವನ್ನು ತಣಿಸುವುದು. ಚಿಂದುಟಗಳಲ್ಲಿ ತುಂಬಿ ಹರಿಯುವ ನಗುವಿನ ಲಹರಿ ಮನ ವನ್ನು ಅರಳಿಸುವುದು. ಆದರೆ, ಆ ದೃಷ್ಟಿರಹಿತ ಕಣ್ಣುಗಳು ಹೃದಯದ ನೆಲೆಗೆ ಈಟಿಯಿಂದ ಮತ್ತೆ ಮತ್ತೆ ಚುಚ್ಚಿಚುಚ್ಚಿ ಘಾಸಿಗೊಳಿಸುತಿದ್ದುವು.

ಅನೇಕ ದೇಗುಲಗಳ ಜೀರ್ಣೋದ್ಧಾರವು ನಡೆದಿದೆ ಸಾರೋದ್ಧಾರ ವಾಗಿ. ಅಂದಿಂದಿಗೂ ದೇವ ದೇವಿಯರ ಹೆಸರಿನಲ್ಲಿ ನಂದಾದೀಪಗಳು ಉರಿ ದಿವೆ ಉಜ್ವಲೋಜ್ವಲವಾಗಿ.

ಆದರೂ, ಕಣ್ಬೆಳಕು ಮೂಡಲಿಲ್ಲ. ಆಶಾ ಜ್ಯೋತಿ ಬೆಳಗಲಿಲ್ಲ.

ದಿನವೂ ಓಡಾಡಿದ ನೆನಪಿನಿಂದ ಮನೆಯಲ್ಲಿ ತಕ್ಕಮಟ್ಟಿಗೆ ನಡೆಯು ವಳು ; ಧ್ವನಿಯ ಮೂಲಕ ಅಣ್ಣಂದಿರನ್ನೂ ತಂದೆ ತಾಯಿಯರನ್ನೂ ಗುರು ತಿಸುವಳು: ಆಳುಗಳನ್ನೂ ಅರಿಯುವಳು. ಆಕೆಗೆ ಬಿಸಿಲು ಬರಿಯ ಬೆಚ್ಚಗೆ. ಹಾಲು ರುಚಿಯಾದ ಪಾನೀಯ. ಹೂಗಳು ಘಮಘಮಿಸುವ ವಸ್ತು. ತಾಯಿಯ ಅಕ್ಕರೆ ತನ್ನ ಮುಖದ ಮೇಲೆ ತಟತಟನೆ ಉದುರುವ ಕಂಬನಿ. ಕುರ್ಚಿ ಮೇಜುಗಳ ಆಕಾರವನ್ನು ಕೈಯಿಂದ ಮುಟ್ಟಿ ನೋಡಿ ಮನದಲ್ಲಿ ರೂಪಿಸಿಕೊಳ್ಳುವಳು. ಮನೆಯ ಕಾರು ತುಂಬ ಪ್ರಿಯವಾದ ವಸ್ತು. ಅದರ ಮೈಯನ್ನು ಮುಟ್ಟಿ, ಸುತ್ತು ಮುತ್ತೂ ಓಡಾಡಿ ಭಾಗ ವಿಭಾಗಗಳ ಪರಿ ಚಯ ಹೊಂದಿ, ನಿಯಂತ್ರಣವನ್ನು ಕೇಳಿ ತಿಳಿದುಕೊಳ್ಳುವಳು.

ಪರಂತು,

ಅವಳ ಅಂಧತ್ವ ಬಗೆ ಹರಿಸಲಾಗದ ಸಮಸ್ಯೆ ಮಾತ್ರವಲ್ಲ ; ಮುಂದೇನು ? ಎಂಬ ಸಮಸ್ಯೆಯೂ ಸಹ. ತಂದೆಗೆ ಅವಳ ಸ್ಥಿತಿಗತಿಯನ್ನು ಪರಾಂಬರಿಸುವುದೂ ಸಹ ಕಷ್ಟವೆನಿಸುತಿದ್ದುದರಿಂದ ಮಗುವಿನಿಂದ ಆದಷ್ಟು ದೂರವಿರುತ್ತಿದ್ದ. ಅದರಿಂದಾಗಿ ಅವಳಿಗೆ ಈಚೀಚೆಗೆ ತಂದೆಯ ದನಿಯ ಗುರುತು ಸಹ ಕಡಿಮೆ. ಅಣ್ಣಂದಿರು ಪಟ್ಟಣಕ್ಕೆ ಕಲಿಯಲು ಹೋಗಿದ್ದುದ ರಿಂದ ಅವರ ಬಳಕೆಯೂ ಕಡಿಮೆ. ಇನ್ನುಳಿದುದು ಸದಾ ತಾಯಿಯ ಸಹವಾಸ.

"ಅಮ್ಮಾ ಹಗಲು-ರಾತ್ರಿಗಳು ಹೇಗಿರುತ್ತವೆ ? ನಾವು ರಾತ್ರಿ ಮಾತ್ರ

ಮಲಗುವುದೇಕೆ ?"

ಈ ಸಮಸ್ಯೆಗಳನ್ನೆಲ್ಲಾ ಬಿಡಿಸುವವಳು ತಾಯಿಯೇ.

ಆಕಾರ–ನಿರಾಕಾರ, ರೂಪ–ಕುರೂಪ, ದೂರ–ಹತ್ತಿರ, ಕಪ್ಪು–ಬಿಳುಪು, ಗಿಡ–ಮರ, ಪ್ರಾಣಿ–ಪಕ್ಷಿ ಇವೆಲ್ಲಾ ಅವಳಿಗೆ ಬಿಡಿಸಲಾಗದ ಸಮಸ್ಯೆಯಾದರೆ ತಾಯಿಗೆ ಬಣ್ಣಿಸಲಾಗದ ಸಮಸ್ಯೆಗಳು.

ಮುಖ್ಯವಾದ ಇನ್ನೊಂದು ವಿಶೇಷವೆಂದರೆ ಅವಳ ಕಣ್ಣುಗಳು ಅಂದಗೆಡದೆ ದೃಷ್ಟಿಯುತವಾದವುಗಳಂತೆಯೇ ಉಳಿದುದು. ಆ ಪದ್ಮಲೋಚನಗಳ ಚಿದಂಬರ ರಹಸ್ಯ ನೇತ್ರವೈದ್ಯರಿಗೆ ವಿಚಿತ್ರ ಸಮಸ್ಯೆ. ಆದರೂ, ಒಂದಲ್ಲ ಒಂದು ದಿನ ಆ ತೇಜೋಮಯವಾದ ಕಣ್ಣುಗಳಿಗೆ ದೃಷ್ಟಿ ಬರಬಹುದು ಎಂದು ದೃಢವಾಗಿ ಅಭಿಪ್ರಾಯ ಪಟ್ಟರೂ ಎಂದು ? ಹೇಗೆ ? ಎಂಬುದು ಸ್ವತಃ ಅವರಿಗೂ ತಿಳಿಯಲಾಗದ ವಿಷಯ. ಹಾಗೆಂದರೂ....ಯಾವುದಾದರೂ ಕಠಿಣತಮವಾದ ಔಷಧವನ್ನು ಪ್ರಯೋಗಿಸಲು ಮನಸ್ಸು ಬಾರದಷ್ಟು ಸೂಕ್ಷ್ಮವಾಗಿವೆ ಅವು.

ಆ ಸುಪ್ರಸಿದ್ಧ ಮನೆತನದಲ್ಲಿ ಐಶ್ವರ್ಯದ ಮಹಾಕೋಟೆಯೊಳಗೆ ಆ ಬಾಲೆ ಕೇದಗೆಯಂತೆ ಕಮನೀಯ ಕಠೋರ.....ಶಿಲಾಬಾಲಿಕೆಯಂತೆ ಮಧುರ ಶೈತ್ಯ....ತಾಯಿಗೆ ಹಗಲಿರುಳೂ ಅವಳದೇ ಚಿಂತೆ. ಆಕೆಯ ಸಂತಸದ ದಿನಗಳು ಅಂದಿಗೇ ಅಳಿದುವು. ಯಾರ ಮೊರೆಗೂ ಉತ್ತರ ಕೊಡದಿರುವಂತೆ ತನ್ನ ಆರ್ತಮೊರೆಗೂ ಆ ಕಾಣದ ಭಗವಂತ ಉತ್ತರ ನೀಡಲಿಲ್ಲ. ಎಲ್ಲರೂ ಕೈಬಿಟ್ಟಮೇಲೆ ತಾನೇ ತಾನಾಗಿ ಯೋಚನೆಯ ಕರಾವಳಿಯಲ್ಲಿ ಎಷ್ಟೋ ದೂರ ಸಾಗಿದರೂ ಕಂಬನಿಯ ಕಾಣಿಕೆ ನೀಡುವುದೇ ವಿನಾ ಬೇರೆ ದಾರಿಯೇ ಇಲ್ಲ ಎಂಬುದನ್ನು ಆ ಶಾಂತಮೂರ್ತಿಯಾದ ತಾಯಿ ಕಂಡುಕೊಂಡಳೇನೋ..... ಆದರೆ, ಆಟ ಪಾಠಾದಿಗಳಲ್ಲಿ ನಿಮಗ್ನರಾದ ಅಣ್ಣಂದಿರಿಗೆ ಈ ಜಗತ್ತಿನ ಪರಿವೇ ಇಲ್ಲ.

ಈಗೀಗ ಪ್ರೇಕ್ಷಣೀಯ ಸ್ಥಳಗಳಿಗೆ ಹೋಗುವುದೆಂದರೂ ದಾರುಣ ಸಂಕಟ. ರಜೆಗೆ ಮನೆಗೈತಂದ ಮಕ್ಕಳು ನಲಿದಾಡಿ ಕುಣಿದಾಡುವುದನ್ನು ನೋಡುವಾಗ ಸಂತಸವಾಗುವ ಬದುಲು ಎಲ್ಲೋ ಒಂದೆಡೆ ಕುಳಿತಿರುವ ಮಗಳ ಕಹಿ ನೆನಪು ಸಂಕಟ ಮೂಡಿಸುತ್ತದೆ. ಮನದಲ್ಲೇ ಕಹಿ ಸಿಹಿಯನ್ನು

ಣ್ಣುವಳು ತಾಯಿ.

ಪ್ರಸ್ತುತ,

ಬಾಲ್ಯದಂಚನ್ನು ದಾಟಿದ ಅವಳು ತೆಳುವಾದರೂ ಎತ್ತರವಾಗಿ ಸುಕೋಮಲವಾಗಿ ಬೆಳೆಯುತಿದ್ದಳು. ಅವಳ ಬುದ್ಧಿ ಬಲು ಚುರುಕು. ಶಾಸ್ತ್ರೀಯ ಸಂಗೀತದಲ್ಲಿ ತುಂಬ ಆಸಕ್ತಿ. ಕೊಳಲು, ಪಿಟೀಲು, ಸಿತಾರ, ಪಿಯಾನೋ ಮೊದಲಾದ ವಾದ್ಯಗಳನ್ನು ಧ್ವನಿಯ ಮುಖೇನ ಗರುತಿಸುವಳು. ದೇವರನಾಮ ಮೀರಾ ಭಜನೆಗಳು ಅವಳ ಮೆಚ್ಚಿನ ಗೀತೆಗಳು. ವೀಣೆ ನುಡಿಸುವುದರಲ್ಲಿ ಆಸಕ್ತಿ. ಮದ್ದಲೆ ಡಮರುಗಳನ್ನು ಬಾರಿಸುವುದು ಸಹ ಅವಳಿಗೆ ತಿಳಿಯುತ್ತದೆ. ವೀಣೆಯನ್ನು ಬದಿಗಿಟ್ಟಾಗ ಕೈಯನ್ನು ಟ್ರಾನ್ಸಿಸ್ಟರ್ ಅಲಂಕರಿಸುತ್ತದೆ. ಅದರಿಂದ ಪ್ರಸಾರವಾಗುವ ಸಕಲಸಾರವನ್ನೂ ಮೈದುಂಬಿಕೊಳ್ಳುವಳು. ಸಾಹಿತ್ಯದಲ್ಲೂ ಒಳ್ಳೆಯ ಅಭಿರುಚಿ. ನಾನಾ ದೇಶದ ಕಾದಂಬರಿಗಳನ್ನು ಓದಿಸಿ ಕೇಳಿ ಆಯಾ ದೇಶದ ಸಂಸ್ಕೃತಿಯನ್ನು ಮನನ ಮಾಡುವುದಲ್ಲಿ ಆಕೆ ಮುಂದು.........ಅದರಿಂದ ಅವಳ ಭಾವನೆಗಳು ಬಲು ಸೂಕ್ಷ್ಮವಾಗಿ ಬೆಳೆಯಹತ್ತಿದುವು. ಒಳ್ಳೆಯ ಸಹವಾಸ, ರುಚಿಕರವಾದ ಖಾದ್ಯ, ತಣ್ಣನೆಯ ಪಾನೀಯ, ಮೃದುಮಧುರ ಹಾಸ್ಯ ಹೃದಯ ತುಂಬಿ ಹೊರ ಸೂಸುವ ಸುವಾಣಿ, ಇವುಗಳನ್ನು ಆತ್ಮಾನಂದದಿಂದ ಅನುಭವಿಸುತ್ತಾಳೆ. ತನ್ನಲ್ಲಿರುವ ಕುಂದು—ಇನ್ನೆಂದೂ ಸರಿ ಹೋಗದ ಕುಂದು ಎಂಬುದು ಮನಸ್ಸಿಗೆ ಅತೀವ ನೋವನ್ನುಂಟುಮಾಡಿದೆ. ಆದರೂ, ತಾನನುಭವಿಸುವ ಕಠೋರತಮವಾದ ಏಕಾಂತದುಃಖವನ್ನು ಬದಿಗಿಟ್ಟಾಗ ಅವಳು ಪೂರ್ಣಸುಖಿ.

ವರ್ಷೇ ವರ್ಷೇ ಅದ್ದೂರಿಯಿಂದ ಅವಳ ಹುಟ್ಟು ಹಬ್ಬಗಳನ್ನು ತಾಯಿ ಆಚರಿಸುತ್ತಾಳೆ. ಆ ಆಚರಣೆಯಲ್ಲಿ ಸುಖದುಃಖಗಳೆರಡೂ ನಲಿದಾಡುತ್ತವೆ. ಈಚೀಚೆಗೆ ಇವಳಿಗೆ ಅದು ಅಷ್ಟಾಗಿ ಸೇರುತ್ತಿಲ್ಲ. ಹೆಚ್ಚು ಮಂದಿ ಕೂಡುವ ಯಾವ ಉತ್ಸವವೂ ಬೇಡವೆನ್ನಿಸುತ್ತದೆ. ಸಂಜೆಯ ತಂಪು ಹೊತ್ತಿನಲ್ಲಿ ಗಾಳಿ ಸವಾರಿಗೆ ಹೋಗುವಾಗ ಜನ ನಿಬಿಡವಾದ ಸ್ಥಳಗಳಿಗೆ ಹೋಗುವುದೂ ಸಹ ಇಷ್ಟವಿಲ್ಲ. ಒಮ್ಮೊಮ್ಮೆ ಸಮುದ್ರ ತೀರಕ್ಕೆ ಹೋಗಿ ಬರುವುದು ಉಂಟು. ಅಲ್ಲಿಯ ಹವ, ಸಮುದ್ರದ ಮೊರೆತ, ಅಲೆಗಳೊಡನೆ ಚೆಲ್ಲಾಟ ಬಹಳವಾಗಿ

ಹಿಡಿಸುತ್ತವೆ. ಮೀನಿಗಾಗಿ ಹೊಂಚು ಹಾಕಿ ಅಲೆಗಳಿಗೆರಗುವ ಪಕ್ಷಿಗಳಿಂ ಚರವೂ ರೆಕ್ಕೆಗಳ ಪಟಪಟ ಸದ್ದೂ ಮನಸ್ಸಿಗೆ ಹಿತವನ್ನುಂಟುಮಾಡುತ್ತವೆ. ಅಲ್ಲಿ ಊಟ ನಿದ್ರಾದಿಗಳ ಗೊಡವೆಯೂ ಅವಳಿಗೆ ಬೇಕಿರುವುದಿಲ್ಲ. ಬಹಳ ಮಟ್ಟಿಗೆ ಅವಳ ಬಳಿ ತಾಯಿ ಇರುತ್ತಾಳಾದರೂ ಅವಳಿಗಾಗಿಯೇ ಒಬ್ಬ 'ನರ್ಸ್' ಇದ್ದಾಳೆ. ಅನಪೇಕ್ಷಿತವೂ ಅನುಚಿತವೂ ಅಗಣಿತವೂ ಆದ ಈ ದುಃಖದಲ್ಲಿ ಅವರಿಬ್ಬರೂ ಸಂಪೂರ್ಣ ಭಾಗಿಗಳು.

ದುರ್ವಾಸನೆ, ದುಶ್ಚಟ, ದುಸ್ಸಹವಾಸ, ಸದ್ದು ಗದ್ದಲಗಳ ಗಡಸು ಅವಳಿಗೆ ಸೇರದು. ಹಾಗೆಂದು ಏಕಾಂತ ಜೀವನವೂ ಅವಳಿಗೆ ಭಯ ಮೂಡಿ ಸುತ್ತದೆ. ಮನುಷ್ಯ ಜನ್ಮ ಅಪೂರ್ವವಾದುದೆಂದು ಕೇಳಿ ತಿಳಿದಿದ್ದಾಳೆ. ಬೆಕ್ಕು, ನಾಯಿ, ಬಿಳಿ ಮೊಲ, ಸಣ್ಣ ಪುಟ್ಟ ಕರುಗಳು, ಸಾರಿಕೆ, ಪಾರಿವಾಳಗಳನ್ನು ಅಕ್ಕರೆಯಿಂದ ಮೃದುವಾಗಿ ಮುದ್ದಿಸುತ್ತಾಳೆ. ತಾನು ಪ್ರವಾಸ ಹೋಗು ವೆಡೆಗಳಲ್ಲೆಲ್ಲಾ ಅವು ತನ್ನ ಬಳಿ ಇರಬೇಕೆಂಬ ಅತ್ಯಂತ ಉತ್ಕಟ ಅಪೇಕ್ಷೆ ಯನ್ನು ವ್ಯಕ್ತಪಡಿಸುತ್ತಾಳೆ. ಅದರಂತೆಯೇ ನಾಯಿ, ಬೆಕ್ಕುಗಳೂ ಅವ ಳೊಂದಿಗೆ ಪ್ರವಾಸ ಕಾಲದಲ್ಲಿ ಭಾಗವಹಿಸುವುದುಂಟು.

"ಇನ್ನೂ ಎಷ್ಟು ದಿನ ಹೀಗೆ ಮಾಯಿ ? ನೀವೆಲ್ಲ ನೋಡುತ್ತೀರಿ– ಮಾಡುತ್ತೀರಿ ? ನನ್ನಿಂದ ಏನೂ ಆಗದಲ್ಲಾ....?" ಎಂದು ಅತ್ಯಂತ ಖಿನ್ನ ಮುಖಿಯಾಗಿ ಕೇಳುವ ಮಗಳಿಗೆ ನಿಡುಸುಯ್ಯುತ್ತಾ "ದೇವರಿದ್ದಾನೆ ಮಗೂ." ಎನ್ನುವಳು ತಾಯಿ. ಹೃದಯ ದ್ರವಿತ ಮೇಘದಂತಾಗುವುದು. ಹಾಗೆಂದು ಆ ದಾರುಣ ಸಂಕಟವನ್ನು ತೋರಿಕೊಳ್ಳುವುದೂ ಸಹ ಇಷ್ಟ ವಾಗದು.

ಆಗ, ಆ ಮೊದಲ ದಿನಗಳಲ್ಲಿ, ಅಂದಿನ ನೇತ್ರ ವೈದ್ಯರ ಕಟು ಭರವಸೆ ಯಲ್ಲಿ ಎಂದಾದರೂ ದೇವರು ಕಣ್ಣಿಗೆ ಬೆಳಕು ನೀಡಿಯಾನೇನೋ ಎಂಬ ದೂರದಾಸೆ ತನ್ನಲ್ಲಿ ಉಳಿದಿತ್ತಾದುದರಿಂದ "ದೇವರಿದ್ದಾನೆ ಮಗೂ!" ಎನ್ನುವುದು ಅಭ್ಯಾಸವಾಗಿತ್ತು. ಆದರೆ....ಈಗ.....?

ಇಂದಿನ ಪರಿಸ್ಥಿತಿಯಲ್ಲಿ ಭವಿಷ್ಯವನ್ನು ನೆನೆಯುವುದೂ ಸಹ ಪರಮ ದುಃಖ. 'ದೇವರಿದ್ದಾನೆ' ಎಂಬ ಅಭ್ಯಾಸ ಬಲವೂ ಕುಗ್ಗುತ್ತಾ ಬಂದಿದೆ. ಈಗೀಗ ದೇವರಿಗೆ ಹರಕೆ ಹೇಳುವ ಮತ್ತು ಹರಕೆ ಸಲ್ಲಿಸುವ ವಿಚಾರಗಳಲ್ಲೂ

ಆಸಕ್ತಿ ಕಡಿಮೆ.... ಭಗವಂತನು ಸಕಲ ಸೌಭಾಗ್ಯವನ್ನೂ ಕೊಟ್ಟು ಜೀವನ ಪರ್ಯಂತ ಅನುಭವಿಸುವ ದುಃಖವನ್ನೂ ಸಹ ಕೊಟ್ಟನೇಕೆ ಎಂಬುದೂ ಸಹ ಆ ಸುಮಂಗಳೆಗೆ ಅರ್ಥವಾಗದ ವಿಷಯ.....ಅನುಭವಿಸಲಾಗದ ದುಃಖ....

ಬಾಲಕಿ ಸುಕೋಮಲವಾಗಿ ಬೆಳೆದು ಕೌಮಾರ್ಯದಂಚನ್ನು ದಾಟಿದಳು. ಕಣ್ಣಿಗೆ ಕಪ್ಪು ಕನ್ನಡಕ ಹಾಕಿ ಕೂದಲು ತಿದ್ದಿಕೊಂಡು ನಿಂತರೆ ಇನ್ನೊಮ್ಮೆ ನೋಡೋಣವೆನ್ನಿಸುವಂತಹ ಆಕರ್ಷಣೀಯತೆ ಇದೆ. ಮಾಟವಾದ ಮೈಗೆ ಸುಂದರವಾದ ಮುಖ. ಗುಂಗುರು ತುಂಬಿದ ಕಪ್ಪನೆಯ ದಟ್ಟವಾದ ಕೂದಲ ರಾಶಿ. ಒಂದೊಂದನ್ನೂ ನಿಷ್ಠೆಯಿಂದ ಸೃಷ್ಟಿಸಿದ ಸೃಷ್ಟಿಕರ್ತ ಆ ಕಣ್ಣುಗಳನ್ನು ಮರೆತನೇಕೊ....?

ಅವಳು ಎಷ್ಟೇ ಗಟ್ಟಿ ಮನಸ್ಸು ಮಾಡಿಕೊಂಡರೂ ಒಮ್ಮೊಮ್ಮೆ ಸ್ಥಿಮಿತ ತಪ್ಪುವುದು. ಇನ್ನೇಕೆ ಬದುಕು ಎಂಬ ಅಸಡ್ಡೆಯೂ ಮೂಡುವುದು. ಅಂತಹ ಪರಿಸ್ಥಿತಿಯಲ್ಲಿ ಸಮುದ್ರ ತೀರದಲ್ಲಿ ಅಡ್ಡಾಡುವುದು ಅವಳಿಗೆ ಬಹಳ ಇಷ್ಟ. ಅದು ವಿನಾ ಮತ್ತಾವುದೂ ಅವಳಿಗೆ ಸಮಾಧಾನ ನೀಡದು. ಆ ಜಲ ರಾಶಿಯ ಮಂಜುಳಗಾನ, ತುಹಿನ ರಾಶಿಯ ತುಂತುರು ಹನಿಗಳಲ್ಲಿ ವಿಹಾಯ ಬಯಸುವ ಖೇಚರಗಳ ಮೃದು ಮಧುರಗಾನ, ಸಾಗರಾನಿಲ ತೀಡಿ ತರುವ ತಣ್ಪು ಕದಡಿ ಬಗ್ಗಡವಾದ ಬಗೆಗೆ ಸಮಾಧಾನವನ್ನೀಡಿ ಹರ್ಷವನ್ನೂಡಿಸುವುದು. ಅಲ್ಲೇ ತಾಸು ಗಟ್ಟಲೆ ದಿನಗಟ್ಟಲೆ ಒಮ್ಮೊಮ್ಮೆ ವಾರಗಟ್ಟಲೆ ಕಳೆದು ಸುಂದರ ತೋಟಕ್ಕೆ ಹಿಮ್ಮರಳುವಳು.

ಬೆಟ್ಟದ ಮೇಲಿನ ಆ ಮನೋಹರ ವಾಸದ ಬಂಗಲೆಯಲ್ಲಿ ಅವರ ವಾಸ. ಬೆಟ್ಟದ ಇಳಿಜಾರು ಪ್ರದೇಶದಲ್ಲಿ ಹಸುರು ಸೂಸುವ ಕಾಫಿ ಟೀ ಏಲಕ್ಕಿಗಳ ತೋಟ. ನೂರು ನೂರು ನೂರು ಎಕರೆಗಳವರೆಗೂ ಹಬ್ಬಿದೆ ಆ ಸಸ್ಯ ಶ್ಯಾಮಲ ಘನ ವಿಸ್ತೀರ್ಣ. ಸುತ್ತ ಮುತ್ತಿನ ಸುಂದರ ಪ್ರದೇಶವೆಲ್ಲಾ ಚಿತ್ರಕಾರನ ಕುಂಚಕ್ಕಾಗಿಯೇ ಮೈಯಾಂತು ನಿಂತಂತಿದೆ. ಪ್ರಕೃತಿಯೈಸಿರಿಯ ವಸ್ತು ವಸ್ತುವೂ ಕವಿಸೀಯ ಕಾವ್ಯಲಹರಿಗೆ ಗ್ರಾಸವಾಗುವಂತಿವೆ. ಆದರೂ, ಅವಳಿಗೆ ಆದ ಪರಿಚಯ ಇಷ್ಟೆ, ಬೆಳಗಿನ ತಂಪು ಹವೆ; ಮಧ್ಯಾಹ್ನದ ಸುಡು ಹವೆ.

ಕಾಲ ಚಕ್ರವುರುಳಿ ತಾರುಣ್ಯದ ವೇದಿಕೆಯನ್ನೇರಿ ಕಮನೀಯ ಕಾಂತಿಯಿಂದ ವಿಜೃಂಭಿಸಿದಾಗ ಬ್ರಹ್ಮನ ರಾಣಿಯಂತೆ ಕಣ್ಗೆಸೆದಳು ತರುಣಿ. ಇಪ್ಪತ್ತೆರಡು ವಸಂತಗಳ ಸೊಂಪನ್ನುಂಡು ಕೋಮಲವಾದರೂ ಸದೃಢವಾಗಿ ಬೆಳೆದಳು. ಓದು–ಬರೆಹ ಕಲಿಯುವ ಗೋಜನ್ನು ಬದಿಗಿಟ್ಟು, ಇಂದಿನ ಪ್ರಾಪಂಚಿಕ ವ್ಯಾಪಾರದಲ್ಲಿನ ಅನೇಕ ಆಶ್ಚರ್ಯಕರ ವಿಷಯಗಳನ್ನೂ, ಭೂ, ಜಲ, ವಾಯು, ಗಗನಗಳಲ್ಲಿ ಮಾನವ ಹಾರಿಸಿದ ವಿಜಯ ಪತಾಕೆಯನ್ನೂ, ಮಾನವ ಶಕ್ತಿಯ ಪ್ರಾಗಲ್ಭ್ಯವನ್ನೂ ಮನನ ಮಾಡಿಕೊಂಡಿದ್ದಾಳೆ. ಇಷ್ಟಾದರೂ ತನ್ನ ದೃಷ್ಟಿ ಮನುಷ್ಯ ಪ್ರಯತ್ನಕ್ಕೆ ಮೀರಿತೇ ಎಂಬುದೂ ಸಹ ಅಳಿಯಲಾಗದ ಸಮಸ್ಯೆ ; ಭರಿಸಲಾಗದ ದುಃಖ.

ಅನೇಕ ಸುಪ್ರಸಿದ್ಧ ನೇತ್ರವೈದ್ಯರು ಈಚೆಗೆ ಅವಳ ಕಣ್ಣುಗಳನ್ನು ಪರೀಕ್ಷಿಸಿ ಇದು ಮನುಷ್ಯ ಪ್ರಯತ್ನಕ್ಕೆ ಮೀರಿದೆಯೆಂದು ವರದಿ ಮಾಡಿದರು. ಎಷ್ಟೋ ಬಾರಿ ಅತಿ ಕ್ಲಿಷ್ಟಕರವಾದ ಪರೀಕ್ಷೆಗೂ ಒಳಗಾಗಬೇಕಾಯಿತು. ಆದರೂ, ಫಲಪ್ರದವಾಗದೆ ಇದ್ದ ಒಂದು ಆಶಾಕಿರಣವೂ ನಂದಿ ಹೋಯಿತು. ಅನೇಕ ಬಾರಿ ಮೇಲಿಂದ ಮೇಲೆ ಘಟಿಸಿದ ಸೋಲು ಅವಳನ್ನು ನಿರಾಸೆಯ ಹಾದಿಗೆ ಹಚ್ಚಿತು. ಈಗೀಗ ಅವಳಿಗೆ ಏಕಾಂತ ಜೀವನದಲ್ಲಿ ತುಂಬ ಆಸಕ್ತಿ. ಸಹಪಾಟಿ ನರ್ಸ್ ಓದುವ ಧಾರ್ಮಿಕ ಗ್ರಂಥಗಳನ್ನೂ ಕತೆ ಕಾದಂಬರಿಗಳನ್ನೂ ಏಕಾಂಗಿಯಾಗಿ ಕೇಳುವುದೇ ಇಷ್ಟ. ಏಕಾಗ್ರತೆಗೆ ಏಕಾಂತವು ಬಹಳ ಸಹಾಯ ಮಾಡುತ್ತದೆ ಎನ್ನುತ್ತಾಳೆ. ಬಹಳ ಮಟ್ಟಿಗೆ ತನ್ನ ಹೊತ್ತನ್ನೆಲ್ಲಾ ಸಂಗೀತ ನುಡಿಸುವುದರಲ್ಲೂ, ಸಂಗೀತ ಕೇಳುವುದರಲ್ಲೂ ಕಳೆ..ವಳು.

ಪ್ರಸ್ತುತ, ಯುವಾವಸ್ಥೆಯು ಮಿಡುಕುವಂತಹ ಸುದ್ದಿಯೊಂದು ಹರಡಿದುದು ಅವಳ ಕಿವಿಗಳಿಗೂ ಸಹ ಮುಟ್ಟಿತು, ಎಲ್ಲರ ಕಿವಿಗಳಿಗೂ ಮುಟ್ಟಿದಂತೆ.....ಗೋಪಾದಲ್ಲಿರುವ ನೇತ್ರವೈದ್ಯ ಕುರುಡುಗಣ್ಣುಗಳಿಗೆ ದೃಷ್ಟಿ ನೀಡುತ್ತಾನೆ ಎಂದು. ಆದರೆ, ಬಹಳ ಸಾರಿ ಸೋಲನ್ನನುಭವಿಸಿರುವುದರಿಂದ ಈಗೀಗ ಯಾವ ವೈದ್ಯರೂ ಬೇಡವೆನ್ನಿಸುತ್ತದೆ. ಆ ಸುದ್ದಿಯನ್ನು ಕೇಳುವುದರಲ್ಲೂ ಆಸಕ್ತಿಯಿಲ್ಲ.

ಆದರೆ, ಮಿಂಚಿನಂತೆ ಎಲ್ಲೆಲ್ಲೂ ತುಂಬಿ ಹರಡಿದ ಆ ಆಶ್ಚರ್ಯಕರವಾದ

ಸುದ್ದಿ ಮನೆ ಮಂದಿಯನ್ನು ಸೂಜಿಗಲ್ಲಿನಂತೆ ಸೆಳೆಯಿತು. ಎಲ್ಲರೂ ಒಮ್ಮೆಲೇ ಉತ್ತೇಜಿತರಾದರು. ಅವಳ ಹಿರಿಯಣ್ಣ ನೇತ್ರವೈದ್ಯನನ್ನು ನೋಡಿಬರುವುದಾಗಿ ಹೊರಟ. ಪಯಣ ಸಾಗಿತು. ಅವನು ಮೊದಲು ಅಲ್ಲಿನ ನೇತ್ರರೋಗಿಗಳನ್ನು ಸಂಧಿಸಿ ನೇತ್ರವೈದ್ಯನ ದಕ್ಷತೆಯನ್ನರಿತು ಕೊಂಡು ಉತ್ಸಾಹದಿಂದ ಸವಿನಯ ಆಮಂತ್ರಣ ನೀಡಿ ಹಿಂದಿರುಗಿದ.

ಬಾಲರವಿ ಇಳೆಯ ಮೇಲೆ ಓಕುಳಿಯನ್ನೆರೆಚಿ ದಿನಚರಿಯನ್ನಾರಂಭಿಸಿ ದಾಗ ಗಿಡ ಮರಗಳಲ್ಲಿ ಅರಳಿದ ಸುಮ ಸಮುಚ್ಚಯಗಳ ನವಸೌರಭವನ್ನು ತರುಬಿ ತರುತಿತ್ತು ....ಗಾಳಿ.....ತಂಗಾಳಿ.....

ಖೇಚರಗಳು ಇನ್ನೂ ಸುಪ್ರಭಾತವನ್ನು ಹಾಡುತ್ತಿರುವಾಗಲೇ ನೇತ್ರ ವೈದ್ಯ ಆಗಮಿಸಿದ. ಕುರುಚಲು ಗಡ್ಡ, ಮಾಸಲು ಬಣ್ಣ, ಗಿಡ್ಡದೇಹ, ದಪ್ಪಮೈ, ಮಾಟರಹಿತ ಮುಖ, ನಲವತ್ತು–ನಲವತ್ತೈದರ ಪ್ರಾಯ, ಕಪ್ಪು ಕೂದಲಿನೊಡನೆ ಸ್ಪರ್ಧೆ ಹೂಡಿದ ಬಿಳಿಯ ಕೂದಲು, ಗೋವಾ ಪ್ರದೇಶದ ಉಡುಪು, ಮಾಯಿಕ ನಗೆ, ತೀಕ್ಷ್ಣವಾದ ಕಣ್ಣುಗಳು, ಸಭ್ಯತೆ ಯನ್ನು ಅಣಕಿಸುವ ಒರಟು ದನಿ, ಒಟ್ಟಿನಲ್ಲಿ ಕುತೂಹಲಕರ ವ್ಯಕ್ತಿತ್ವ..... ಅವ್ಯಕ್ತ ಪ್ರತಿಭೆ....ಅಜ್ಞಾತ ವಿದ್ಯೆ....

ಪರಸ್ಪರ ಕ್ಷೇಮ ಸಮಾಚಾರ ವಿನಿಯೋಗವಾದನಂತರ ಆತನ ಸ್ನಾನಾದಿ ದಿನಚರಿಗಳು ಮುಗಿದುವು. ಅನಂತರ ಬೆಳಗಿನ ಉಪಹಾರ. ತದ ನಂತರ ಸಿಗಾರಿನ ಸೇವನೆ. ಅದಾದನಂತರ ಒಂದು ವಿಶಾಲವಾದ ಕೋಣೆಯಲ್ಲಿ ಗಾಳಿ ಬೆಳಕುಗಳು ಸಮೃದ್ಧವಾಗಿ ಬರುವೆಡೆಯಲ್ಲಿ ತನ್ನ ಪರೀಕ್ಷಕ ಸಲಕರಣೆ ಗಳನ್ನು ಅಳವಡಿಸಿದ. ಪ್ರಾಯಶಃ ಅವನು ಅಳವಡಿಸಲು ಅರ್ಧದಿನ ತೆಗೆದು ಕೊಂಡನೇನೋ. ನಡು ನೆತ್ತಿಯ ಮೇಲೆ ಏರಿದ್ದ ಸೂರ್ಯ ಇಳಿಮುಖಿ ಯಾದ. ಆತನ ಕಾರ್ಯ ಚತುರತೆಯನ್ನು ಗಮನಿಸುವುದರಲ್ಲಿ ನಿಮಗ್ನ ರಾದರು ಅಣ್ಣಂದಿರು ಆತನ ಒರಟು ಕೈ ಸೂಕ್ಷ್ಮಾತಿಸೂಕ್ಷ್ಮ ಕಾರ್ಯ ಗಳನ್ನು ನಿರ್ವಹಿಸುತಿತ್ತು....ಯಾಂತ್ರಿಕವಾಗಿ....ಮಾಂತ್ರಿಕವಾಗಿ....

ಎಲ್ಲವೂ ಮುಗಿದ ನಂತರ ವೈದ್ಯ ನೇತ್ರರೋಗಿಯನ್ನು ಕರೆತರಲು ಹೇಳಿದ. ಉರಿಯುವ ಪ್ರಕಾಶಮಾನವಾದ ವಿದ್ಯುಚ್ಛಕ್ತಿಯ ಬೆಳಕಿನ ಮುಂದೆ ಹುಡುಗಿ ಬಂದು ಕುಳಿತಳು. ಮೊದಲ ನೋಟಕ್ಕೆ ಸುಖಮೂರ್ಛೆ

ಬರುವಂತಹ ಮನಮೋಹಕ ರೂಪು ದೃಷ್ಟಿಗೆ ಬೀಳುತ್ತಲೂ ನೇತ್ರ ವೈದ್ಯ ವಿಚಲಿತನಾದ. ವಿಸ್ಮಯ ತೃಷಿತ ನೇತ್ರಗಳು ಅವಳನ್ನೇ ನಿಟ್ಟಿಸಿದುವು. ಆತನ ಪ್ರೌಢಾವಸ್ಥೆಯು ಯುವಾವಸ್ಥೆಗಿಳಿಯಿತು. ಯಾಂತ್ರಿಕವಾಗಿ ಕಣ್ಣು ರೆಪ್ಪೆಯನ್ನು ಬಿಡಿಸಿ ಕಣ್ಣಾಲಿಗಳ ಮೇಲೆ ವಿದ್ಯುಚ್ಛಕ್ತಿಯ ಬೆಳಕನ್ನು ಬೀರಿ ತನ್ನನ್ನು ತಾನು ಸಾವರಿಸಿಕೊಳ್ಳುತ್ತ ಅಂದ,

"ನಿಮಗೆ ಕೆಡಕಾಗುತ್ತದೆ ಎಂಬ ಭಯವೇನೂ ಇಲ್ಲವಷ್ಟೆ ?"

"ಇಲ್ಲ." ವಾಣಿ ವೀಣಾ ಝಂಕೃತಿಯಂತೆ ಕರ್ಣಪಟಲಗಳನ್ನು ತಾಗಿತು.

"ಹಾಗೆ ಭಯಪಡಬೇಕಾದ ಕಾರಣವೂ ಇಲ್ಲ."

"ಎಷ್ಟೇ ಕೆಡುಕಾದರೂ ಈಗಿರುವುದಕ್ಕಿಂತ ಕೆಡಕಾಗದಷ್ಟೆ ?"

ವೈದ್ಯ ಮುಗುಳ್ನಗು ಸೂಸಿ ನುಡಿದ,

"ನಿಮ್ಮ ಸುಜ್ಞಾನ ಮೆಚ್ಚುವಂತಾದ್ದು."

ಅನಂತರ ತಾಯಿಯೆಡೆಗೆ ತಿರುಗಿ ಕೇಳಿದ,

"ನಿಮ್ಮ ಮಗಳು ದೃಷ್ಟಿ ಕಳೆದುಕೊಂಡುದು ಯಾವಾಗ ?"

"ಬಹುಶಃ, ಹುಟ್ಟಿದಾಗಲೇ."

ಆ ಸುಲಕ್ಷಣವಾದ ಕನ್ಯೆಯನ್ನು ನಿಟ್ಟಿಸಿನೋಡುತ್ತಾ ಉತ್ತರಿಸಿದ,

"ಖಂಡಿತವಾಗಿಯೂ ಇಲ್ಲ. ಬಹುಶಃ ನೀವು ಗಮನಿಸಿರಲಾರಿರಿ."

"ಇರಬಹುದೇನೋ.....ಅಂತೂ, ನನಗೆ ತಿಳಿದ ಮಟ್ಟಿಗೆ....."

"ಇರಲಿ, ನೀವು ಹಾಗೆ ತಿಳಿದುಕೊಂಡಿರಬಹುದು. ಆದರೂ, ನನಗೆ ತಿಳಿದ ಹಾಗೆ ಈ ಪ್ರಪಂಚದಲ್ಲಿ ಹುಟ್ಟುಕುರುಡು ಜನಿಸುವುದು ಬಹಳ ಅಪೂರ್ವ. ಅಂಥಹವನು ಜನಿಸಿಯೇ ಇಲ್ಲ ಎಂದರೂ ಎನ್ನಬಹುದು. ಮಗು ಹುಟ್ಟಿದ ನಂತರ ಕೆಲವು ತಾಸಾದರೂ ಕೆಲವು ಸಮಯವಾದರೂ ನೋಡಲು ಸಮರ್ಥವಾಗಿರುತ್ತದೆ ಒಂದು ವೇಳೆ ಹುಟ್ಟುಕುರುಡಾಗಿದ್ದಲ್ಲಿ ದೃಷ್ಟಿ ಗೂಡಿಸುವುದು ಅಸಾಧ್ಯ."

ದಂಪತಿಗಳ ಮುಖದ ಮೇಲಿನ ಖಳೆ ಅಳಿಯಿತು. ಹುಡುಗರ ಮುಖವೂ ಬಾಡಿತು. ತಂದೆ ನೀಳವಾದ ನಿಟ್ಟುಸಿರು ಬಿಟ್ಟು ಹೊರ ಹೋದರು. ಅವಳ ಮುಖ ಮ್ಲಾನವಾಯಿತು. ಎಲ್ಲರ ಮುಖದ ಮೇಲೂ

ಹರಿದಾಡಿ ಹೋದ ಮ್ಲಾನತೆಯನ್ನು ಗಮನಿಸಿದ ನೇತ್ರ ವೈದ್ಯ. ಶೀಸೆಯಲ್ಲಿದ್ದ ತೆಳುವಾದ ಹಸರು ದ್ರವವನ್ನು ಕಣ್ಣಾಲಿಗಳಿಗೆ ಲೇಪಿಸಿ "ನಾಳೆ ಬೆಳಗ್ಗೆ ಇನ್ನೊಮ್ಮೆ ಪರೀಕ್ಷಿಸುವುದಿದೆ ಅನಂತರ ಮುಂದಿನ ಮಾತು." ಎಂದ ವೈದ್ಯ. ಒರಟು ಧನಿ ಯಾಂತ್ರೀಕೃತವಾಗಿ ಹೊರಬಿತ್ತು.

ಹುಡುಗಿ ತನ್ನ ಸಹಪಾಟಿಯ ಸಹಾಯದಿಂದ ಎದ್ದು ಒಳಗಡೆ ಹೋದಳು. ಮನಸ್ಸು ನೂರು ದೇವರನ್ನು ನೆನೆಯಿತು. ಕೊನೆಯದಾಗಿ ತಾಯಿಯೂ ಸಹ ಪ್ರಾರ್ಥಿಸಿಕೊಂಡಳು.

ಅಂದು, ನೇತ್ರ ವೈದ್ಯ ಬಹಳವಾಗಿ ಯೋಚಿಸುತಿದ್ದ. ಯಾರೊಡನೆಯೂ ಬೆರೆಯಲಿಲ್ಲ. ಕೊಠಡಿಯಲ್ಲಿ--ಅಂಗಳದಲ್ಲಿ ಪದಚಾರಣ ಮಾಡುತ್ತ ಹೊತ್ತು ಕಳೆದ. ಯಾವುದೋ ಮದ್ದನ್ನು ತಯಾರಿಸುವುದರಲ್ಲೂ ಕೆಲ ಹೊತ್ತು ಕಳೆಯಿತು. ರಾತ್ರಿಯೂಟ ಅವನ ಕೋಣೆಗೆ ಆಗಮಿಸಿತು. ಅವಳ ಅಣ್ಣಂದಿರು ಬಂದು ಉಸ್ತುವಾರಿಯನ್ನು ನೋಡಿಕೊಂಡು ಹೋದರು. ಊಟಕ್ಕೆ ಕುಳಿತಾಗಲೂ ಮನವನ್ನು ಎಲ್ಲೋ ಹರಿಯ ಬಿಟ್ಟದ್ದ. ರಾತ್ರಿ ಬಹಳ ಹೊತ್ತಿನವರೆಗೆ ಅವನ ಕೊಠಡಿಯಲ್ಲಿ ದೀಪ ಉರಿಯುತಿತ್ತು. ಅವನು ನಿದ್ದೆ ಮಾಡಿದಂತೆಯೂ ತೋರಲಿಲ್ಲ.

ಅವನ ಕೊಠಡಿಯ ವಿಶಾಲವಾದ ಕಿಟಕಿಯ ಎದುರಿಗೇನೇ ಸುಪ್ರಭಾತವಾಗುತ್ತದೆ. ರಾಗಾರುಣ ಕಿರಣಗಳು ಮೂಡಿಬರುವುದನ್ನು ಹಾಸಿಗೆಯಿಂದಲೇ ನಿಟ್ಟಿಸುತ್ತಾ ಏಳದೆ ಮಲಗಿದ. "ಮುಖ ತೊಳೆದಿರಾ ?" ಎಂದು ಹುಡುಗರು ಒಳಗೆ ಹಣಿಕಿದಾಗಲೇ ಇತ್ತ ಗಮನ. ಆಗ ತಟ್ಟನೆ ಎದ್ದು ಮುಖ ಮಜ್ಜನ ಮಾಡಿ ಪ್ರಾತರ್ವಿಧಿಗಳನ್ನು ಮುಗಿಸುವಾಗ ಬಿಸಿ ಬಿಸಿ ಉಪಹಾರವು ಅಣಿಯಾಗಿ ಬಂದಿತು. ಮುಗಿಸಿ ಪರೀಕ್ಷಾ ಕೊಠಡಿಗೆ ತೆರಳಿದ. ತಾಯಿಯ ಕೈಯಾಸರೆ ಪಡೆದ ಹುಡುಗಿಯೂ ತಯಾರಾದಳು. ಆ ಅದ್ವಿತೀಯ ಸುಂದರಿಯ ಮುಖಾರವಿಂದವನ್ನೇ ದೃಷ್ಟಿಸಿ ನೋಡುತ್ತ ನೇತ್ರವೈದ್ಯ ನುಡಿದ "ಕ್ಷಮಿಸಿ, ಒಂದು ವೇಳೆ ಈ ಪ್ರಯತ್ನ ಸಫಲವಾಗದಿದ್ದರೆ ನನ್ನನ್ನು ಕ್ಷಮಿಸುವಿರಾ ? ಇದರಿಂದ ನಿಮಗೆ ಬೇಸರವಿಲ್ಲವಷ್ಟೆ !"

"ಈಗಾಗಲೇ ಇಂತಹ ಪ್ರಯತ್ನಗಳು ಬಹಳ ಸಾರಿ ನಡೆದಿವೆ. ಅವುಗಳಲ್ಲಿ ಇದೂ ಒಂದು ಎಂದುಕೊಂಡರಾಯಿತು."

"ನಾನು ಕಲಿತಿರುವ ವಿದ್ಯೆಯನ್ನು ನಿರ್ವಂಚನೆಯಿಂದ ಪ್ರಯೋಗಿಸುವೆ....." ಮಾತು ಅಷ್ಟಕ್ಕೆ ತುಂಡುಗಡಿಯಿತು. ನೇತ್ರವೈದ್ಯ ಸುಮ್ಮನಾದ.

"ಹೇಳಿ, ಸಂಕೋಚವೇಕೆ ?"

ಕಣ್ಣಿನ ರಚನೆ ಅದರ ತಂತ್ರ ಮತ್ತು ಅದರ ಪಾತ್ರವನ್ನು ಕುರಿತು ಶಾಸ್ತ್ರೀಯ ಪಾರಿಭಾಷಿಕ ಶಬ್ದಗಳಿಂದ ಕೂಡಿದ ಸಣ್ಣ ಉಪನ್ಯಾಸ ಮಾಡಿ ತನ್ನ ವೈದ್ಯ ವೃತ್ತಿಯ ಅನುಭವವನ್ನು ವಿವರಿಸಿ ಹೇಳಿದನಂತರ—"ಕಣ್ಣು ಅಲ್ಪಸ್ವಲ್ಪ ಕಾಣಿಸುವಂತಾದರೂ ಅಥವಾ ಸ್ವಲ್ಪ ಕಾಲ ಕಾಣಿಸುವಂತಾದರೂ ನೀವು ಸಹಿಸಿಕೊಳ್ಳಬಲ್ಲಿರಾ ?"

ಆ ಧ್ವನಿಯಲ್ಲಿ ಆಸಕ್ತಿಯ ಹೊನಲು ಹರಿದಾಡುತ್ತಿತ್ತು.

"ಅದು ತೊಂದರೆಯೇನಲ್ಲವಲ್ಲಾ ?"

ನೇತ್ರ ವೈದ್ಯ ಮಂದಹಾಸ ಬೀರಿದ.

"ಅದಲ್ಲ, ನಾನು ಹೇಳುತ್ತಿರುವುದು. ಇದುವರೆವಿಗೆ ನಿಮಗೆ ದೃಷ್ಟಿಯೇನೆಂಬುದು ತಿಳಿದಿರಲಿಲ್ಲ. ಏನು ಕಳೆದುಕೊಂಡಿದ್ದೀರೆಂಬುದು ಸಹ ನಿಮಗೆ ತಿಳಿಯದು....."

"ಆಯಿತು....ಆಯಿತು. ಅದು ಹೇಗಾದರೂ ಸರಿಯೆ."

"ನಲವತ್ತೆಂಟು ದಿನ ನೀವು ಕತ್ತಲೆಯ ಕೋಣೆಯಲ್ಲಿರಬಲ್ಲಿರಾ? ಮದ್ದು ಬಳಿದ ನಂತರ ಹಾಗೆ ಇರಿಸಬೇಕಾಗಿದೆ....ಅದು ನಿಮಗೆ ಕಷ್ಟವೆನಿಸಬಹುದು."

"ಏನಾದರಾಗಲಿ, ಅಂತೂ ದೃಢನಿರ್ಧಾರ ಕೈಕೊಂಡಿದ್ದಾಗಿದೆ. ಆದರ ಕಷ್ಟವನ್ನು ಭಗವಂತನ ಹೆಸರಿನಲ್ಲಿ ಅನುಭವಿಸುವೆ." ಎಂದಳು ಹುಡುಗಿ.

ಒಂದು ಘಳಿಗೆ ಮೌನವಾವರಿಸಿತು.

ನೇತ್ರ ವೈದ್ಯ ತನ್ನನ್ನು ತಾನು ಸುಧಾರಿಸಿಕೊಳ್ಳುತ್ತ ನುಡಿದ,

"ದೃಷ್ಟಿ ಬಂದೇ ಬರುತ್ತದೆ. ಅದರಲ್ಲಿ ಅನುಮಾನವಿಲ್ಲ. ಆದರೆ, ಮದ್ದು ಕೊಡುವ ಮುನ್ನ ನನ್ನದೊಂದು ಶರತ್ತಿದೆ....

"ಹೇಳಿ, ಹೇಳಿ."

"ನನ್ನ ಶರತ್ತಿಗೆ ನೀವು ಒಪ್ಪುವಿರಾದರೆ, ಮದ್ದು ಕೊಡುವೆ. ಇಲ್ಲದಿದ್ದರೆ ಇಲ್ಲ."

ಸುತ್ತ ಮುತ್ತಿನಿಂದ ಅನೇಕ ದನಿಗಳು ಮೊಳಗಿದುವು. "ಹೇಳಿ !"

ವೈದ್ಯ ತನ್ನ ಅಚಲ ನಿರ್ಧಾರವನ್ನು ಮುಂದಿಟ್ಟ.

"ಈ ಹೆಣ್ಣನ್ನು ನನಗೆ ಕನ್ಯಾದಾನ ಮಾಡಿದರೆ ಮಾತ್ರ ಮದ್ದು ಕೊಡುವೆ!"

ವಿಷಯ ಗೊಂದಲ ಹೂಡಿತು. ಕುರ್ಚಿಯ ಮೇಲೆ ಕುಳಿತಿದ್ದ ಹುಡುಗಿ ಎದ್ದು ನಿಂತಳು. ತಂದೆ ತಾಯಿಗಳೂ ಅಣ್ಣಂದಿರೂ ಸಿಡಿದೆದ್ದರು. ವಾತಾವರಣದ ತಂಪು ತಳೆದ ಮೇಲೆ ವಿಷಯ ಚರ್ಚೆಗೆ ಬಂದಿತು. ನೇತ್ರ ವೈದ್ಯ ಅಚಲ ನಿರ್ಧಾರದಿಂದ ನುಡಿದ ನಿಮಗೆ ಇಷ್ಟವಿದ್ದರೆ ಮಾತ್ರ ಮದ್ದು ತೆಗೆದುಕೊಳ್ಳಿ. ನೀವೀಗ ತೆಗೆದುಕೊಳ್ಳದಿದ್ದರೂ ನನ್ನ ಅಭ್ಯಂತರವಿಲ್ಲ."

ವೈದ್ಯ ತನ್ನ ಕೊಠಡಿಯಲ್ಲಿ ನೆಪ ಮಾತ್ರಕ್ಕೊಂದು ಪುಸ್ತಕ ಹಿಡಿದು ಕುಳಿತ. ಒಳಗಡೆ ಇದೇ ಚರ್ಚೆ ನಡೆಯಿತು. ಈತನ ಹೊರತು ಗುಣ ಪಡಿಸ ಬಲ್ಲ ವೈದ್ಯರು ಜಗತ್ತಿನಲ್ಲಿಲ್ಲ. ಹಾಗೆಂದು ಆತನ ಕೊರಳಿಗೆ ಹುಡುಗಿಯನ್ನು ಕಟ್ಟುವುದೇ ? ಎಂಬುದು ಹಿರಿಯ ಪ್ರಶ್ನೆ.

"ನಿನಗೆ ಮದುವೆಯೂ ಬೇಡ ; ಮುಹೂರ್ತವೂ ಬೇಡ. ಹೀಗೇ ಇರು." ಎಂದಳು ತಾಯಿ.

"ಅವಳನ್ನು ಈ ಸ್ಥಿತಿಯಲ್ಲಿ ನೋಡಲಾರೆ. ಏನಾದರೊಂದು ವ್ಯವಸ್ಥೆ ಮಾಡಲೇಬೇಕು" ಎಂದರು ತಂದೆ.

ಆತ ವೈದ್ಯ ವಾಚಸ್ಪತಿಯಾದರೂ ಆ ಸುಪ್ರಸಿದ್ಧ ಮನೆತನಕ್ಕೆ ಅಳಿಯ ನನ್ನಾಗಿ ಬರಮಾಡಿಕೊಳ್ಳಬಹುದಾದಂತಹ ವ್ಯಕ್ತಿಯಲ್ಲ. ಕುಲ ಗೋತ್ರ ರಹಿತನೂ ರೂಪರಹಿತನೂ ಪ್ರಾಯರಹಿತನೂ ಆದ ಆತನನ್ನು ಸ್ವೀಕರಿಸಲು ಮನಸ್ಸು ಒಲ್ಲೆನೆಂದಿತು. ಅದೇ ನೇರಕ್ಕೆ ಅವಳ ಒಳ್ಳಿತೂ ಸಹ ಇದೆ. ಯೋಚಿಸಿ ಯೋಚಿಸಿ ತಲೆ ಬರಡಾಯಿತು. ನಮ್ಮ ಆಸ್ತಿಯಲ್ಲಿ ಒಂದು ಭಾಗ ಬಿಟ್ಟು ಕೊಡುವ ಸೂಚನೆಯನ್ನು ಮುಂದಿಟ್ಟರು ತಂದೆ. ಮಕ್ಕಳೂ ಸಹ ಉತ್ಸಾಹ ತೋರಿದರು. ಆದರೂ, ವೈದ್ಯ ವಾಚಸ್ಪತಿ ಮಣಿಯಲಿಲ್ಲ. ವೈದ್ಯ ಸಲಕರಣೆಗಳು ಅಲ್ಲಲ್ಲೆ ಉಳಿದುವು. ವೈದ್ಯಮಹಾಶಯ ತನ್ನ ಕೊಠಡಿಯ ಸರಹದ್ದಿನಲ್ಲಿ ಅಡ್ಡಾಡಿ ಹೊತ್ತು ಕಳೆದ. ಒಳಗಡೆ ಸುಳಿಯಲಿಲ್ಲ.

....ಪ್ರಕೃತಿಯ ಉಡಿಯಲ್ಲಿ ಸುಂದರ ಮಗುವಿನಂತೆ ಸ್ವಸ್ಥವಾಗಿತ್ತು ಆ ತಾಣ. ಇಂದು ಇದ್ದಕಿದ್ದಂತೆ ದ್ವೈದೀಭಾವಗಳು ಉದಿಸಿದುವು. ಆ ಸಮಸ್ಯೆ ಸಾಮಾನ್ಯವಲ್ಲ.

....ಕಾಲದೇವನ ಅನಂತಾನಂತ ಯಾತ್ರೆಯ ಪದಹತಿಗೆ ಸಿಕ್ಕಿ ರುದ್ರ ಗತಿಯಲ್ಲಿ ಮತ್ತೊಂದು ದಿನ ಉರುಳಿತು.

ಮೂಡಣ ದಿಶೆಯಲ್ಲಿ ಮಂದಾಕಿನೀ ಧಾರೆಯ ಮಧ್ಯೆ ಬಾಲ ರವಿ ಮೂಡಿ ಬಂದ. ಹಸುರುಡೆಯುಟ್ಟ ಪ್ರಕೃತಿಯ ಉಡಿಯಲ್ಲಿ ಹೊಂಗಾಂತಿಯ ಹೊನಲು ಹರಿದಾಗ ಹಸುರು ಹುಲ್ಲಿನ ಮೇಲಿನ ಹಿಮ ಮಣಿಗಳು ಮಿಣ ಮಿಣನೆ ಹೊಳೆದುವು. ಒಮ್ಮೊಮ್ಮೆ ಕೋಳಿಗಳು ಕೂಗುವ ಸದ್ದು. ಆಗಾಗ ನಾಯಿಗಳು ಬೊಗಳುವ ಸದ್ದು ಕೇಳಿ ಬರುವುದರ ವಿನಾ ಇತರ ಸದ್ದಿನ ಹೆಸರೇ ಇಲ್ಲ. ಸದ್ದಿಲ್ಲದ ಆ ಮಹಾ ಶಾಂತಿಯಲ್ಲಿ ಕಿವಿಗಳಿಗೆ ಆನಂದವನ್ನೊರೆಯುವ ಬಗೆಬಗೆಯ ಪಕ್ಷಿಗಳ ಇನಿಗಾನವನ್ನು ಆಲೈಸುತ್ತಾ ನಿಂತರು ತಂದೆ. ಅದೇ ವೇಳೆಗೆ ಹೊರಗಡೆ ಅಡ್ಡಾಡಲು ತೆರಳಿದ ನೇತ್ರ ವೈದ್ಯ ಆಗಮಿಸಿದ. ಒಂದು ಕ್ಷಣ ನಿಂತು ಅವನೆಂದ "ನಾನಿಂದು ಗೋವಾಕ್ಕೆ ಹೊರಡುವೆ."

ಒಮ್ಮೆಲೆ ತಲೆಯಲ್ಲಿ ನೂರು ಆನೆಗಳು ನುಗ್ಗಿ ಬಂದಂತಾಯಿತು. ಯಜಮಾನ ರುದ್ರಗಂಭೀರವಾಗಿ ಚಿಂತಿಸಿದ. ಎಷ್ಟು ಯೋಚಿಸಿದರೂ ಉತ್ತರ ಹೊಳೆಯಲಿಲ್ಲ. ಆತನ ಮುಂದೆ ತನ್ನ ಮನೋದೌರ್ಬಲ್ಯವನ್ನು ತೋರಿಕೊಳ್ಳಲಿಚ್ಛಿಸದೆ. ಸ್ಥಿರಭಾವದಿಂದ ನುಡಿದ–"ಸ್ವಲ್ಪ ತಾಳಿ ಯೋಚಿಸಿ ಹೇಳುವೆ."

"ಇಂದೇ ಹೇಳಿ ಬಿಡಿ ಸ್ವಾಮಿ."

ಯಜಮಾನ ಒಳಗಡೆ ಹೋದ. ಸುಖ ದುಃಖಗಳ ತಾನವಿತಾನದಲ್ಲಿ ಆ ದಿನ ಉರುಳಿತು. ಮರುದಿನ ಹುಡುಗಿ ಚಿಕಿತ್ಸೆಗೆ ಸಿದ್ಧಳಾದಳು. ಅವಳ ಮುಖ ಮಂಡಲ ಕಳಾಹೀನವಾದುದನ್ನೂ ಮನೆ ಮಂದಿಯ ಚಿಂತೆಯ ವ್ಯಾಪಕತೆಯನ್ನೂ ಆದ್ಯಂತವಾಗಿ ಗಮನಿಸುತ್ತಲೇ ವೈದ್ಯ ಚಿಕಿತ್ಸೆ ಆರಂಭಿಸಿದ. ಕಣ್ಣಾಲಿಗಳಮೇಲೆ ಮದ್ದು ಬಳಿದು ಮೃದುವಾಗಿ ರೆಪ್ಪೆಗಳನ್ನು ಮುಚ್ಚಿ, ಮೇಲೆ ತೆಳ್ಳನೆಯ ರಸವನ್ನು ಬಳಿದ. ಅದು ಬಳಿದಾಗಲೇ ಆರುವುದು, ಆರಿದೊಡನೆ ಮತ್ತೆ ಬಳಿಯುವುದು ಹೀಗೆ ಮೇಲಿಂದ ಮೇಲೆ ಬಳಿದು ಅರ್ಧ ಇಂಚಿನಷ್ಟು ದಪ್ಪ ಲೇಪವಾದಮೇಲೆ ನೀಲಿಯ ದಪ್ಪ ಬಟ್ಟೆಯಿಂದ ಕಣ್ಣುಗಳನ್ನು ಕಟ್ಟಿ, ಅವಳನ್ನು ಕತ್ತಲ ಕೋಣೆಯಲ್ಲಿಡುವ ಏರ್ಪಾಡು

ಮಾಡಿದ. ಊಟ ಉಪಚಾರಾದಿಗಳು ಅಲ್ಲೆ ನಡೆದುವು. ವೈದ್ಯನು ತನ್ನ ಕೊಠಡಿಯಲ್ಲಿ ಸ್ವಸ್ಥವಾಗಿ ಉಳಿದ. ರಾಜೋಪಚಾರಗಳು ಯಥಾರೀತಿ ನಡೆದುವು.

ಒಂದೊಂದು ದಿನ ಉರುಳುವಾಗಲೂ ಸುಖ ದುಃಖಗಳ ತಾನವಿತಾನ ರುದ್ರ ಗಂಭೀರವಾಗಿ ನಡೆಯುತ್ತವೆ. ಉರುಳುವ ಕ್ಷಣ ಕ್ಷಣಗಳೂ ಕಹಿ ಸಿಹಿಗಳ ಬಣಗಳಾಗಿ ಆ ಮನೆತನದ ಪ್ರಸಿದ್ಧತೆಗೆ ಗ್ರಹಣ ಹಿಡಿದಂತಾಗಿದೆ .....ಸಾರೋದ್ಧಾರವಾಗಿ ನಡೆದು ಬಂದ ಸುಖ–ಸಂಪತ್ತುಗಳ ವೈಖರಿ ಬತ್ತುತ್ತಿರುವಂತೆ ತೋರಿ, ಈ ದಿನಗಳು ಎಷ್ಟು ನಿಧಾನವಾಗಿ ಉರುಳಿದರೆ ಅಷ್ಟು ಕ್ಷೇಮ ಎಂದು ಮೊರೆಯಿಡುತ್ತದೆ ಎದೆಯ ಹಕ್ಕಿ....ಹೆಣ್ಣು ಹೃದಯದ ಸುಖ ದುಃಖಗಳ ಧಾರಣೆಯನ್ನು ಆ ನಿಗಮಗೋಚರ ಮಾತ್ರ ಅರಿಯಬಲ್ಲನೇನೋ....ಅಥವಾ ಅವನೂ ಅರಿಯನೇನೋ.....

ಕಾಲ ಚಕ್ರವುರುಳಿ ನಲವತ್ತೆಂಟನೆ ಸುಪ್ರಭಾತವಾದಾಗ ಎಂದಿನಂತೆ ಶಾಂತ ಸಮುದಾಯದಲ್ಲಿ ಆ ಮನೆ ಬೆಳಗುತಿತ್ತು. ವೈದ್ಯ ಪ್ರಾತರ್ವಿಧಿಗಳನ್ನು ಪೂರೈಸಿ ಕತ್ತಲ ಕೋಣೆಯ ಹುಡುಗಿಯನ್ನು ಬರಮಾಡಿಕೊಂಡಾಗ ಸ್ವರ್ಣ ಪುತ್ಥಳಿಯಂತೆ ಬೆಳಗುತಿದ್ದಳು ಆಕೆ. ವೈದ್ಯ ಸ್ವತಃ ಕಣ್ಣಿನ ಪಟ್ಟಿಯನ್ನು ಕಳಚಿ, ಲೇಪನವನ್ನು ತೆಗೆದು ಅಂಟಿಕೊಂಡಿದ್ದ ರೆಪ್ಪೆಗಳನ್ನು ಬಿಡಿಸಿದ. ಉಜ್ವಲ ಕಾಂತಿಯುತವಾದ ಕಣ್ಣುಗಳು ಮಿಕಿ ಮಿಕಿ ನೋಡಿದುವು. ಬೆಳಕಿನ ಮಹಾ ಸಾಮ್ರಾಜ್ಯದಲ್ಲಿ ತಾಯಿ, ತಂದೆ, ಅಣ್ಣಂದಿರು, ಸಹಪಾಟಿ, ವೈದ್ಯ ವಾಚಸ್ಪತಿ ಎಲ್ಲರಿದ್ದಾರೆ ! ಇಲ್ಲಿಯವರೆಗೆ ಕಾಣಲಾಗದಿದ್ದುದನ್ನು ಕಂಡಾಗ ಆನಂದದೊಂದಿಗೆ ಕಳವಳ ಭೀತಿಗಳೂ ಹೆಣೆದು ಕೊಂಡುದುದನ್ನು ವೈದ್ಯ ಲಕ್ಷ್ಯದಮೇಲೆ ಲಕ್ಷ್ಯವಿಟ್ಟು ಗಮನಿಸಿದ. ಎಲ್ಲರ ಮುಖದ ಮೇಲೆ ಸುಖದುಃಖಗಳ ತೆರೆ ವ್ಯಾಪಕವಾಗಿ ಹರಡಿತು. ಆ ಸಮಗ್ರ ಆಂದೋಳನ ಆತನನ್ನು ಸಮೂಲವಾಗಿ ಅಲುಗಾಡಿಸಿ ಬಿಟ್ಟಿತು....ತಂದೆ ತಾಯಿ ಅಣ್ಣಂದಿರು ಅವಳನ್ನು ಸುತ್ತುವರಿದ ದೃಶ್ಯ ನೋಡಲಾರದೆ ನೋಡಿದ.

"ನಾನು ಅಪ್ಪ !" ಸ್ವತಃ ಪರಿಚಯ ಮಾಡಿಕೊಟ್ಟರು ತಂದೆ.

"ಹಾ ! ಎಂಥಾ ಸೊಗಸು ! ನೀವೆಲ್ಲರೂ ಸಹ ಹೀಗೆ ನೋಡಬಲ್ಲಿರಾ ಅಪ್ಪಾಜಿ ?"

ಎಲ್ಲರನ್ನೂ ದನಿಯ ಮೂಲಕ ಗುರುತಿಸುತಿದ್ದ ಅವಳಿಗೆ ಇಂದು

ಪ್ರಪ್ರಥಮವಾಗಿ ನೋಡಿದ ನೋಟ ಹೃದಯ ಬಿರಿಯುವಂತೆ ಮಾಡಿತು. ಆ ಆಶ್ಚರ್ಯ ತೃಷಿತ ಲೋಚನಗಳು ಒಬ್ಬರಿಂದೊಬ್ಬರೆಡೆಗೆ ಹರಿಯ ತೊಡಗಿದುವು, ಹೂವಿಂದ ಹೂವಿಗೆ ಹಾರುವ ಭ್ರಮರಗಳಂತೆ.

"ಹಾ.....ಎಷ್ಟು ಶುಭ್ರ.....ಎಂಥ ಅಪೂರ್ವ ವೈಭವ.....ಸರಸ ಸುಂದರ ವಿಜೃಂಭಣೆ !.....ಇಂದಿನ ಈ ಸಂತಸವನ್ನು ಸಹಿಸುವುದಕ್ಕೆ ಈ ಹೃದಯವೇ ಸಾಲದಲ್ಲಾ ...ದೇವರೇ !"

ಎಲ್ಲರೂ ಸುತ್ತ ಮುತ್ತ ಮುತ್ತಿದರು. ಆನಂದದ ಕಡಲು ಉಕ್ಕಿ ಹರಿಯಿತು. ಅಣ್ಣಂದಿರು ಹರ್ಷೋದ್ಗಾರ ಮಾಡಿದರು. ಆದರದು ಒಡಕು ಮಡಿಕೆಯ ದನಿಯಂತೆ ದುಃಖಪೂರ್ಣವಾಗಿ ಹರಿಯಿತು. ತಾಯಿ ಮಗಳನ್ನು ಗಾಢಾಲಿಂಗನೆ ಮಾಡಿಕೊಂಡು ದುಃಖ ದಗ್ಧ ಧ್ವನಿಯಲ್ಲಿ ತನ್ನ ಪರಿಚಯ ಹೇಳಿಕೊಂಡಳು "ನಾನು ನಿನ್ನ ತಾಯಿ ಮಗೂ !"

"ನೀವೇ ಅಮ್ಮಾನಾ....? ಸರಿಯಾಗಿ ನೋಡುವೆ ಇನ್ನೂ ನೋಡವೆ!" ಕಣ್ಣುಗಳನ್ನು ಅರಳಿಸಿ ಅತ್ಯಂತ ಆಸಕ್ತಿಯಿಂದ ನಿಟ್ಟಿಸುತ್ತ "ಎಂಥ ಸೊಗಸು ! ನನ್ನ ಭಾಗ್ಯವೇ ಭಾಗ್ಯ ; ಅಮ್ಮಾ !"

ತಾಯಿಯ ತುಂಬು ಹೃದಯದಿಂದ ಸಿಡಿದಾದ ನಿಟ್ಟುಸಿರೊಂದು ಹೊರ ಹೊಮ್ಮಿತು. ದೇಹ ಧರಿತ್ರಿಯ ಸುವಿಧಾನವನ್ನು ಸಂಕುಚಿತಗೊಳಿಸುವಂತೆ ಶೋಕರಸವನ್ನು ನರನರಗಳಲ್ಲೂ ಪ್ರಸಾರ ಮಾಡುತಿತ್ತು ದುಃಖಪೂರಿತ ಹೃದಯ. ಬಹುಶಃ ತನ್ನ ಮಗಳು 'ಕುರುಡು' ಎಂಬುದು ಪ್ರಪ್ರಥಮವಾಗಿ ತಿಳಿದು ಬಂದಾಗಲೂ ಇಂತಹ ವ್ಯಥೆಯಾಗಲಿಲ್ಲವೇನೋ. ಬಿಗಿ ಹಿಡಿದ ಬಂಧನ ಸಡಿಲಾಗಲೇ ಇಲ್ಲ.

ಹಿರಿಯ ಸೋದರ ಮುಂದೆ ನಿಂತು ಕೇಳಿದ "ನಾನು ಯಾರು ತಂಗಿ!"

ದನಿಯ ಗುರುತಿನಿಂದ ಆಕೆ ನುಡಿದಳು "ನೀನೇ ನರೇಂದ್ರ ! ಎಷ್ಟು ಮುದ್ದಾಗಿದ್ದಿ !"

ಒಡನೆ ಉಳಿದವರು ಸರದಿಯ ಪ್ರಕಾರ ಮುಂದುವರಿದರು "ನಾನು....?"

"ನರೋತ್ತಮ!" ಸುಕೋಮಲ ಧ್ವನಿ ಉತ್ಸಾಹದಿಂದ ಚಿತ್ರಿಸಿತು.

"ನಾನು ?"

"ಸತೀಶ್ !.....ಎಷ್ಟು ಚೆನ್ನಾಗಿದ್ದೀಯಪ್ಪಾ ನೀನು !"

"ನಾನು ?"

"ಪ್ರಸನ್ನ ! ನೀನು ನಿಜವಾಗಿಯೂ ಪ್ರಸನ್ನನೇ ಹೌದು. ಎಲ್ಲಿ ...? ಸರಿಯಾಗಿ ನಿಲ್ಲು ! ಇನ್ನಿಷ್ಟು ನೋಡುವೆ !"

"ನಾನು ?"

ನಂದಕುಮಾರ್ !.....ನಂದಕುಮಾರ್ ! !"

ಆ ಸಂತಸದ ನೆಲೆಯಲ್ಲಿ ಹರಿದಾಡುವ ದುಃಖದ ಸುಯ್ಲು ಸ್ಪಷ್ಟವಾಗಿ ಕೇಳಿಸುತಿತ್ತು.

"ನೀವೆಲ್ಲರೂ ಹೀಗೆಯೇ ನೋಡಬಲ್ಲಿರಾ ? ಖಂಡಿತ.....ಖಂಡಿತ ವಾಗಿಯೂ ನೋಡಬಲ್ಲಿರಾ ?" ಎಂದಾಗ ಆಶ್ಚರ್ಯ ತೃಷಿತ ಸುಂದರ ಲೋಚನಗಳು ವಿನೂತನ ಕಳೆಯಿಂದ ಶೋಭಿಸಿದುವು.

ಆ ಸುಖದುಃಖಗಳ ತಾನವಿತಾನವನ್ನು ವೈದ್ಯ ವಾಚಸ್ಪತಿ ಮೂಕ ವಿಸ್ಮಿತನಾಗಿ ನಿಟ್ಟಿಸಿದ. ಸುತ್ತಮುತ್ತ ಮನೆಮಂದಿಯೊಂದಿಗೆ ಆಳು–ಕಾಳು ಗಳೂ ತುಂಬಿ ಹೋಗಿದ್ದರು. ಎಲ್ಲರ ಮುಖದಲ್ಲೂ ಸುಖ ದುಃಖಗಳ ಭಾವಲಹರಿ ಹರಿದಾಡುತಿದ್ದುದನ್ನು ನೋಡುತಿದ್ದ ವೈದ್ಯ ಮುಂದೆ ಬಂದು ತನ್ನ ಪರಿಚಯು ತಾನೇ ಹೇಳಿಕೊಂಡ "ನಾನು ನಿನ್ನ ವೈದ್ಯ."

"ಹಾ.....! ನೀವೇ.....ನೀವೇ ಖಂಡಿತಾ ನೀವೇ.....ತಂದೆ ?" ಅತ್ಯಂತ ಉದ್ವೇಗದಿಂದ ಕೇಳಿದಳು. ಮೊಟ್ಟ ಮೊದಲ ನೋಟಕ್ಕೆ ಆ ವಿಕೃತರೂಪ ಸಿಡಿಲು ಬಡಿಸಿತು. ಪೆಚ್ಚಾಗಿ ಪ್ರೇತಖಳೆ ತಳೆದಳು ಹುಡುಗಿ.

ಅತುಲ ದ್ವೈದೀಭಾವಗಳ ತಾನವಿತಾನ ಆತನನ್ನು ವಿಭ್ರಮ ವೀಚಿ ಯಲ್ಲಿ ಮುಳುಗಿಸಿಬಿಟ್ಟಿತು.

"ನಿಮ್ಮ ಆನಂದಸಾಗರದಲ್ಲಿ ನಾನೊಂದು ಮೊಸಳೆಯಾಗಲಾರೆ..... ನಾನಿನ್ನು ಬರುವೆ. ನನಗೆ ಅಪ್ಪಣೆ ಕೊಡಿ." ಎನ್ನುತ್ತಾ ನೇತ್ರವೈದ್ಯ ವಾಚಸ್ಪತಿ ದಂಪತಿಗಳಿಗೆ ಕರ ಜೋಡಿಸಿ ಹೊರಡಲನುವಾದ.

"ನನ್ನನ್ನು ಆಶೀರ್ವದಿಸಿರಿ ದಾದಾ !" ಎನ್ನುತ್ತ ಆತನ ಕಾಲುಗಳಿ ಗೆರಗಿದಳು ನಯನತಾರಾದೇವಿ.

"ದೀರ್ಘ ಸುಮಂಗಲೀ ಭವ !"

ಒಮ್ಮೆಲೇ ಹರ್ಷೋದ್ಗಾರ ಮಾಡು ಮುಟ್ಟುವಂತೆ ಮೊಳಗಿತು.

— ೦ —

# ಅಭಿಜ್ಞಾನ

ಜುಳು. ಜುಳು. ಜುಳು. ಜುಳು.

ಶೀತಲ ಶೀಲತೆಯ ವಿಜಯ ಘೋಷದೊಡನೆ ಹರಿವ ಥೇಮ್ಸ್ ನದಿಯ ಮಂಜುಳ ಮಧುರ ನಿನಾದ.

ಆ ಸುವಿಸ್ತಾರವಾದ ಬಯಲಿನ ಆಚೆ ಅದು ಹರಿಯುತಿದ್ದರೂ ಇಲ್ಲೇ ಹರಿಯುವಷ್ಟು ಸ್ಪಷ್ಟವಾಗಿ ಕೇಳಿಸುತ್ತದೆ ಆ ಜುಳು, ಜುಳು, ಜುಳು, ನಿನಾದ.

ಅರವತ್ತು ವಸಂತಗಳ ಸವಿಯನ್ನುಂಡ ಮೈಕೇಲ್ ದಂಪತಿಗಳು ಸಂಜೆಯ ಸುಂದರ ವಾತಾವರಣಕ್ಕೆ ಮೈಗೊಟ್ಟು ಗಾಳಿ ಸವಾರಿ ಹೊರಟಿದ್ದಾರೆ. ಪರಸ್ಪರ ನಡುವನ್ನು ಬಳಸಿ ಹಿಡಿದು ರಜತ ಸಲಾಕೆಗಳಂತೆ ನಡೆಯುತಿದ್ದ ಮನಮೋಹಕ ಚಿತ್ರ ಪ್ರಕೃತಿಯ ಅದ್ಭುತ ಅನಸ್ಯ ಸೌಂದರ್ಯರಾಶಿಗೆ ಅನುರಂಜಿತವಾದಂತೆ ಶೋಭಾಯಮಾನವಾಗಿತ್ತು. ತೆಳ್ಳನೆಯ ನೀಳವಾದ ಅಂಗಲತೆ ಆಕರ್ಷಣೀಯವಾದ ಮುಖ ದಂಪತಿಗಳಿಗೆ ಯೌವನದ ಅಪೂರ್ವ ಖಳೆಯನ್ನು ಕೊಟ್ಟಿತ್ತು.

ಆರ್ಲಿ ಸಣ್ಣ ಹಳ್ಳಿಯಾದರೂ ಬಹಳ ಅಚ್ಚುಕಟ್ಟು. ನೋಡಿದವರೆಲ್ಲ ಪ್ರಥಮ ನೋಟದಲ್ಲೇ ಮುಗ್ಧರಾಗುವಂತಹ ರೂಪುರೇಷೆಯ ಸರಸ ಸುಂದರ ವಿನ್ಯಾಸ. ಪ್ರಕೃತಿಯ ಮಡಿಲಲ್ಲಿ ಕೀರ್ತಿ ಶಿಶುವಾದ ಆರ್ಲಿಯ ಮುಖ್ಯಸ್ಥರಲ್ಲಿ ಮೈಕೇಲ್ ದಂಪತಿಗಳು ಮುಖ್ಯರು. ಮೈಕೇಲ್ ಶಾಲೆಯ ಮೆಟ್ಟಲೇರಿದವನಲ್ಲ. ಆಕೆ ಹೈಯರ್ ಸೆಕೆಂಡರಿ ಶಾಲೆಯಲ್ಲಿ ಕಲಿತವಳು. ಮದುವೆಯಾದನಂತರ ಬಿಡುವು ದೊರೆತಾಗಲೆಲ್ಲ ಮೈಕೇಲನಿಗೆ ವಿದ್ಯೆಕಲಿಸಲು ಕ್ಯಾಥರೀನ್ ಸಲ್ಮೆಯಿಂದ ಸಹಾಯ ಮಾಡಿದ್ದಾಳೆ. ಸಂಯೋಗವಶಾತ್ ಅವರು ನಡೆಸುವ ದನಕರು ಕುರಿ ಕೋಳಿ ಹಂದಿ ಕುದುರೆಗಳ ಫಾರಂ ಯಾವ ರೋಗಾದಿಭಾದೆಗಳ ತಾಪತ್ರಯುಗಳಿಲ್ಲದೆ ಸಮೃದ್ಧಿಯಾಗಿತ್ತು. ಬೆಳೆಯುವ ಆಲೂಗಡ್ಡೆಯೂ ಸಹ ಉತ್ಕೃಷ್ಟವಾದುದೇ.

ಮೈಕೇಲ್ ಹಾದಿ ನಡೆಯುತ್ತ ಆನಂದ ಪ್ರಮತ್ತನಾಗಿ ನುಡಿದ,

"ಡಾರ್ಲಿಂಗ್, ವಾತಾವರಣ ಶುಭ್ರವಾಗಿದೆ. ನಾವು ಓಕ್‌ಲ್ಯಾಂಡ್ಸ್ ವರೆಗೂ ಹೋಗಿ ಬರೋಣವೇ ?"

"ಓ....! ಆಗಲಿ." ಎನ್ನುತ್ತ ನೋಟವನ್ನು ಗಡಿಯಾರದ ಕಡೆ ಹೊರಳಿಸಿದಳು ಮಡದಿ. ಹೊತ್ತು ಐದರ ಅಂಚಿನಲ್ಲಿ ನಲಿಯುತಿತ್ತು. ಅಲ್ಲಿಗೆ ಹೋದರೆ ಒಂದು ತಾಸು ಆರಾಮವಾಗಿ ಹೊತ್ತು ಕಳೆಯಬಹುದು ಎಂಬ ಯೋಚನೆಯಿಂದ ಆಕೆ ಮುಂದುವರಿದಳು "ಅಲ್ಲಿ ಸ್ವಲ್ಪ ಹೊತ್ತು ಇದ್ದೇ ಬರೋಣ, ಇಂದು ಮನೆಯಲ್ಲಿ ಮಾಡಬಹುದಾದ ಕೆಲಸವೇನೂ ಇಲ್ಲ."

"ಸರಿ ...ಮತ್ತೆ."

ಸತಿ ಪತಿಗಳು ಆರಾಮವಾಗಿ ಕೈ ಕೈ ಹಿಡಿದು ಹೊರಟರು. ಸಣ್ಣ ಕಲ್ಲು–ಮರಳುಗಳನ್ನು ತುಳಿಯುವುದರಿಂದ ಹೊರ ಹೊಮ್ಮುವ ಸಣ್ಣ ಶ್ರುತಿಯಲ್ಲಿ ಕೇಳಿ ಬರುವ ಮೃದುಸ್ವರ ಯಾವುದೋ ಮಧುರ ಸಂವೇದನೆಯನ್ನು ಬಿತ್ತರಿಸುವಂತಿತ್ತು-ತನುಮನಗಳಲ್ಲಿ ಉಕ್ಕಿ ಹರಿಯುವ ಆನಂದ ಲಹರಿಗೆ ಸವಿನಯ ಪೂರಕದಂತೆ.

ಕಾಲು ಹಾದಿಯನ್ನು ಕಳೆದು ಹೆದ್ದಾರಿಗೆ ಹೆಜ್ಜೆಯಿಡಬೇಕಾದರೆ ಇನ್ನೂ ಒಂದೆರಡು ಫರ್ಲಾಂಗ್ ನಡೆಯಬೇಕು. ಅಲ್ಲಿಂದ ಓಕ್‌ಲ್ಯಾಂಡ್ಸ್ ಎರಡು ಮೈಲಿಗಳ ಮೇಲಾದರೂ ಆಗಬಹುದು. ನೋಟದ ಕಕ್ಷೆಯೊಳಗಿನ ಆ ಆರ್ಲಿಯ ಸುಂದರ ದೃಶ್ಯ ಮನಮೋಹಕವಾಗಿ ಸ್ವರ್ಗ ಸದೃಶವಾಗಿ ಕಂಗೊಳಿಸುತಿತ್ತು. ಸುವಿಶಾಲವಾದ ಸಾಸು ಪ್ರದೇಶದಲ್ಲಿ ಅಲ್ಲಲ್ಲಿ ಸುಂದರವಾದ ಹೆಂಚಿನ ಮನೆಗಳು, ಅವುಗಳಿಗೆ ಹೊಂದಿಕೊಂಡಂತೆ ಮುಳ್ಳುಬೇಲಿಯಿಂದಾವೃತವಾದ ಸಣ್ಣ ಸಣ್ಣ ಭೂವಲಯಗಳು, ಅವುಗಳಲ್ಲಿ ಅಶ್ವಶಾಲೆ ಗೋಶಾಲೆ ಕಣಜ ಕುಕ್ಕುಟ ಕೇಂದ್ರ ಇವುಗಳ ರೂಪುರೇಷೆ, ಒಂದೊಂದೂ ಚಿತ್ರಕಾರನ ಕೃತಿ ವಿಶೇಷಕ್ಕೆ ರಸದೌತಣ ನೀಡುವಂತಿವೆ.

ಮೈಕೇಲ್ ಒಮ್ಮೆ ಹಿಂತಿರುಗಿ ನೋಡಿ ಅಂದ "ಆರ್ಲಿಯ ಜನ ಪುಣ್ಯವಂತರು. ಪ್ರಕೃತಿ ಇಂತಹ ಅಮೋಘವಾದ ಸುಖ ಸಂಪತ್ತನ್ನು ಇನ್ನಾರಿಗೂ ನೀಡಿಲ್ಲ. ನಾವು ಏನು ಮಾಡಿಕೊಳ್ಳುವೆವೆಂದರೂ ಅದಕ್ಕೆ ಅನುಕೂಲವಾದ ವಾತಾವರಣವಿದೆ ಇಲ್ಲಿ."

"ಆದರೂ....ಒಂದಾನೊಂದು ಕಾಲದಲ್ಲಿ ಇಲ್ಲೇನಿತ್ತು? ಈಗ ಯೂತ್ಸ್

[illegible] ಶ್ರಮವಹಿಸುವುದರಿಂದ ಹಳ್ಳಿ ಅಭಿವೃದ್ಧಿಗೊಳ್ಳುತ್ತಿದೆ."

"ತರುಣ ವೃಂದ ಮಾಡದೆ ಇನ್ನಾರು ಮಾಡಬೇಕು ಹೇಳು ?"

"ಆಗಿನಿಂದಲೂ ನೀವು ಈ ಕಾರ್ಯ ಕೈಕೊಂಡಿದ್ದರೆ ನಮ್ಮ ಕಾಲದಲ್ಲೇ ನಾವು ಈ ಸೌಕರ್ಯಗಳನ್ನು ಹೊಂದಬಹುದಾಗಿತ್ತು."

"ಆಗ ನಮಗೆ ನಮ್ಮನಮ್ಮ ಕೆಲಸ ಮಾಡಿಕೊಳ್ಳುವುದರಲ್ಲೇ ಹೊತ್ತು ಕರಗುತ್ತಿತ್ತು. ಈಗ ....ಹಾಗಲ್ಲ ; ಹಳ್ಳಿಗೆ ರೂಪುರೇಷೆ ಬಂದಿದೆ. ಯೂತ್ಸ್ ಯೂನಿಯನ್ನಿನವರಿಗೆ ಕೈತುಂಬ ಬಿಡುವು ಸಿಗುತ್ತೆ."

ಹಾದಿಯನ್ನು ಕಳೆದು ಓಕ್‌ಲ್ಯಾಂಡ್ಸ್ ದಿಬ್ಬವನ್ನು ಹತ್ತಿದಾಗ, ಪಶ್ಚಿಮ ದಿಗಂತದಲ್ಲಿ ಜೀಮೂತಗಳ ಪ್ರಭಾವಳಿಯ ಮಧ್ಯೆ ಹೊಂಗದಿರುಗಳ ಹೊನ್ನಳೆಯನ್ನು ಸೂಸಿ, ಶೋಭಾ ಸಮುದ್ರವನ್ನು ಉಕ್ಕೇರಿಸಿದ್ದ ಉಜ್ವಲ ಶಾಂತ ಸೂರ್ಯ.

ದಿಬ್ಬವನ್ನು ಹತ್ತಿದ ಮೇಲೆ ಎಲ್ಲಿಂದ ಎಲ್ಲಿಯವರೆಗೂ ಕಂಗೊಳಿಸುವ ಆಲ್ಲಿ ನಿಸರ್ಗದ ಸ್ವರ್ಗಧಾಮದಂತೆ, ಚಂದ್ರಮನ ಧವಳಿಮೆಯ ಪೀಯೂಷ ಧಾರೆಯಂತೆ, ಅಪೂರ್ವ ಶಾಂತಿಪ್ರದ ಕಾಂತಿಯಿಂದ ಆನಂದ ಸಾಕ್ಷಾತ್ಕಾರವನ್ನು ನೀಡುವಂತಿತ್ತು.

ಓಕ್‌ಲ್ಯಾಂಡ್ಸ್ ವಿಶಾಲವಾದ ಭೂಪ್ರದೇಶವನ್ನು ಹೊಂದಿದೆ. ಆ ಭವ್ಯ ಬಂಧುರ ಪ್ರದೇಶದ ಮಧ್ಯೆ ಅತ್ಯಂತ ಪುರಾತನ ಓಕ್ಮರಗಳಿರುವುದೊಂದು ಅನಿರ್ವಚನೀಯ ಶೋಭೆ. ಒಂದೆಡೆ ಮೂರು ಮರಗಳು ಒಂದಕ್ಕೊಂದು ಸನಿಹದಲ್ಲಿದ್ದು ಸುಂದರ ಕುಂಜವನ್ನು ನಿರ್ಮಿಸಿವೆ. ಇನ್ನೊಂದೆಡೆ ಎರಡು ಮರಗಳು ದೂರದೂರದಲ್ಲಿದ್ದರೂ ಆಶ್ಚರ್ಯಕರ ರೀತಿಯಲ್ಲಿ ಬಾಗಿ ಒಂದನ್ನೊಂದು ಅಪ್ಪಿ ಹಿಡಿದು ಸೊಂಪಿನ ಕೊಂಬನ್ನು ಹರಿಸಿ ಎಲ್ಲಿಲ್ಲದ ಪ್ರೇಮ ಪ್ರದರ್ಶನ ಮಾಡಿವೆ. ಆ ದೃಶ್ಯಮಾನ ಸೌಂದರ್ಯ ಅಪೂರ್ವ ಶೋಭೆಯಿಂದ ಮಾಂಗಲ್ಯದ ಮಳೆಗರೆಯುತ್ತಿತ್ತು.

ದಂಪತಿಗಳು ಕುಂಜದ ತಂಪಿನಲ್ಲಿ ಕುಳಿತು ಸುತ್ತಮುತ್ತಿನ ಪ್ರಕೃತಿಯ ಸೊಬಗನ್ನುಂಡು ಮೈದುಂಬಿಕೊಂಡರು. ಅಂಗ ಪ್ರತ್ಯಂಗಗಳಲ್ಲಿ ಚಂದ್ರ ಶೀತಲ ಸ್ನಿಗ್ಧ ಲಹರಿಗಳು ಹೊಮ್ಮಿ ಕಾಂತಿಯುಕ್ತವಾಯಿತು. ದಿಗಂತದಿಂದ

ದಿಗಂತರಕ್ಕೆ ಹಿಮಗಾಳಿ ತೀಡತೊಡಗಿತು. ಇಬ್ಬರೂ ಎದ್ದು ಕೈಕೈಹಿಡಿದು ಗೃಹಾಭಿ ಮುಖವಾಗಿ ನಡೆದರು. ಓಕ್‌ಲ್ಯಾಂಡ್ಸ್ ದಾಟಿ ಮೂರು ಮೆಟ್ಟಲಿಳಿದು ಹಾದಿಗೆ ಕಾಲಿಟ್ಟಾಗ ಜಗತ್ತೇ ಮಧುಮಯವಾಗಿ ತೋರು ವಷ್ಟು ಹಿತವಾಗಿತ್ತು ಆ ಮುಹೂರ್ತ. ಅಲ್ಲಿಂದ ಹತ್ತು ಹೆಜ್ಜೆ ಮುಂದು ವರಿಯುವುದರೊಳಗಾಗಿ ಹೇಷಾರವ ಕೇಳಿ ಬಂತು. ಯಾರಿರಬಹುದೆಂದು ಗಮನಿಸುವುದರೊಳಗಾಗಿ ಅತ್ಯಂತ ಸನಿಹದಲ್ಲೇ ಖರ ಪುಟಗಳ ಸದ್ದು ಸ್ಪಷ್ಟವಾಗಿ ಕೇಳಿಸಿತು. ಟಕ. ಟಕ. ಟಕ. ಟಕ.

"ಶಹರದಿಂದ ಫೆಡ್ರಿಕ್ ಹಿಂದಿರುಗಿ ಬರುತ್ತಿರಬಹುದು" ಎಂದ ಮೈಕೇಲ್.

"ಇರಬಹುದು" ಎನ್ನುತ್ತ ನೋಟವನ್ನು ಹೆದ್ದಾರಿಯ ಕಡೆ ಹರಿಸಿ ದಳು ಕ್ಯಾಥರೀನ್.

ಕೆಲವು ಕ್ಷಣಗಳೊಳಗಾಗಿ ಆರ್ಲಿಯಿಂದ ಓಕ್‌ಲ್ಯಾಂಡ್ಸ್ ಕಡೆ ಹೊರ ಟಿದ್ದ ಎಡ್ವರ್ಡ್ ಎದುರಾದ. ಹಿರಿಯ ದಂಪತಿಗಳನ್ನು ನೋಡುತ್ತಲೂ ತರುಣ ಲಜ್ಜಾಮೂರ್ತಿಯಾಗಿ ಕುದುರೆಯಿಂದ ಕೆಳಗಿಳಿದು ನಗುಮುಖ ದಿಂದ ಅಭಿವಾದನ ಸಲ್ಲಿಸಿದ. "ಗುಡ್ ಈವ್ನಿಂಗ್ ಅಂಕಲ್! ಗುಡ್ ಈವ್ನಿಂಗ್ ಆಂಟಿ!"

"ಗುಡ್ ಈವ್ನಿಂಗ್! ಎಲ್ಲಿಗೆ ಹೊರಟೆ?"

ಕ್ಯಾಥರೀನಳ ಸರಸ ಮಧುರ ಧ್ವನಿ ಪ್ರಶ್ನೆ ಹಾಕಿತು.

ವೃದ್ಧ ದಂಪತಿಗಳು ಮೂರು ಮೈಲಿಗಳ ಮೇಲೆ ನಡೆದು ಬಂದಿರು ವಾಗ ತಾನು ಕುದುರೆ ಏರಿ ಬಂದುದು 'ಸಣ್ಣತನ'ವನ್ನು ಪ್ರದರ್ಶಿಸಿದಂ ತಾಯಿತೇನೋ ಎಂಬಷ್ಟು ಸಂಕೋಚದಿಂದ ಕೆಂಗೆನ್ನೆಗಳಿಗೆ ರಂಗೊರೆಯಿತು. ತಾನೂ ಸಹ ಓಕ್ ಲ್ಯಾಂಡ್ಸ್ ಕಡೆ ಹೋಗುವವನೇ ಒಂದು ಹೇಳಿಕೊಳ್ಳಲು ಮನಸ್ಸು ಬರಲಿಲ್ಲ. ಕರವಸ್ತ್ರದಿಂದ ಮುಖವನ್ನು ತೀಡಿಕೊಳ್ಳುತ್ತ ಮಾತು ತಿರುಗಿಸಿದ.

"ಎಷ್ಟು ದೂರ ನಡೆದು ಬಂದಿದ್ದೀರಿ?"

"ನೋಡು!" ದಂಪತಿಗಳು ಮುಗುಳು ನಕ್ಕರು.

"ಎಲಿಜ ಎಲ್ಲಿ ಕಾಣಿಸುವುದಿಲ್ಲವಲ್ಲಾ?" ಕೇಳಿದಳು ಕ್ಯಾಥರೀನ್.

"ಅವಳು ಶಹರಿಗೆ ಹೋಗಿದ್ದಾಳೆ. ನಾಳೆ ನಾಡಿದ್ದರಲ್ಲಿ ಹಿಂದಿರುಗ ಬಹುದು."

"ನಿನಗೆ ಒಂಟಿಯಾಗಿ ಬೇಸರ ಹತ್ತಿತೇ ?"

ತರುಣನ ಶೋಣವರ್ಣದ ಮುಖ ತಟ್ಟನೆ ಮಂಗಳಮಯ ವಾಯಿತು. ಪ್ರಶಸ್ತವಾದ ಹಣೆಯಲ್ಲಿ ಉಬ್ಬಿನಿಂತ ನರಗಳ ನೇರಕ್ಕೆ ಹರಿದಾಡು ತಿದ್ದ ಕೆಂಗೂದಲು ಗಾಳಿಗೆ ಅಲುಗುತಿತ್ತು. ವಿಶಾಲ ನೇತ್ರದ್ವಯಗಳಲ್ಲಿ ಮಿಂಚಿ ನಂತಹ ಹೊಳಪನ್ನು ಬೀರಿ, ಹಣೆಗೂದಲನ್ನು ಹಿಂದಕ್ಕೆ ತಳ್ಳುತ್ತ ಅಂದ "ಅದರಿಂದಲೇ ಕುದುರೆಯಮೇಲೆ ಬಂದದ್ದು !"

ಮೂವರೂ ಕಿಲಕಿಲನೆ ನಕ್ಕರು.

ಎಡ್ವರ್ಡ್ ಕುದುರೆಯ ಲಗಾಮನ್ನು ಹಿಡಿದು ಜೊತೆಗೂಡಿ ನಡೆ ಯುತ್ತಾ-, "ಇಲ್ಲಿಯ ನರ್ಸರಿ ಸ್ಕೂಲಿಗೆ ಹೊಂದಿಕೊಂಡಂತೆ ಇನ್ನೊಂದು ಹೈಯರ್ ಸೆಕಂಡರಿ ಸ್ಕೂಲನ್ನು ತೆರೆಯುವ ಆಲೋಚನೆ ನಮಗಿದೆ. ಕಂಟ್ರಿ ಕೌನ್ಸಿಲ್ ಅಭಿಪ್ರಾಯವೂ ಸಹ ಅದೇ."

"ಮೂರನೇ ಬ್ಲಾಕಿನಲ್ಲಿ ತೆರೆಯುವ ಯೋಚನೆಯಿತ್ತಲ್ಲ ?"

"ಆ ಸ್ಥಳ ಕಿಷ್ಕಿಂಧವಾದ್ದರಿಂದ ಇಲ್ಲೇ ತೆರೆಯಲು ತೀರ್ಮಾನಿಸಿದೆವು."

"ಓ ಸರಿ. ಒಳ್ಳೆಯದಾಯಿತು, ಮಕ್ಕಳಿಗೆ ವಿಶಾಲವಾದ ಸ್ಥಳ ಬೇಕೇ ಬೇಕು" ಎಂದಳು ಕ್ಯಾಥರೀನ್. ಹರ್ಷಪೂರ್ಣಧ್ವನಿ ಸಾರಸಗಳ ಕ್ರೇಂಕಾರ ದಂತೆ ಹರಿದು ಬಂತು.

"ಯೂತ್ಸ್ ಯೂನಿಯನ್ ಬಹಳ ಜೋರಾಗುತ್ತಿದೆ !" ಮೆಚ್ಚಿಗೆ ಸೂಚಿಸಿದ ಮೈಕೇಲ್.

"ಸೊಸೈಟಿ-ಲೈಬ್ರರಿ-ಶಾಲೆ-ಆಸ್ಪತ್ರೆ ನಿಮಗೆ ಕೀರ್ತಿಶಿಖರವಾಗಿವೆ. ಆದರೆ, ಆಸ್ಪತ್ರೆಗೆ ಔಷಧಿಯ ಸಲಕರಣೆಗಳೂ ಹಾಸಿಗೆಗಳೂ ಸಾಲವು."

"ಈ ಸಾಲಿನಲ್ಲಿ ಹೆಚ್ಚಿಸುತ್ತೇವೆ."

"ಅಷ್ಟಾದರೆ ಸಣ್ಣ ಪುಟ್ಟದಕ್ಕೂ ಶಹರಿಗೆ ಓಡುವುದು ತಪ್ಪುತ್ತೆ."

"ಇನ್ನೂ ನೋಡುತ್ತೀರಿ, ಆಂಟಿ !" ಹರ್ಷೋನ್ಮತ್ತನಾಗಿ ನುಡಿದ ಎಡ್ವರ್ಡ್.

ಭಗವಾನ್ ಭಾಸ್ಕರ ಉಜ್ವಲ ಮಿಂಚಿನ ಅಭಿನವ ರಸದಲ್ಲಿ ಜನ್ಮ

ಜನ್ಮಾಂತರಗಳನ್ನು ಅದ್ದಿ ಸ್ನೇಹ ಬಂಧುರಧಾರೆಯಲ್ಲಿ ಪ್ಲಾವಿತಗೊಳಿಸುತ್ತಾ ಇನ್ನೊಂದು ಅನನುಭೂತ ಜಗತ್ತಿಗೆ ಪಯಣಿಸುತ್ತಿರುವಂತೆ ಭಾಸವಾಗುತ್ತಿತ್ತು. ದಿಗಂತದಲ್ಲಿ ಹೊನ್ನಿನ ಸೀಮಾರೇಖೆಯಂತೆ ಕಂಗೊಳಿಸುತಿದ್ದ ಬಿಂಬ ಕೆಲವೇ ಕ್ಷಣಗಳಲ್ಲಿ ಕಣ್ಮರೆಯಾಯಿತು. ಮಾರ್ಗಯೋಗದಲ್ಲಿ ಪದವಿನ್ಯಾಸಗಳಿಗೆ ಸಿಕ್ಕಿ ದರುಗೆಲಿಗಳು ಸೃಷ್ಟಿಸುವ 'ಲಲಲ' ಶಬ್ದಧಾರೆ ಕರುಣ ಮನೋಹರವಾಗಿ ಮನವನ್ನು ಆವರಿಸುತ್ತಿತ್ತು. ಕುದುರೆಯ ಖುರ ಪುಟಗಳ ಆಘಾತ-ಪ್ರತ್ಯಘಾತಗಳಿಂದ ಮೇಲೇಳುವ ಸಣ್ಣ ಧೂಳು ಪ್ರಕೃತಿಯ ಶೋಭಾಸಾಗರದಲ್ಲಿ ಕೇವಲ ಸಣ್ಣ ತರಂಗಾಣುವೊಂದು ಶಾಂತವಾಗಿ ಎದ್ದು ಅಲ್ಲಿಂದಲ್ಲೆ ಕ್ಷಯಿಸುವಂತೆ ತೋರುತಿತ್ತು.

ಮೈಕೇಲ್ ಮುಖವನ್ನು ಒರೆಸಿಕೊಂಡು ಕರವಸ್ತ್ರವನ್ನು ಅಂದವಾಗಿ ಮಡಿಸುತ್ತ ಅಂದ "ನಿಮ್ಮ ಯೂತ್ಸ್ ಯೂನಿಯನ್ನಿನ ಚಟುವಟಿಕೆಗಳನ್ನು ಯಾರಾದರೂ ಮೆಚ್ಚಬಹುದಾಗಿದ್ದರೂ ನಿಮ್ಮ ದೃಷ್ಟಿಕೋನ ಕೇವಲ ಆನಂದ ಭೋಗದೆಡೆಗೇ ಹರಿಯಬಾರದು."

"ಹಾಗೇನಿಲ್ಲ ಅಂಕಲ್....."

ಕ್ಯಾಥರೀನ್ ನಡುವೆ ಬಾಯಿ ಹಾಕಿದಳು "ನೋಡು. ಮಗೂ, ಕಳೆದ ತಿಂಗಳು ಓಲ್ಡ್ ಪೀಪಲ್ಸ್ ಹೋಂನಲ್ಲಿ ಹಿಟ್ಟು ಮುಗಿದು ಹೋಗಿ ಒಂದು ದಿನ ರೊಟ್ಟಿಯಿಲ್ಲದೆ ಕಳೆದ ದಾರಣ ಪ್ರಸಂಗ ನಿನಗೂ ತಿಳಿದಿದೆ. ಅದೃಷ್ಟವಶಾತ್ ನಮ್ಮಲ್ಲಿ ಗೋದಿ ಇತ್ತು. ಒಂದುಮೂಟೆ ಹಿಟ್ಟು ಕೊಟ್ಟೆ. ಇಲ್ಲದಿದ್ದಲ್ಲಿ ಅವರು ಎಂಥ ಕಷ್ಟವನ್ನು ಎದುರಿಸಬೇಕಾಗಿತ್ತು ?"

"ನಿಜ.....ಮುಖ್ಯವಾಗಿ ಅವರ ಮಕ್ಕಳಿಗೆ ಗಮನವಿರಬೇಕಾಗಿತ್ತು. ಅನೇಕರು ಇಲ್ಲೇ ಇದ್ದು ಗಮನಿಸದಿದ್ದುದೂ ಸಹ ವಿಶೇಷವೇ."

"ನಿಮ್ಮ ಮೀಟಿಂಗ್ ಕೂಡಿದಾಗ ಈ ವಿಷಯ ಪ್ರಸ್ತಾಪಿಸಿ ಮುಂದೆ ಇಂತಹ ತೊಂದರೆ ಬಾರದಂತೆ ಸೂಕ್ತ ಏರ್ಪಾಡು ಮಾಡಿರಿ."

"ಆಗಲಿ, ಆಂಟಿ."

"ನಿನ್ನ ವಿವಾಹದ ಕತೆ ಏನಾಯಿತು ? ಎಲಿಜ ಏನು ಹೇಳುತ್ತಾಳೆ?"

"ಇನ್ನೂ ಯಾವುದೂ ನಿರ್ಧರವಾಗಲಿಲ್ಲ. ಮುಖ್ಯವಾಗಿ ನಮಗೊಂದು ಗುಡಿಸಲು ಬೇಕಲ್ಲ ?"

"ಎಲ್ಲೂ ಬಾಡಿಗೆಗೆ ದೊರೆಯದೇನು ?"

"ಎಲ್ಲೂ ಇಲ್ಲ. ನಾವೇ ಕಟ್ಟುವ ಯೋಚನೆ ಇದೆ."

ಶಹರಿನಿಂದ ಬಂದ ಬಸ್ಸು ಹೆದ್ದಾರಿಯಲ್ಲಿ ನಿಂತಿತು.

ಜನರು ತಮ್ಮ ತಮ್ಮ ಬ್ಯಾಗುಗಳೊಡನೆ ಇಳಿದು ಇತ್ತಲೇ ಬಂದರು.

ಅವರೊಂದಿಗೆ ನಾಳೆ ಬರಬೇಕಾಗಿದ್ದ ಎಲಿಜಬೆತಳೂ ಇದ್ದಳು. ಅವಳನ್ನು ನೋಡುತ್ತಲೂ ಆನಂದೋನ್ಮತ್ತನಾದ ಎಡ್ವರ್ಡ್. ದೂರ ಪಯಣದಿಂದ ಆಕೆಯ ಮುಖಮಂಡಲ ಮ್ಲಾನವಾಗಿದ್ದರೂ ತನ್ನ ಭಾವೀಪತಿಯ ಮುಖ ದರ್ಶನ ಮಾತ್ರದಿಂದ ಮೂಡಿದ ಅಪೂರ್ವ ಮಂಗಳ ಶೋಭೆ ದರ್ಶನೀಯವಾಗಿತ್ತು. ಸುಂದರ ಕಪೋಲಪಾಲಿ ವಿಚಿತ್ರ ವಿಕಾಸದಿಂದ ರಂಗು ತಳೆದು ಮೋಹಕತೆಯಿಂದ ವಿಜೃಂಭಿಸಿದುವು. ಜಲಹಾರಿಣೀ ಪಕ್ಷಿಗಳ ಉನ್ಮತ್ತ ಕ್ರೇಂಕಾರದಂತೆ ಆಕೆ ಅಲ್ಲಿಂದಲೇ ಕೇಕೆ ಹಾಕಿದಳು–"ಹಾಯ್ ! ಎಡ್ಡಿ ! !"

"ನೀನು ಇಂದೇ ಬರುವಿ ಎಂದು ನನಗೆ ತಿಳಿದಿತ್ತು!"

"ಹೇಗೆ.....?"

"ಅಂತಃಪ್ರಜ್ಞೆ ಅಷ್ಟೂ ಗ್ರಹಿಸದೇ ?"

ಅವಳ ಕೈಯಲ್ಲಿದ್ದ ಬ್ಯಾಗನ್ನು ಎಡ್ವರ್ಡ್ ತೆಗೆದುಕೊಂಡ. ಆಕೆ ಮೈಕೇಲ್ ದಂಪತಿಗಳಿಗೆ ಅನುನಯದಿಂದ ಅಭಿವಾದನೆ ಸಲ್ಲಿಸಿದಳು–"ಗುಡ್ ಈವ್ನಿಂಗ್ ಅಂಕಲ್ ! ಗುಡ್ ಈವ್ನಿಂಗ್ ಆಂಟಿ !"

ಗುಡ್ ಈವ್ನಿಂಗ್ !"

ಅವರಿಬ್ಬರೂ ಹಾಲು ಸಕ್ಕರೆಗಳೊಂದಾದಂತೆ ಒಂದಾಗಿ ಊರಿಗಭಿಮುಖವಾಗಿ ನಡೆದರು. ಕಪ್ಪು ಕುದುರೆ ಅವರೊಂದಿಗೆ ಆತ್ಮೀಯ ಗೆಳೆಯನಂತೆ ಹೆಜ್ಜೆ ಹಾಕುತಿತ್ತು. ದೂರದ ತಿರುವಿನಲ್ಲಿ ತಿರುಗಿಹೋಗುವ ಸಮಯದಲ್ಲಿ, ಹಾಯ್ ಅಂಕಲ್ ! ಹಾಯ್ ಆಂಟಿ !"

ಇಲ್ಲಿಂದ ಮರುಧ್ವನಿ ಹೊಮ್ಮಿತು "ಹಾಯ್ ! ಹಾಯ್ !"

ಹೆದ್ದಾರಿಯಿಂದ ಬಂದವರೊಡನೆ ಪರಸ್ಪರ ವಂದನೆಗಳ ವಿನಿಯೋಗ ನಡೆಯಿತು. ಅವರು ಅವಸರವಸರವಾಗಿ ಹೊರಟರು, ಮೈಕೇಲ್ ದಂಪತಿಗಳು ನಿಧಾನಗತಿಯಲ್ಲಿ ಹೆಜ್ಜೆ ಹಾಕಿದರು.

ನೋಟದ ನೇರಕ್ಕೆ ನೈರುತ್ಯ ದಿಕ್ಕಿನ ದಿಣ್ಣೆಯ ಮೇಲೆ ಶೋಭಿಸುವ ಮೆಥಡಿಸ್ಟ್ ಚರ್ಚು ಹಸುರಿನ ಹಿನ್ನೆಲೆಯಲ್ಲಿ ಧವಳಾಗಾರದಂತೆ ನಯನ ಮನೋಹರವಾಗಿತ್ತು. ಮನೆಮನೆಯ ಹೊಗೆ ಕೊಳವೆಗಳು ಹೊಗೆಯನ್ನು ಉಗುಳುತ್ತಿವೆ. ಸಂಧ್ಯಾದೀಪಗಳ ಪ್ರಭಾವರ್ಷಣ ಆರ್ಲಿಯ ಸುಂದರ ವಿನ್ಯಾಸವನ್ನು ಚಿನ್ನದರೇಖೆಯಲ್ಲಿ ಚಿತ್ರಿಸಿದಂತೆ ಚಿತ್ರಿಸಿದೆ.

ಆ ಮನಮೋಹಕ ಸೊಬಗನ್ನು ಸವಿಯುತ್ತ ದಂಪತಿಗಳು ಮುನ್ನಡೆದರು.

ಮುಸ್ಸಂಜೆಯ ಮಬ್ಬು ಬೆಳಕಿನಲ್ಲಿ ನಾನಾವರ್ಣರಂಜಿತ ಚಿಟ್ಟೆಗಳೂ ಗಗನ ವಿಹಾರೀ ಪಕ್ಷಿಗಳೂ ಅಲ್ಲಲ್ಲಿ ಮಂಡಲಾಕಾರವಾಗಿ ಸುತ್ತುತ್ತ ಗೂಡುಗಳನ್ನರಸುತ್ತಿದ್ದುವು. ಗಗನತಲದಲ್ಲಿ ಬೆಳ್ಮೋಡಗಳು ಮಂದ್ರಗತಿಯಲ್ಲಿ ಹರಿದಾಡುತ್ತಿವೆ. ಮಂದ ಪವನನೊಡನೆ ಸ್ಪರ್ಧೆಹೂಡಿ ಸವಿಸ್ತಾರವಾದ ಬಯಲನ್ನು ದಾಟಿ ಫಾರಂ-ಗಳಂಚಿಗೆ ಕಾಲಿಟ್ಟಾಗ ದೃಷ್ಟಿಯ ಕಕ್ಷೆಗೆ ನಿಲುಕುವ ಮನೆಮನೆಗಳಲ್ಲಿ ಸ್ತ್ರೀ ಪುರುಷರು ಆರಾಮವಾಗಿ ಕುಳಿತು ಮಾತುಕತೆಯಲ್ಲಿ ತೊಡಗಿದ್ದುದು ಕಾಣಬಂತು. ಮಕ್ಕಳು ಸಾರಂಗಗಳಂತೆ ಅತ್ತಿತ್ತ ಜಿಗಿದಾಡುತ್ತ ಆಟವಾಡುತಿದ್ದರು. ಫಾರಂ-ಸಂಪತ್ತಿನಲ್ಲಿ ಮನೆಗಳ ಪ್ರಾಂಗಣದಲ್ಲಿ ಗೋಚರಿಸುವ ಹೆಮ್ಮರಗಳು ಹಸುರು ಸೂಸುತ್ತಿವೆ. ಎಲ್ಲಿಂದ ಎಲ್ಲಿಯವರೆವಿಗೂ ಪುರಾತನ ಪವಿತ್ರ ಸಂಸ್ಕೃತಿಯಂತೆ ಗೋಚರಿಸುವ ಆರ್ಲಿ ಕಾವ್ಯಕಲ್ಪನೆಗೆ ಸ್ವರ್ಗ ಸದೃಶ.

ಆಕೆಯ ಭಾವೋಜ್ವಲವಾದ ಸುಂದರ ಸುನೀಲ ನೇತ್ರಗಳು ಯಾವುದೋ ಅನಿರ್ವಚನೀಯವಾದ ಆನಂದ ಜ್ಯೋತಿಯಿಂದ ಪ್ರದೀಪ್ತವಾದುವು. ಬಳಸು ದಾರಿಯನ್ನು ಹಿಡಿದು ಅಭಿರಾಮವಾಗಿ ಮನೆಗೈತಂದ ಅಭಿಶಸ್ತ ಹೆಜ್ಜೆಗಳ ಸದ್ದು ತಾಳಲಯ ಬದ್ಧವಾಗಿ ಹೊಮ್ಮುತಿತ್ತು. ಮಾನಸ ನಿವೇದನೆಗೆ ಪೂರಕದಂತೆ ಹೃದಯಗಾನ ಜಯನಿನಾದದಿಂದ ವಿಜೃಂಭಿಸುತಿತ್ತು.

ಅಗ್ಗಿಷ್ಟಿಕೆಯ ಬೆಂಕಿಯನ್ನು ಕೆದಕಿ ಪುಸ್ತಕವೊಂದನ್ನು ತೆಗೆದುಕೊಂಡಳು ಕ್ಯಾಥರೀನ್. ರಜತಸಲಾಕೆಯಂತಹ ಅಂಗಯಷ್ಟಿಗೆ ಪೀತವರ್ಣದ ಉಡುಪು ಗುಲಾಬಿವರ್ಣದ ವದನರಾಜಿಗೆ ಬೆಳ್ಳಿಯ ಕೂದಲ ಸರಳ

ಸುಂದರ ಮುಡಿ. ಬೆರಳಲ್ಲಿ ಮಂಗಳದ ಕುರುಹಾದ ಉಂಗುರ. ಅಂದಿಂದಿನ ಸರ್ವೇ ಸಾಮಾನ್ಯ ಉಡುಗೆ ತೊಡುಗೆ ಮನಮೋಹಕ ಸರಳತೆ ಅಜ್ಞಾತ ಅಭಿಜ್ಞಾನವನ್ನು ಅಂಗ–ಪ್ರತ್ಯಂಗಗಳಲ್ಲಿ ಹೊಮ್ಮಿಸುತಿತ್ತು.

ಒಡತಿಯು ಅಗ್ಗಿಷ್ಟಿಕೆಯ ಬಳಿಕುಳಿತುಕೊಳ್ಳುತ್ತಲೂ ಅಂಗಳದಲ್ಲಿದ್ದ ಜೂಲುನಾಯಿ ಒಳಗಡೆ ಚಿತ್ತೈಸಿತು. ಮೈಕೇಲ್ ಪಕ್ಕದ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಾ–"ಅದಿನ್ನೂ ಓದಿ ಮುಗಿಯಲಿಲ್ಲವೇ ಡಾರ್ಲಿಂಗ್ ?"

"ಇಂದು ಸ್ವಲ್ಪವಾದರೂ ಬಿಡುವಾಗಿದ್ದರೆ ತಾನೆ?"

ಹಗ್ಗದ ಮೇಲೆ ಒಣಗಲು ಹಾಕಿದ ಬಟ್ಟೆಗಳ ಕಡೆ ನಿಟ್ಟಿಸಿ ನೋಡಿ ನುಡಿದಳು ಕ್ಯಾಥರೀನ್. ಒಂದು ವಾರದಿಂದ ಕಲೆಹಾಕಿದ ಕೊಳಕು ಬಟ್ಟೆಗಳನ್ನು ಒಗೆದಿರುವುದನ್ನು ಗಮನಿಸಿ ಏನೂ ಹೇಳದೆ ಚಾಚಿದ ಕಾಲನ್ನಾಡಿಸುತ್ತಾ ಹಾಗೇ ಕುಳಿತ ಮೈಕೇಲ್. ತೆರೆದ ಅಧ್ಯಾಯವನ್ನು ಮುಗಿಸಿ ಕ್ಯಾಥರೀನ್ ಸಮಾಧಾನ ಪೂರ್ವಕವಾಗಿ ನುಡಿದಳು,

"ಕ್ರಮಕ್ರಮೇಣ ಈ ಯೂತ್ಸ್ಯೂನಿಯನ್ ಬಹಳ ಪ್ರಸಿದ್ಧಿಗೆ ಬರುವುದರಲ್ಲಿ ಅನುಮಾನವೇ ಇಲ್ಲ. ಏನೇನೂ ಇಲ್ಲದ ಈ ಹಳ್ಳಿಗೆ ಕೇವಲ ಅತ್ಯಲ್ಪ ಕಾಲದಲ್ಲಿ ಏನೆಲ್ಲಾ ಸೌಕರ್ಯವೊದಗಿಸಿದ್ದಾರೆ !

"ನಿಜ." ತಲೆದೂಗಿದ ಮೈಕೇಲ್.

"ನಿನಗೆ ಪುಸ್ತಕ ಓದುವ ಅಭ್ಯಾಸವೇ ಇಲ್ಲ. ಲೈಬ್ರರಿಯಲ್ಲಿ ಎಂತೆಂತಹ ಪುಸ್ತಕಗಳಿವೆ ಹೋಗಿ ನೋಡು ! ನೋಡಿದರೆ ನೀನು ಖಂಡಿತ ಆಶ್ಚರ್ಯ ಪಡುತ್ತಿ ಸೊಗಸಾದ ಲೈಬ್ರರಿ ಮಾಡಿದ್ದಾರೆ."

"ಓದದೆ ಏನು ? ಸ್ವಲ್ಪವಾದರೂ ಬಿಡುವಾದರಷ್ಟೆ ?"

ಎನ್ನುತ್ತಲೇ ಎದ್ದು ಹೋಗಿ ಪಶುಪಕ್ಷಿಗಳಿಗೆ ಸಂಜೆಯ ಗ್ರಾಸವನ್ನು ಪೂರೈಸಿ ಗೋಶಾಲೆಯ ಮತ್ತು ಕುಕ್ಕುಟ ಕೇಂದ್ರಗಳ ಕದವನ್ನು ಮುಚ್ಚಿ ಒಳಬಂದ ಮೈಕೇಲ್. ಓದಿನಲ್ಲಿ ಸಂಪೂರ್ಣ ನಿಮಗ್ನಳಾದ ಮಡದಿಯ ಕಡೆ ದಿಟ್ಟಿ ಹೊರಳಿದಾಗ ಹೃದಯದ ಹೊಂಗಡಲು ತುಂಬಿ ಬಂತು. ಇಂದಿನ ನವ ತರುಣಿಯರಿಗೆ ಮಾದರಿಯಾಗುವಂತಹ ಹೆಣ್ಣಿನ ಕೈಹಿಡಿದ ತನ್ನ ಅಹೋ ಭಾಗ್ಯ ಚಿತ್ತಭಿತ್ತಿಯಲ್ಲಿ ತಳಕ್ಕನೆ ಸುಳಿದಳಿದಾಗ ಮನವನ್ನು ಆ ತಾರುಣ್ಯ ಯುಕ್ತ ಸುಂದರ ದಿನಗಳಿಗೆ ಹೊರಳಿಸಿದ....ಜೀವನರಂಗಕ್ಕೆ ಕಾಲಿಟ್ಟಾಗ

ಇಬ್ಬರೂ ಹದಿನೈದು ಹದಿನಾರರ ಎಳೆಯರು. ಅಂದಿನಿಂದ ಇಂದಿನವರೆಗೆ ಜೀವನದ ಸಾರವನ್ನುಂಡು ತನು ತುಂಬಿಕೊಂಡ ದಂಪತಿಗಳಿಗೆ ಬಹುಶಃ ಸಗ್ಗದ ಬಯಕೆ ಒಮ್ಮೆಯೂ ಮೂಡಿರಲಿಲ್ಲವೇನೋ....

ಸ್ವಲ್ಪ ಹೊತ್ತು ರುದ್ರಗಂಭೀರವಾಗಿ ಉರುಳಿತು.

ಪ್ರಾಕಾರದ ಬಾಗಿಲನ್ನು ದಾಟಿ ಜೇವ್ಸ್ ಒಳ ಬಂದ.

ಮೈಕೇಲ್ ಇಲ್ಲಿಂದಲೇ ಅಂದ "ಏನಪ್ಪಾ, ವಿಶೇಷ ?"

ಜೇವ್ಸ್ ಜಗಲಿಯಲ್ಲಿದ್ದ ಇನ್ನೊಂದು ಕುರ್ಚಿಯನ್ನು ತಾನೇ ತೆಗೆದುಕೊಂಡು ಬಂದು ಬಳಿಯಲ್ಲಿ ಕುಳಿತ. ಅವನನ್ನು ಮುಗುಳುನಗೆಯಿಂದ ಸ್ವಾಗತಿಸುತ್ತಾ ಕ್ಯಾಥರೀನ್–"ನಿಮ್ಮ ಚಟುವಟಿಕೆಗಳು ಯಾರಾದರೂ ಮೆಚ್ಚುವಂತಾದ್ದು!"

"ಆಂಟಿ ಮೆಚ್ಚಿದ ಮೇಲೆ ಎಲ್ಲರೂ ಮೆಚ್ಚಿದಂತೆಯೇ !"

"ನಿಜ....ಆಕೆಯ ಭಾವನೆಗಳು ಅದ್ಭುತ !"

ಮೂವರ ಮುಖ ಮಂಡಲಗಳೂ ಆನಂದ ಪ್ರಭೆಯಿಂದ ಮಂಗಳಮಯವಾದುವು.

ಅದೇ ಸಮಯದಲ್ಲಿ ಎಡ್ವರ್ಡ್ಡ ಫ್ರೆಡ್ರಿಕ್ ಮತ್ತು ಎಲಿಜಾ ಆಗಮಿಸಿದರು. ಪರಸ್ಪರ ಆತ್ಮೀಯತೆಯ ಕುರುಹಾಗಿ ಎಲ್ಲರ ಅಧರೋಷ್ಠಗಳು ಮುಗುಳು ನಗೆಯನ್ನು ಚೆಲ್ಲಿದುವು. ಮೂವರೂ ಊಟದ ಮೇಜಿನ ಬಳಿಯಲ್ಲಿದ್ದ ಕುರ್ಚಿಗಳನ್ನು ತಂದು ಬಳಿಯಲ್ಲಿಟ್ಟುಕೊಂಡು ಕುಳಿತರು. ಎಡ್ವರ್ಡ್ಡ ಮಾತಿಗಾರಂಭಿಸಿದ,

"ಅಂಕಲ್ ! ನಾವೊಂದು ಬೇಡಿಕೆಗಾಗಿ ನಿಮ್ಮಲ್ಲಿಗೆ ಬಂದಿದ್ದೇವೆ."

"ಅದೇನೆಂಬುದು ನಮಗೆ ಗೊತ್ತು !" ದಂಪತಿಗಳು ಕಣ್ಣರಳಿಸಿದರು.

"ಹೇಳಿ.....ಹೇಳಿ."

"ಕೈಚೀಲದ ಕಡೆ ನಿಮ್ಮ ಕಣ್ಣು ಬಿದ್ಧಿರಬಹುದು !"

"ಅಲ್ಲ, ಅಲ್ಲ !" ಎಲಿಜಬೆತ್ ಕಿಲಕಿಲ ನಕ್ಕಳು.

ಫ್ರೆಡ್ರಿಕ್ ನುಡಿದ "ಓಕ್‌ಲ್ಯಾಂಡ್ಸ್ ಯೂತ್ಸ್ ಯೂನಿಯನ್ನಿಗೆ ಬೀಟ್ಟುಕೊಡಿ ಎಂಬುದು ನಮ್ಮ ಸವಿನಯ ಬೇಡಿಕೆ."

"ಏಕೆ ?....ಅಲ್ಲೇನು ಮಾಡಬೇಕೆಂದಿದ್ದೀರಿ ?" ಕ್ಯಾಥರೀನಳ ಗಂಭೀರ ಪ್ರಶ್ನೆ.

"ಯೂತ್ಸ್ ಯೂನಿಯನ್ನಿನ ಚಟುವಟಿಕೆಗಳಿಗೆ ಇಲ್ಲಿ ಸ್ಥಳ ಸಂಕೋಚ. ಅಲ್ಲಾದರೆ ವಿಶಾಲ ಕ್ಷೇತ್ರವಾಗುತ್ತೆ. ಎಲ್ಲವನ್ನೂ ಒಂದೆಡೆ ನಡೆಸಿಕೊಳ್ಳ ಬಹುದು. ಆಟ-ಕೂಟ ಎಲ್ಲಕ್ಕೂ ಅನುಕೂಲ."

ಮೈಕೇಲ್ ದಂಪತಿಗಳು ಒಂದು ಘಳಿಗೆ ಸುಮ್ಮನಾದರು. ಹಳ್ಳಿಯ ಹೊರವಲಯದಲ್ಲಿರುವ ಆ ಸ್ಥಳ ತಮಗೆ ಪೂರ್ವಜರಿಂದ ಬಂದ ಕೊಡುಗೆ ಯಾದರೂ ಶುಭ್ರವಾತಾವರಣವಿರುವ ದಿನಗಳಲ್ಲಿ ಅದೊಂದು ಹಳ್ಳಿಗೆ ವಿಹಾರಸ್ಥಳವಾಗಿತ್ತು. ಅದಲ್ಲಿರುವ ಓಕ್ ಮರಗಳ ಇತಿಹಾಸವನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಬಣ್ಣಿಸುತ್ತಿದ್ದರು. ಕೆಲವರು ಅವು ಪ್ರಕೃತಿದತ್ತವಾದುವು ಎಂದರೆ ಅನೇಕರು ತಮ್ಮ ತಮ್ಮ ಪೂರ್ವಜರು ನೆಟ್ಟು ಬೆಳೆಸಿದರೆಂದು ಹೇಳಿಕೊಳ್ಳುತ್ತಿದ್ದರು ಅದೇನೇ ಇರಲಿ, ತಮ್ಮ ಹಿರಿಯರಂತೆ ಮೈಕೇಲ್ ದಂಪತಿಗಳೂ ಅದನ್ನು ಫಾರಂಗಾಗಿ ಉಪಯೋಗಿಸಿ ಕೊಳ್ಳಲಿಲ್ಲ. ಹಳ್ಳಿಯ ಒಳಾಂತರದಲ್ಲಿದ್ದ ಭೂಮಿಯೇ ಫಾರಂ-ಗೆ ಪ್ರಶಸ್ತ ವಾಗಿದ್ದುದರಿಂದ ಅದು ವಿಹಾರ ಸ್ಥಳವಾಗಿಯೇ ಉಳಿಯಿತು. ಈಗ ಅದರ ಮೇಲೆ ಯೂತ್ಸ್ ಯೂನಿಯನ್ನಿನ ಕಣ್ಣು ಬಿದ್ದುದರಿಂದ ಮೈಕೇಲ್ ಹತ ಪ್ರಭನಾದ. ಕ್ಯಾಥರೀನ್ ಯೋಚಿಸಿ ಹೇಳಿದಳು "ಹೇಗಿದ್ದರೂ ನಾವು ನಮ್ಮ ಆಸ್ತಿಯನ್ನು ಯಾವುದಾದರೂ ರೀತಿಯಲ್ಲಿ ಸದುಪಯೋಗ ಹೊಂದುವಂತೆ ಉಯಿಲು ಮಾಡಲೇಬೇಕು. ಅದನ್ನು ಯೂನಿಯನ್ನಿಗೆ ಕೊಡುವುದು ಸೂಕ್ತ. ಈಗಲೂ ಸಹ ಅದು ಎಲ್ಲರ ವಿಹಾರ ಸ್ಥಳವಾಗಿದೆ; ಈಗಿನಂತೆಯೇ ಮುಂದೆಯೂ ಸಹ ಇರುವುದು ಒಳ್ಳೆಯದು. ಏನೇ ಬರಲಿ, ಅದನ್ನು ಮಾರುವುದಂತೂ ಬೇಡ. ಹಿರಿಯರಿಂದ ನಮಗೆ ಹೇಗೆ ಕೊಡುಗೆಯಾಗಿ ಬಂದಿದೆಯೋ ಹಾಗೆಯೇ ನಾವೂ ಸಹ ಕೊಡುಗೆಯಾಗಿಯೇ ಕೊಡೋಣ."

ಮೈಕೇಲ್ ಆ ತೀರ್ಮಾನಕ್ಕೆ ಒಪ್ಪಿಕೊಂಡರೂ ಈಗಲೇ ಕೊಡಬೇಕೆ ಎಂಬುದು ತರ್ಕಬದ್ಧ ವಿಷಯ. ಮಡದಿಯ ಉತ್ತೇಜನಕ್ಕೆ ಮಣಿದರೂ ಮನಸ್ಸು ಉತ್‌ಕ್ಷಿಪ್ತವಾಗಿತ್ತು. ವಿಷಯ ಪುನಃ ಚರ್ಚಿತವಾಯಿತು. ಮೂರುದಿನಗಳಲ್ಲಿ ಉತ್ತರ ಹೇಳುವುದಾಗಿ ಹೇಳಿ ತರುಣ ವೃಂದವನ್ನು ಬೀಳ್ಕೊಟ್ಟರು-ಮೈಕೇಲ್ ದಂಪತಿಗಳು.

ಸ್ವರ್ಣ ವಿಗ್ರಹವತೀ ಶೋಭೆಯುಂತೆ ಮಂಡಿಸಿದ್ದ ಕ್ಯಾಥರೀನ್ ಪುಸ್ತಕವನ್ನು ಎತ್ತಿಟ್ಟು ಊಟಕ್ಕೆ ಅಣಿಗೊಳಿಸಹತ್ತಿದಳು. ಮೈಕೇಲ್ ಅವಳ ಕೆಲಸ ಕಾರ್ಯಗಳಲ್ಲಿ ಪಾಲುಗೊಂಡ ಖಾದ್ಯಗಳನ್ನು ಬಟ್ಟಲುಗಳಿಗೆ ಬಡಿಸುತ ನುಡಿದಳು ಕ್ಯಾಥರೀನ್ "ಹೇಗಿದ್ದರೂ ನಮ್ಮ ಆಸ್ತಿ ಓಲ್ಡ್ ಪೀಪಲ್ಸ್ ಹೋಂ-ಗೋ ಅಥವಾ ಇನ್ನಾವುದಾದರೂ ಚಾರಿಟಿಗೋ ಹೋಗಲೇಬೇಕು. ನಮ್ಮ ನಂತರ ಹೋದರೆ ನಮಗೆ ಏನು ಬಂದ ಹಾಗಾಯಿತು ? ಈಗಲೇ ಕೊಟ್ಟರೆ ನಮ್ಮವರ ಪುರೋಭಿವೃದ್ಧಿಯನ್ನು ನಾವು ಸ್ವಂತ ಕಣ್ಣುಗಳಿಂದ ನೋಡಬಹುದಷ್ಟೆ ?"

ಮಡದಿಯ ವಿಚಾರ ಸರಣಿ ಮೋಹಗ್ರಸ್ತ ಮನವನ್ನು ಮಂದಾರ ಪುಷ್ಪದಂತೆ ಅರಳಿಸಿ ವಿಭ್ರಮ ವೀಚಿಯನ್ನು ತೊಡೆದುಹಾಕಿತು. ಭಾವ ಪೂರ್ಣಕಣ್ಣುಗಳಲ್ಲಿ ಕಾಂತಿಯು ಪ್ರಜ್ವಲಿಸಿತು. ಮೈಕೇಲ್ ನಿಶ್ಶೇಷಭಾವ ದಿಂದ ನುಡಿದ,

"ಖಂಡಿತ ಕೊಡೋಣ. ಆದರೆ....ಅದರಲ್ಲಿರುವ ಮರಗಳನ್ನು ಅವರು ಎಂದೆಂದಿಗೂ ಕಾಪಾಡಿಕೊಂಡು ಬರಬೇಕು."

"ಆಗಲಿ, ಹಾಗೆಂದು ಒಪ್ಪಂದ ಮಾಡಿಕೊಳ್ಳೋಣ."

ಇಬ್ಬರೂ ಪ್ರಸನ್ನ ಚಿತ್ತದಿಂದ ಊಟವನ್ನು ಮುಗಿಸಿದರು. ಕ್ಯಾಥ ರೀನ್ ಬಸಿ ಬಟ್ಟಲುಗಳನ್ನು ತೊಳೆಯುವ ಕೆಲಸದಲ್ಲಿ ತೊಡಗಿದ್ದಾಗ ಮೈಕೇಲ್ ಒಗೆದ ಬಟ್ಟೆಗಳನ್ನು ಇಸ್ತ್ರಿ ಮಾಡಿ ಮುಗಿಸಿದ.

ಮರುದಿನ ಪಶು ಪಕ್ಷಿಗಳಿಗೆ ಮೇವು ಕೊಟ್ಟು ಒಳಬರುವಷ್ಟರಲ್ಲಿ ಫಾರಂ ಬೇಲಿಯ ಬಳಿ ಫ್ರ್ಯಾಂಕ್ ದಂಪತಿಗಳು ಬರುತ್ತಿದ್ದುದು ಗೋಚರಿ ಸಿತು. ಅವರು ಓಲ್ಡ್ ಪೀಪಲ್ಸ್ ಹೋಂ ಮೇಲ್ವಿಚಾರಕರು. ಅಲ್ಲದೆ ಅವರೂ ಸಹ ವಾಸಿಸುವುದು ಅಲ್ಲೆ. ವೃದ್ಧ ದಂಪತಿಗಳು ಆಗಮಿಸುತ್ತಲೂ ಮೈಕೇಲ್ ದಂಪತಿಗಳು ಪ್ರಸನ್ನ ಮುಖಿಗಳಾಗಿ ವಂದಿಸಿದರು "ಗುಡ್ ಮಾರ್ನಿಂಗ್ !"

ಅದೇ ನೇರಕ್ಕೆ ಅವರೂ ಪ್ರತಿವಂದನೆ ಸಲ್ಲಿಸಿದರು.

ಬರ ಬರುತ್ತಲೇ ಫ್ರ್ಯಾಂಕ್ ನೀರಸ ದನಿಯಲ್ಲಿ ಅಂದ "ನಾವು ನಿಮ್ಮಂ ತೆಯೇ ಇನ್ನೂ ಫಾರಂ ನಡೆಸಿಕೊಳ್ಳಬಹುದಾಗಿತ್ತು. ಆಗ ಪದೇ ಪದೇ ಆರೋಗ್ಯ ಕೆಟ್ಟು ತೊಂದರೆ ಪಟ್ಟುದುದರಿಂದ ಫಾರಂ ಬಿಟ್ಟು ಓಲ್ಡ್

ಪೀಪಲ್ಸ್ ಹೋಂಗೆ ಸೇರಿದ್ದಾಯ್ತು. ಈಗ ನೋಡಿದರೆ ನಮಗೆ ಹೊತ್ತು ಕಳೆಯುವುದೇ ಬಹಳ ಕಷ್ಟವಾಗಿದೆ."

"ಹೋಂ–ನವರೆ ಒಂದು ಸಣ್ಣ ಫಾರಂ ನಡೆಸಬಾರದೇಕೆ? ಕೂತು ನಿಂತು ಹೊತ್ತು ಕಳೆಯುವುದಕ್ಕಿಂತ ಅಲ್ಪ ಸ್ವಲ್ಪ ಕೆಲಸ ಮಾಡಿದಲ್ಲಿ ಪುಷ್ಕಳವಾಗಿ ಹಾಲು ಮೊಸರು ದೊರಕಿಸಿಕೊಳ್ಳಬಹುದು. ಉತ್ಪನ್ನವೂ ಸಹ ನಿಮ್ಮ ಉಪಯೋಗಕ್ಕೆ ಬರುತ್ತದೆ."

"ನಮಗದು ತುಂಬ ಹಿಡಿಸುತ್ತದೆ. ಆದರೆ ಹಣ.....?"

"ಮೊದಲು ಒಂದೆರಡು ಹಸುಗಳಿಂದ ಆರಂಭಿಸಿದರೆ ಸಾಕು. ಅನಂತರ ವೃದ್ಧಿಗೊಳಿಸಿಕೊಳ್ಳಬಹುದಷ್ಟೆ? ಅಲ್ಲಿ ಅನೇಕರು ಕೆಲಸ ಮಾಡುವಷ್ಟು ಗಟ್ಟಿ ಮುಟ್ಟಾಗಿದ್ದಾರೆ."

"ನಿಜ, ಅದಕ್ಕೂ ಸಹ ಕಡಿಮೆ ಖರ್ಚು ತಗಲುವುದಿಲ್ಲವಲ್ಲ."

"ಮೊದಲು ಯೂತ್ಸ್ ಯೂನಿಯನ್ನಿನವರನ್ನು ಕೇಳೋಣ. ಅವರು ಒಂದಿಷ್ಟು ಸಹಾಯ ಮಾಡಿದರೆ ಉಳಿದುದನ್ನು ಮನೆಮನೆಯಿಂದ ವಂತಿಗೆ ಪಡೆಯಬಹುದು. ನೀವೂ ನಾವೂ ಕೂಡಿಯೇ ವಂತಿಗೆ ಪಡೆಯೋಣ."

ಮೈಕೇಲ್ ದಂಪತಿಗಳ ವಿಚಾರ ಸರಣಿ ಫ್ರಾನ್ಸಿಸ್ ದಂಪತಿಗಳಿಗೆ ಹಿಡಿಸಿತು.

ಯಾವುದಾದರೂ ಶುಭ ದಿನ ಚಂದಾ ಹಣ ಕೂಡಿಸಲು ಹೊರಡುವುದೆಂದು ನಿಶ್ಚಯಿಸಿ, ಯೂತ್ಸ್ ಯೂನಿಯನ್ನಿನೊಡನೆ ವ್ಯವಹರಿಸುವ ಭಾರವನ್ನು ಮೈಕೇಲ್ ದಂಪತಿಗಳಿಗೆ ವಹಿಸಿ ಹಸನ್ಮುಖಿಗಳಾಗಿ ಹೊರಟರು–ಫ್ರಾನ್ಸಿಸ್ ದಂಪತಿಗಳು.

ಅನಂತರ,

ಯೂತ್ಸ್ ಯೂನಿಯನ್ನಿನ ಮುಂದೆ ಎರಡು ಪ್ರಶಸ್ತವಾದ ವಿಚಾರಗಳು ಒಂದೇ ಬಾರಿಗೆ ಮಂಡಿಸಲ್ಪಟ್ಟುವು. ಒಂದನೆಯದು ಓಲ್ಡ್ ಪೀಪಲ್ಸ್ ಹೋಂ–ಗೆ ಕುಕ್ಕುಟ ಕೇಂದ್ರವನ್ನೂ ಗೋಶಾಲೆ ಮತ್ತು ಕಣಜಗಳನ್ನೂ ಕಟ್ಟಿಕೊಡುವುದು. ಎರಡನೆಯದು ಓಕ್ ಲ್ಯಾಂಡ್ಸ್ ದಾನ ಪತ್ರ. ಎರಡಕ್ಕೂ ಯೂತ್ಸ್ ಯೂನಿಯನ್ನಿನವರು ಉತ್ಸಾಹಶೀಲರಾದರು. ಅವರ ಉತ್ಸಾಹ ಮೈಕೇಲ್ ದಂಪತಿಗಳಿಗೆ ಆನಂದ ಭೋಗವನ್ನು ಮನಸಾ ಊಡಿಸಿತು.

ಮೈಕೇಲ್ ಫಾರಂ ಅಂಚಿನಲ್ಲಿ ಅಡ್ಡಾಡಿ ಮನೆಗೆ ಮರಳಿದಾಗ ಜೂಲು ನಾಯಿ ಬಾಲ ಆಡಿಸುತ್ತ ಸ್ವಾಗತ ನೀಡಿತು. ಸ್ವೆಟರ್ ಹೆಣೆಯುವುದರಲ್ಲಿ ಪೂರ್ಣ ನಿಮಗ್ನಳಾಗಿದ್ದ ಕ್ಯಾಥರೀನ್ ಉತ್ಸಾಹಿತ ಕಂಠದಿಂದ ಹೇಳಿದಳು, "ಇಂದು ಕಂಟ್ರಿ ಕೌನ್ಸಿಲ್ ಯೂತ್ಸ್‌ಯೂನಿಯನ್ನಿಗೆ ನೀವೇ ರಸ್ತೆ ರಿಪೇರಿ ಮಾಡಿಕೊಂಡಲ್ಲಿ ಅನಂತರ ಹಣ ಕೊಡುವುದಾಗಿ ಹೇಳಿದರಂತೆ. ಇದಕ್ಕೂ ಇವರು ಮುಂದು! ತಾವೇ ಮಾಡಿಕೊಳ್ಳುವುದೆಂದು ಮೀಟಿಂಗಿನಲ್ಲಿ ನಿರ್ಣಯಿಸಿದ್ದಾರೆ!

"ಓಹೋ!" ಮೈಕೇಲ್ ಉದ್ಗಾರ ತೆಗೆದ.

ಹೊಲದಾಚೆ ಶುಷ್ಕ ಭೂಮಿಯಲ್ಲಿ ಹರಿದ ಹಳಿಯಮೇಲೆ ರೈಲು ಬರುತ್ತಿರುವುದು ದೂರದಲ್ಲಿ ಕಾಣಿಸಿತು. ಗುಜು ಗುಜು ಸದ್ದು ಬಂದೆಡೆಗೆ ನೋಟ ಸಹಜವಾಗಿ ಹೊರಳಿತು. ಸ್ಕಾಟ್‌ಲಿಂಡಿನಲ್ಲಿ ಹೊಸದಾಗಿ ತಯಾರಾದ ಸಹಸ್ರ ಸಹಸ್ರ ಕಾರುಗಳನ್ನು ಉತ್ತರದ ಕಡೆ ಸಾಗಿಸುವ ರೈಲು ಅದು. ಅದಕ್ಕೆ ಡಬ್ಬಿಗಳಾಗಲೀ ಪೆಟ್ಟಿಗೆಗಳಾಗಲೀ ಇಲ್ಲ. ಸಾಲಾಗಿ ಜೋಡಿಸಿದ ಅಟ್ಟಣೆಯಮೇಲೆ ಶುಭ್ರಧವಳ ವರ್ಣರಂಜಿತ ಕಾರುಗಳು ಸಾಲಾಗಿ ಮಣಿ ಮಾಲೆಯಂತೆ ಜೋಡಿಸಲ್ಪಟ್ಟು, ಅವಿರಲ ಸ್ರಾವೀ ಮರೀಚಿ ಮಾಲಿಯ ಉಜ್ವಲಧಾರೆಯಲ್ಲಿ ಫಳಫಳನೆ ಹೊಳೆಯುತಿದ್ದುವು. ರೈಲು ಅಜಗರದೋಪಾದಿಯಲ್ಲಿ ಫೂತ್ಕಾರ ಗೈಯ್ಯುತ್ತ ಶಬ್ದಾಯಮಾನವಾಗಿ ಓಡಿ ಕಣ್ಮರೆಯಾಯಿತು. ನಭೋಮಂಡಲದಲ್ಲಿ ತಳಕ್ಕನೆ ಮಿಂಚಿ ಮಾಯವಾಗುವ ಪ್ರಕಾಶಮಯೀ ವಿದ್ಯುಲ್ಲತೆಯಂತೆ ಮಿಂಚಿ ಮಾಯವಾದ ಆ ಮನೋಹರ ದೃಶ್ಯವನ್ನು ಮನಃಪೂರ್ತಿ ಸವಿಯುತ್ತ ಅಲ್ಲೇ ನಿಂತಳು ಕ್ಯಾಥರೀನ್.

"ಯೂತ್ಸ್ ಯೂನಿಯನ್ನಿನವರು ದಕ್ಷಿಣದ ವಲಯದಲ್ಲಿ ನಮಗೊಂದು ರೈಲು ನಿಲ್ದಾಣ ಬೇಕೆಂದು ಕೇಳಿದ್ದಾರಂತೆ ನಿನಗೆ ಗೊತ್ತೇ?"

ಮಡದಿಯ ನುಡಿ ಕಿವಿಯನ್ನು ತಾಗುತ್ತಲೂ ಮೈಕೇಲ್ ನೆನಪಿಸಿಕೊಂಡು ಅಂದ "ಓ ಅದನ್ನು ನಿನಗೆ ಹೇಳಲು ಮರೆತೇ ಬಿಟ್ಟೆ. ಕಳೆದ ವಾರ ನಾನು ಫ್ರೆಡ್ಡಿ ಜೇವ್ಸ್ ಆ ತಾಪನ್ನು ನೋಡಿಕೊಂಡು ಬಂದೆವು. ಅದು ರೈಲು ನಿಲ್ದಾಣಕ್ಕೆ ನಿಜವಾಗಿಯೂ ಪ್ರಶಸ್ತವಾದ ಭೂಮಿ. ನಮಗೆ ಅಗತ್ಯವಾಗಿ ನಿಲ್ದಾಣ ಬೇಕಿತ್ತು. ಇಲ್ಲೇ ರೈಲು ಓಡಾಡಿದರೂ ನಿಲ್ದಾಣವಿಲ್ಲದಿದ್ದುದು

ನಿಜವಾಗಿಯೂ ದೊಡ್ಡ ಕೊರತೆಯೇ ಹೌದು."

"ಓ....! ಬಹಳ ಒಳ್ಳೆಯದು. ನಿಲ್ದಾಣದೊರೆತರೆ ರೈಲು ಹಿಡಿಯಲು ಶಹರಕ್ಕೆ ಹೋಗುವುದು ತಪ್ಪುತ್ತೆ." ಹರ್ಷೋದ್ಗಾರ ಮಾಡಿದಳು ಕ್ಯಾಥರೀನ್.

ಪೂರ್ವ ದಿಗಂತದಲ್ಲಿ ಚಂದ್ರೋದಯವಾದಂತೆ ದಂಪತಿಗಳ ಮುಖ ಶುಭ್ರ ಪ್ರಸನ್ನಮಾನವಾಯಿತು.

ಮರುದಿನ ಸಂಧ್ಯಾಕಾಲೀನ ಆನಂದಮಯೀ ಮುಹೂರ್ತದಲ್ಲಿ ಫ್ರ್ಯಾಂಕ್ ದಂಪತಿಗಳೊಡನೆ ಮೈಕೇಲ್ ದಂಪತಿಗಳು ಓಲ್ಡ್ ಪೀಪಲ್ಸ್ ಹೋಂ-ನ ಸರ್ವೋದಯಕ್ಕಾಗಿ ಮನೆಮನೆಗೂ ಭೇಟಿ ಕೊಡುವ ಮಹಾಕಾರ್ಯ ಆರಂಭಿಸಿದರು. ವೃದ್ಧದಂಪತಿಗಳ ಅನಿರೀಕ್ಷಿತ ಭೇಟಿ ಕೊಡುಗೈಗಳಿಗೆ ಉತ್ಸಾಹ ನೀಡಿತು. ಎಲ್ಲರ ಸಹಕಾರನಿಂದ ಯೂತ್ಸ್ ಯೂನಿಯನ್ನಿನವರು ಓಲ್ಡ್ ಪೀಪಲ್ಸ್ ಹೋಂ-ಗೋಸ್ಕರ ಒಂದು ಗೋಶಾಲೆಯನ್ನೂ, ಕಣಜ ಮತ್ತು ಕುಕ್ಕುಟ ಕೇಂದ್ರವನ್ನೂ ಕಟ್ಟಿಕೊಟ್ಟರು. ಮೈಕೇಲ್ ದಂಪತಿಗಳ ಮುಖಂಡತ್ವದಲ್ಲಿ ಓಲ್ಡ್ ಪೀಪಲ್ಸ್ ಹೋಂ ಚಟುವಟಿಕೆಯ ಬೀಡಾಯಿತು.

ಪ್ರಸ್ತುತ, ತುಂತುರು ಮಳೆ. ಹಿಮಗಾಳಿ.

ಸದಾ ಜಿನುಗುವ ಮಳೆಯಿಂದ ಹೊರಗೆ ತಲೆಹಾಕುವುದೂ ಸಹ ಕಷ್ಟವೇ. ಹೊರ ಪ್ರಪಂಚದ ಚಟುವಟಿಕೆಗಳಾವುವೂ ಗಮನಕ್ಕೆ ಬಾರದಂತೆ ದಿನಗಳು ಉರುಳಿದುವು. ಬಹಳ ಮಟ್ಟಿಗೆ ಮನೆಮನೆಯಲ್ಲೂ ಅಜ್ಞಾತವಾಸವೇ. ಮಳೆಗಾಳಿಯ ವಾತಾವರಣದಲ್ಲಿ ಹೆಚ್ಚು ಕಡಿಮೆ ಮೂರು ತಿಂಗಳು ಉರುಳಿದುವೋ ಏನೋ ....ಆ ದಿನಗಳು ಬಂದುದಾಗಲೀ ಹೋದುದಾಗಲಿ ಗಮನಕ್ಕೆ ಬಾರದಷ್ಟು ಕ್ಷಿಪ್ರವಾಗಿ ಕಳೆದು ಹೋದುವು. ಮೈಕೇಲ್ ದಂಪತಿಗಳು ಹೊರಗಡೆ ಹೋಗದೆ ಮನೆಯಲ್ಲೇ ಕಳೆದರು. ಓಲ್ಡ್ ಪೀಪಲ್ಸ್ ಹೋಂ ಚಟುವಟಿಕೆಗಳಾಗಲೀ ಯೂತ್ಸ್ ಯೂನಿಯನ್ನಿನ ಚಟುವಟಿಕೆಗಳಾಗಲೀ ಗಮನಕ್ಕೆ ಬಾರದೆ ಹೋದರೂ ಅವು ನೆಮ್ಮದಿಯಿಂದ ನಡೆಯುತ್ತಿವೆ ಎಂಬುದರ ಪೂರ್ಣ ಭರವಸೆ ತಮಗಿತ್ತು.

ಅದೊಂದು ಸುಂದರ ಮುಂಜಾನೆ.

ಮೈಕೇಲ್ ದಂಪತಿಗಳು ಇನ್ನೂ ಬೆಳಗಿನ ಚಹ ಮುಗಿಸಿ ಬಸಿ ಬಟ್ಟಲನ್ನು ತೊಳೆಯುವುದರೊಳಗಾಗಿ ಪ್ರತ್ಯಕ್ಷನಾದ ಫ್ರೆಡ್ಡಿಯನ್ನು ನೋಡಿ ಮುಖ ಅರಳಿತು.

"ಗುಡ್ ಮಾರ್ನಿಂಗ್ಅಂಕಲ್ ! ಗುಡ್ ಮಾರ್ನಿಂಗ್ ಆಂಟಿ !"

"ಗುಡ್ ಮಾರ್ನಿಂಗ್ ಫ್ರೆಡ್ಡಿ !"

"ಏನಪ್ಪಾ ವಿಶೇಷ ?"

"ಅಂಕಲ್ ರೋಗಿ ಬಯಸಿದ್ದೂ ಹಾಲೂ ಅನ್ನ, ವೈದ್ಯ ಹೇಳಿದ್ದೂ ಹಾಲೂ ಅನ್ನ !"

"ಓ ...! ಏನಪ್ಪಾ ಅಂಥಹ ಸಮಾಚಾರ ?"

ಫ್ರೆಡ್ರಿಕ್ ನಾರ್ಮಡಿಯ ಉತ್ಸಾಹದಿಂದ ಹೇಳಿದ "ನಮಗೊಂದು ವಿಮಾನ ನಿಲ್ದಾಣ ಬರಲಿದೆ !"

"ಇಲ್ಲಿಗೆ....?"

"ಹೌದು....ಖಂಡಿತವಾಗಿಯೂ !" ವಾಣಿ ಕಿಟಕಿಗಳ ಗಾಜಿಗೆ ಬಡಿದು ಝಂಕೃತವಾಯಿತು.

ದಂಪತಿಗಳು ಆನಂದ ಪ್ರಮತ್ತತೆಯಿಂದ ಭಾವಪರವಶರಾದರು. ವಾತಾವರಣ ಧೀರ ಪ್ರಸನ್ನ ಮನೋಹರವಾಯಿತು. ಸಿಂಧೂರ ರಾಗರಂಜಿತ ಕಪೋಲಪಾಲಿ ಮಂದಾರ ಪುಷ್ಪದಂತೆ ವಿಕಸನಗೊಂಡುವು. ಮೈಕೇಲ್ ಗಂಭೀರ ಗಮನದಿಂದ ಕೇಳಿದ "ಇಲ್ಲಿ ಅಂತಹ ಪ್ರಶಸ್ತವಾದ ಭೂಮಿ ಯಾವುದು ?"

"ದಕ್ಷಿಣ ಗೇಟಿನ ಬಲಭಾಗದ ವಿಶಾಲವಾದ ಭೂ ಪ್ರದೇಶವೇ ಇರಬೇಕು. ಸ್ಕಾಟ್‌ಲೆಂಡಿನಿಂದ ಹೊರಡುವ ವಿಮಾನಕ್ಕೆ ಮಾರ್ಗಮಧ್ಯದಲ್ಲಿ ಒಂದು ನಿಲ್ದಾಣಬೇಕಂತೆ. ಮೊದಲು ಅವರ ಯೋಚನೆ ಇದ್ದದ್ದು ಬೇರೆ. ಪಿಟ್ಸ್‌ಬರ್ಗ್‌ನಲ್ಲಿ ಇಳಿದು ಮುಂದೆ ಪಯಣಿಸುವುದು ಸಾಧು ಎಂದು ಅನೇಕರ ಅಭಿಪ್ರಾಯವಾಗಿತ್ತಂತೆ. ಆದರೆ ಇಲ್ಲಿ ಒಳ್ಳೆಯ ಹವಾ ಇರುವುದರಿಂದ ಈ ಸ್ಥಳ ಆಯ್ಕೆ ಮಾಡಲಾಗಿದೆ."

"ಅಹಾ.....!"

"ನಾವು ಅದೃಷ್ಟವಂತರು. ನಮ್ಮ ಪಾಲಿಗೆ ಬಂತು ಪರಮಾನ್ನ !"

"ಬಹುಶಃ ನಿಮ್ಮ ಯೋಗ್ಯತೆಗೆ ಭಗವಂತ ನೀಡಿದ ಬಹುಮಾನ!"

"ಆಂಟಿ ಮೆಚ್ಚಿದರೆ ಎಲ್ಲರೂ ಮೆಚ್ಚಿದಂತೆಯೆ!" ಫ್ರೆಡ್ರಿಕ್ ಉದ್ಗಾರ ತೆಗೆದ.

ಒಡನೆ ನಗೆಯು ಬುಗ್ಗೆಯೆದ್ದು ಆ ಮುಹೂರ್ತ ಮಂಗಳಮಯ ವಾಯಿತು.

"ನಮ್ಮ ಮನಸ್ಸಿನಲ್ಲೂ ಆ ಯೋಚನೆ ಇತ್ತು; ಅಷ್ಟರೊಳಗಾಗಿ ಏರ್‌ಲೈನ್ಸ್ ಕಾರ್ಪೋರೇಶನ್ನಿನವರು ತಾವಾಗಿ ಮುಂದೆ ಬಂದಿದ್ದಾರೆ."

"ಆರ್ಲಿಯ ಪುರೋಭಿವೃದ್ಧಿಗೆ ಕೊಟ್ಟಕೊನೆಯದಾಗಿ ಆಗಬೇಕಾಗಿ ದ್ದುದು ಅದೊಂದೆ. ತದನಂತರ ಇನ್ನೆಲ್ಲವೂ ಶ್ರಮವಿಲ್ಲದೆ ಆಗುತ್ತವೆ!" ಒಂದು ಘಳಿಗೆ ತಡೆದು ಮೈಕೇಲನಿಗೆಂದಳು "ನಮ್ಮ ಕಾಲದಲ್ಲಿ ಯಾವ ಸೌಕರ್ಯವೂ ಇಲ್ಲದೆ ನಾವು ತೊಂದರೆ ಪಟ್ಟುದುದನ್ನು ನೆನೆಸಿಕೊಂಡರೆ ಆ ಕಾಲ ಹೇಗೆ ಕಳೆಯಿತು ಎಂಬುದೇ ಆಶ್ಚರ್ಯ."

"ಭಾಗ್ಯವಿದ್ದಷ್ಟೇ ಭೋಗ; ಲಭ್ಯವಿದ್ದಷ್ಟೇ ಲಾಭ."

ಕ್ಯಾಥರೀನರ ಕಪೋಲ ಪ್ರಾಂತಗಳು ಮುಗುಳುನಗೆಯಿಂದ ಅರಳು ಮಲ್ಲಿಗೆಯಾದುವು. ಪ್ರದೀಪ್ತ ನಯನಗಳಲ್ಲಿ ಪ್ರಶಾಂತತೆ ನೆಲೆಸಿತ್ತು.

ವಿಶೇಷವಾರ್ತೆಯು ರಸದೌತಣವನ್ನು ನೀಡಿ ಫ್ರೆಡ್ರಿಕ್ ನಿರ್ಗಮಿಸಿದ.

ಕಾಲವಾಹಿನಿಯು ಕ್ಷಣಶಃ ತಂಗದೆ ಹರಿಯುತ್ತಿತ್ತು.

ಪ್ರಶಾಂತವಾತಾವರಣದಿಂದ ಕೂಡಿದ ಒಂದು ಸುಂದರ ದಿನ ಎಡ್ವರ್ಡ್ ಮತ್ತು ಎಲಿಜಬೆತಳ ಲಗ್ನಫಲ ಕೂಡಿ ಬಂತು. ಯೂತ್ಸ್ ಯೂನಿಯನ್ನಿನ ಸೆಕ್ರೆಟರಿಗಳಾದ ಅವರಿಬ್ಬರಿಗೂ ಆರ್ಲಿ ಅತ್ಯಂತ ಸಡಗರದಿಂದ ಶುಭಾಶಯ ಗಳನ್ನರ್ಪಿಸಿತು. ಚರ್ಚ್ ದಿಣ್ಣೆಯ ಮೇಲಿರುವುದರಿಂದ ಹತ್ತಿ ಹೋಗ ಲಾಗದ ಓಲ್ಡ್ ಪೀಪಲ್ಸ್ ಹೋಂನ ಮಂದಿಗೆ ಕುರ್ಚಿಗಳಲ್ಲಿ ಪಯಣಿಸುವ ಅವಕಾಶವನ್ನು ಯೂತ್ಸ್ ಯೂನಿಯನ್ ಮಾಡಿಕೊಟ್ಟಿತು. ಪಶುಪಕ್ಷಿ ಗಳಿಗೆ ಮೇವು ನೀಡಿದ ನಂತರ ಮೈಕೇಲ್ ದಂಪತಿಗಳು ಉತ್ತಮ ಉಡುಗೆ ಗಳಿಂದಲಂಕೃತರಾಗಿ ಕೈಕೈ ಹಿಡಿದು ಹೊರಟರು. ಸಾಲುಗಟ್ಟಿ ಆರ್ಲಿಯ ಮಂದಿ ಮೆಟ್ಟಲು ಹತ್ತುತ್ತಿತ್ತು. ಮೈಕೇಲ್ ದಂಪತಿಗಳು ಸಾನುರಾಗದಿಂದ ಹತ್ತಿದರು.....ಮೇಲೆ.....ಮೇಲೆ.....ಇನ್ನೂ ಮೇಲೆ.....

ಚರ್ಚಿನ ಬಾಗಿಲಿಗೆ ಬಂದಾಗ ಮದುಮಗಳಾಗಿದ್ದ ಎಲಿಜಬೆತ್ ಎದುರಾದಳು. ಶುಭ್ರ ಧವಳವಸನಧಾರೀ ಮೋಹನಾಂಗಿಯನ್ನು ಅಪ್ಪಿ ಹಿಡಿದು ಆತ್ಮೀಯತೆಯಿಂದ ಅಭಿನಂದಿಸಿ ಹೂ ಮುತ್ತನೊತ್ತಿದಳು ಕ್ಯಾಥರೀನ್. ಮರುಕ್ಷಣದಲ್ಲಿ "ಹಾಯ್! ಅಂಕಲ್!" ಎನ್ನುತ್ತ ಮೈಕೇಲನೆಡೆಗೆ ಚಿಮ್ಮಿ ಬಂದಳು ಎಲಿಜಬೆತ್. ಅವಳನ್ನು ಹೃತ್ಪೂರ್ವಕವಾಗಿ ಅಭಿನಂದಿಸಿ ಶುಭಾಶಯಗಳನ್ನರ್ಪಿಸಿ ಹೂಮುತ್ತನಿಟ್ಟ ಮೈಕೇಲ್. ತರುಣರ ಗುಂಪಿನಲ್ಲಿ ಕರಗಿ ಹೋಗಿದ್ದ ಎಡ್ವರ್ಡ್ ಹಿರಿಯ ದಂಪತಿಗಳನ್ನು ಕಾಣುತ್ತಲೂ ಚಿಮ್ಮಿ ಬಂದ—ಆನಂದವೇ ಮೈವೆತ್ತು ಬಂದಂತೆ. ಶುಭಾಶಯಗಳ ಸುರಿಮಳೆಯಲ್ಲಿ ಮಿಂದು ನಿಂತ ಭಾವೀದಂಪತಿಗಳು ಮೂರ್ತಿಮತೀ ಸರಳ ಸುಂದರ ಆನಂದ ಪ್ರಭೆಯಂತೆ ಕಂಗೊಳಿಸಿದರು.

ಚರ್ಚಿನಲ್ಲಿ ಉಂಗುರ ಧಾರಣೆಯನಂತರ ಬಿಷಪರ ಆಶೀರ್ವಾದ ಪಡೆದ ದಂಪತಿಗಳಿಗೆ ಅನೇಕರು ಪುಷ್ಪಗುಚ್ಛಗಳನ್ನು ನೀಡಿದರು. ಆನಂದಾಂಬುಧಿಯಲ್ಲಿ ಮುಳುಗಿದ ಜನಸ್ತೋಮ ಅಲಂಕೃತ ಚರ್ಚಿಗೆ ಖಳೆಕಟ್ಟುವಂತೆ, ಮಾನವತೆಗೆ ಹುರುಪು ನೀಡುವಂತೆ, ಸಭ್ಯತೆಗೆ ಶೋಭೆಯಂತೆ ಶೋಭಿಸಿ ಹೊರಬಿದ್ದರು. ಅವಿರಲ ಶ್ರಾವೀ ಥೇಮ್ಸ್ ನದಿ ಶತಧಾರೆಯಾಗಿ ಹರಿದು ಚರ್ಚಿನ ಪ್ರಾಂಗಣಕ್ಕೆ ಧುಮುಕಿ ಆಗ್ಲಿಗೆ ಜುಳುಜುಳು ನಿನಾದದಿಂದ ಹರಿಯುತ್ತಿದೆಯೋ ಎಂಬಂತೆ ಕಲಕಲರವದೊಡನೆ ಮೆಟ್ಟಿಲುಗಳನ್ನು ಇಳಿಯ ಹತ್ತಿತು ಜನಸ್ತೋಮ.

ಕಡಲೆಲರು ದಕ್ಷಿಣಾಮುಖಿಯಾಗಿ ಉನ್ಮತ್ತವೇಗದಲ್ಲಿ ತೀಡುತಿತ್ತು.

ಸಾಲುಮೆಟ್ಟಲುಗಳನ್ನು ಇಳಿದ ಜನವಾರಿಧಿ ಕೊನೆಯ ಪ್ರಕರಣವಾಗಿ "ಹಾಯ್!" "ಬಾಯ್"ಗಳ ವಿನಿಮಯಗೊಳಿಸಿದನಂತರ ತಮ್ಮತಮ್ಮ ಫಾರಂ-ಗಳತ್ತ ಹೆಜ್ಜೆ ಹಾಕಿದರು. ಹಾದಿ ಮನೆಮನೆಗೂ ಕವಲೊಡೆಯಿತು. ಬೀಸುಗಾಳಿಯ ಉನ್ಮತ್ತವೇಗಕ್ಕೆ ಸಿಲುಕಿ ಅತ್ತಿತ್ತ ಓಲಾಡುವ ಮಡದಿಯ ಬಳ್ಳಿದೇಹಕ್ಕೆ ಮೈಕೇಲ್ ತೋಳಾಶ್ರಯ ನೀಡಿದ. ಇಬ್ಬರೂ ತೀವ್ರಗತಿಯಲ್ಲಿ ಹೆಜ್ಜೆ ಹಾಕಿದರು. ಭಾವೋನ್ಮತ್ತ ಮನಃಪ್ರಾಣಗಳು ಪುಳಕಿತವಾದುವು.

ಬ್ರೌನಿ ಹಸು ಆಗಲೇ ಗಲಾಟೆಯೆಬ್ಬಿಸಿದ್ದಾಳೆ. ಮೇವು ಮುಗಿದರೆ ಒಂದು ನಿಮಿಷವೂ ತಡೆಯುವವಳಲ್ಲ. ಜೊತೆಗೆ ಕರುವು ಕೂಗುತ್ತಿರುವುದೂ

ಸಹ ಕೇಳಿಸುತ್ತಿದೆ. ಆ ಧ್ವನಿಯನ್ನು ಕೇಳಿದೊಡನೆ ಇಬ್ಬರೂ ಬೀಸುಗಾಳಿಯೊಂದಿಗೆ ಸ್ಪರ್ಧೆಹೂಡಿ ಎಳೆಯರಂತೆ ತೀವ್ರಗತಿಯಲ್ಲಿ ನಡೆದರು.... ಇನ್ನೂ....ಇನ್ನೂ....

ಹೆಚ್ಚು ಕಡಿಮೆ ಅದೇ ತಿಂಗಳ ಸುಮಾರಿನಲ್ಲಿ ಏರ್‌ಲೈನ್ಸ್ ಕಾರ್ಪೊರೇಶನ್ನಿನವರು ಆರ್ಲಿಗೆ ಭೇಟಿ ನೀಡಿ ಸ್ಥಳಪರಿಶೀಲನೆ ಮಾಡಿದರು. ಯೂತ್ಸ್ ಯೂನಿಯನ್ ಉತ್ಸಾಹದಿಂದ ಅವರೊಡನೆ ಬೆರೆತುಕೊಂಡಿತು. ದಕ್ಷಿಣ ಗೇಟಿನ ವಿಶಾಲವಾದ ಭೂವಿಸ್ತಾರವು ಜೌಗು ಪ್ರದೇಶವಾದುದರಿಂದ ಅವರಿಗೆ ಅದು ಸರಿದೋರಲಿಲ್ಲ. ಸುತ್ತಮುತ್ತಿನ ಇತರ ಸ್ಥಳಗಳ ಸಮೀಕ್ಷೆ ನಡೆಸಿದಾಗ ಅವರ ಪಕ್ಷಿನೋಟಕ್ಕೆ ಬಿದ್ದ ಸುರಮ್ಯ ಸ್ಥಳ ಓಕ್‌ಲ್ಯಾಂಡ್ಸ್. ತಮ್ಮ ಚಟುವಟಿಕೆಗಳಿಗಾಗಿ ದಾನವಾಗಿ ಪಡೆದ ಆ ಸುಂದರ ಪ್ರದೇಶವನ್ನು ಬಿಟ್ಟುಕೊಡುವುದು ಇಷ್ಟವಿರಲಿಲ್ಲವಾದರೂ ಯೂತ್ಸ್‌ಯೂನಿಯನ್ ವಿಮಾನ ಸೌಕರ್ಯವನ್ನು ಬಿಟ್ಟುಕೊಡಲು ಸಿದ್ಧವಿರಲಿಲ್ಲ. ನೂರ್ಮಡಿಯ ಉತ್ಸಾಹ ಅದಕ್ಕೆ 'ಅಸ್ತು' ಅನಿಸಿತು.

ಆದರೆ, ಅದು ಮೈಕೇಲ್ ದಂಪತಿಗಳಿಗೆ ಬಡಿದ ಬರಸಿಡಿಲು.

ವಾದವಿವಾದಗಳಾದುವು. ಚರ್ಚೆ.....ಚರ್ಚೆ ದಿನವೆಲ್ಲಾ ಚರ್ಚೆ.

"ಕೇವಲ ಒಂದೆರಡು ಮರಗಳಿಗಾಗಿ ವಿಮಾನ ಸೌಕರ್ಯವನ್ನು ತಪ್ಪಿಸಬಾರದು" ಎಂಬುದು ಯೂತ್ಸ್‌ಯೂನಿಯನ್ನಿನ ಉತ್ಸಾಹಪೂರ್ಣ ಮನವಿ....ಆತಂಕಪೂರ್ಣ ಬೇಡಿಕೆ....

"ಇದು ಕೇವಲ ಅಂಧಾಭಿಮಾನ. ಆರ್ಲಿಯ ಜನರಿಗೆ ಓಕ್‌ಲ್ಯಾಂಡ್ಸ್ ವಿಹಾರ ಸ್ಥಳವಾಗಿದೆಯೇ ವಿನಾ ಉಪಯೋಗಕರವಾಗಿಲ್ಲ. ಅಲ್ಲಿ ವಿಮಾನ ನಿಲ್ದಾಣ ಸ್ಥಾಪನೆಯಾದರೆ ವಿಹಾರದೊಂದಿಗೆ ಸಾರಿಗೆ ಸೌಕರ್ಯವೂ ದೊರೆಯುತ್ತದೆ. ಅದೂ ಅಲ್ಲದೆ, ನಮಗೆ ಮಾರ್ಗಮಧ್ಯೆ ತಂಗಲು ಅಲ್ಲೊಂದು ವಿಮಾನ ನಿಲ್ದಾಣ ಬೇಕೇಬೇಕು." ಎಂಬುದು ಏರ್‌ಲೈನ್ಸ್ ಕಾರ್ಪೊರೇಶನ್ ವಾದ.

"ನಮಗೆ ವಿಮಾನವನ್ನೂ ವಿಮಾನ ನಿಲ್ದಾಣವನ್ನೂ ತಯಾರಿಸುವ ಸಾಮರ್ಥ್ಯವಿರುವುದೇ ವಿನಾ ಓಕ್‌ಲ್ಯಾಂಡಿನಲ್ಲಿರುವಂತಹ ಮರಗಳ ನಿರ್ಮಾಣ ಶಕ್ತಿ ಬರುವಂತಿಲ್ಲ. ಪ್ರಕೃತಿದತ್ತವಾದ ಅವುಗಳ ಅದ್ಭುತ ಮಹತ್ವನ್ನು ತಿಳಿದುಕೊಳ್ಳಲು ಸಮಯವಾಗಲೀ.....ಸಮಯೋಚಿತ ಪರಿ

ಜ್ಞಾನವಾಗಲೀ ನಿಮಗೆ ಇಲ್ಲ !" ಎಂಬುದು ಮೈಕೇಲ್ ದಂಪತಿಗಳವಾದ.

ಕೇವಲ ಹಳೆಯ ಮರಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಈ ಸದವಕಾಶವನ್ನು ಕಳೆದುಕೊಳ್ಳುವುದು ಹಾಸ್ಯಾಸ್ಪದ. ಒಂದು ವೇಳೆ ನೀವು ಇಲ್ಲಿ ಅವಕಾಶ ಕೊಡದಿದ್ದಲ್ಲಿ ಪಿಟ್ಸ್‌ಬರ್ಗ್‌ನಲ್ಲಿ ವಿಮಾನ ನಿಲ್ದಾಣ ಸ್ಥಾಪನೆಯಾಗುತ್ತದೆ. ಅನಂತರ ನೀವು ಈ ಜನ್ಮದಲ್ಲಿ ಆರ್ಲಿಗೆ ವಿಮಾನ ಸೌಕರ್ಯ ಹೊಂದಲಾರಿರಿ !" ಎಂದಿತು ಏರ್‌ಲೈನ್ಸ್ ಕಾರ್ಪೋರೇಶನ್.

"ಇಂದು ಈ ಮರಗಳನ್ನು ಹಳಿಯುವೆಂದು ವಾದ ಹೂಡಿದಿರಿ. ಮುಂದೆ ನಿಮಗೆ ವೆಸ್ಟ್ ಮಿನಿಸ್ಟರ್ ಆಬೆ ಹಳೆಯದಾಗಿ ತೋರಿದರೆ ಆಶ್ಚರ್ಯವೇನೂ ಇಲ್ಲ." ವಾಣಿ ಕೋಪಾತಿರೇಕದಿಂದ ಝೇಂಕರಿಸಿದರೂ ನಿತಾಂತ ವೇದನೆಯಿಂದ ತುಂಬಿತ್ತು.

ಆರ್ಲಿ ವಾದವನ್ನು ಮುಂದುವರಿಸಲು ಸಿದ್ಧವಾಗಿರಲಿಲ್ಲ. ಆದರೆ ಏರ್ ಲೈನ್ಸ್ ಕಾರ್ಪೊರೇಶನ್ನಿನವರು ಈ ಅಲ್ಪ ಕಾರಣಕ್ಕೋಸ್ಕರ ತಮ್ಮ ಉದ್ದೇಶವನ್ನು ಬಿಟ್ಟುಕೊಡಲು ತಯಾರಿರಲಿಲ್ಲ. ವಿಷಯ ನ್ಯಾಯಪೀಠದತನಕ ಹೋಯಿತು. ಮೊಕದ್ದಮೆಯ ವಾದ ವಿವಾದ ಜನತೆಯನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ಕೋರ್ಟಿನಲ್ಲಿ ಕಿಕ್ಕಿರಿ ತುಂಬಿತು ಜನಗಣ. ಎರಡು ಪ್ರಬಲ ಶಕ್ತಿಗಳ ಪ್ರಸ್ಪಂದ-ವಿಸ್ಪಂದಗಳಿಂದ ನ್ಯಾಯಾಲಯದ ರೋಮ ರೋಮವೂ ಉದ್ಬುದ್ಧವಾಯಿತು.

ಹಳತು ಹೊಸತುಗಳ ತಾನವಿತಾನದಲ್ಲಿ ಮೊಳೆತ ವಾದವಿವಾದಗಳು ಮುಗಿದುವು. ಶುಭಾಶುಭಗಳ ಕಲ್ಪನೆಯಲ್ಲಿ ದಿನಗಳು ಉರುಳಿ ತೀರ್ಪಿನ ದಿನವು ಬಳಿಸಾರಿ ಬಂತು.

ಇಂದು ತೀರ್ಪಿನ ದಿನ,

ನ್ಯಾಯಾಲಯ ಕಿಂಚಿತ್ತೂ ಸ್ಥಳವಿಲ್ಲದಂತೆ ಜನಭರಿತವಾಯಿತು.

ಎಲ್ಲೆಲ್ಲೂ ನಿಶ್ಶಬ್ದ....ನೀರವ.

ತೀರ್ಪಿನ ಮುಹೂರ್ತಕ್ಕಾಗಿ ಜನವಾರಿಧಿಯ ಮಧ್ಯೆ ಎರಡೂ ಬಣದವರು ಕಾದಿದ್ದರು.

ನ್ಯಾಯಾಧೀಶರು ಹದಿನೆಂಟು ಪುಟಗಳ ತೀರ್ಪನ್ನು ಗಂಭೀರ ಧ್ವನಿಯಲ್ಲಿ ಓದಿದರು. ಆದರ ಸಂಕ್ಷಿಪ್ತ ವಿವರ ಈ ರೀತಿ ಇತ್ತು:– ಮೈಕೇಲ್ ದಂಪತಿ

ಗಳಿಗೆ ಆ ವೃಕ್ಷಗಳಲ್ಲಿರುವ ಗೌರವಾದರಗಳು ಅಮೋಘವಾದುದು, ಅಲ್ಲಿಗೆ ಸತ್ಕೀರ್ತಿಯಂತೆ, ಮುಕಟ ಪ್ರಾಯದಂತೆ ಶೋಭಿಸುವ ವೃಕ್ಷರಾಜಿಯನ್ನು ಕೇವಲ ಆನಂದ ಭೋಗಕ್ಕಾಗಿ ವಿನಾಶಗೊಳಿಸುವುದು ಯುಕ್ತವಲ್ಲ..... ಪುರಾತನವು ನಿತ್ಯ ನೂತನವಾದರೆ ಅದುವೇ ಶ್ರೀನಿಧಿ. ಅಲ್ಲಿಯ ಜನತೆ ಮೈಕೇಲ್ ದಂಪತಿಗಳ ಆದರ್ಶವನ್ನು ಎತ್ತಿ ಹಿಡಿಯುತ್ತಾರೆಂಬ ಆಶ್ವಾಸನೆ ನಮಗುಂಟು.

ಏರ್‌ಲೈನ್ಸ್ ಕಾರ್ಪೊರೇಶನ್ನಿನವರು ಅಂದೇ ಗೌರವಪೂರ್ಣವಾಗಿ ಅಲ್ಲಿಂದ ಕಾಲ್ತೆಗೆದಿದ್ದರೆ ಚೆನ್ನಾಗಿತ್ತು. ಅವರು ಮುಂದೆಯೂ ಸಹ ಹೆಜ್ಜೆ ಹೆಜ್ಜೆಯಲ್ಲಿಯೂ ಯುಕ್ತಾಯುಕ್ತತೆಗಳನ್ನು ಅರಿತುಕೊಳ್ಳುವುದು ಲೇಸು. ಈ ವಿದ್ಯಮಾನ ಎಲ್ಲರಿಗೊಂದು ಪಾಠ ಕಲಿಸಿದೆ ಎಂಬುದರಲ್ಲಿ ಇನಿತೂ ಸಂಶಯವಿಲ್ಲ.

ಓಕ್‌ಲ್ಯಾಂಡ್ಸ್‌ನಲ್ಲಿ ಏರ್‌ಲೈನ್ಸ್ ಕಾರ್ಪೊರೇಶನ್ ವಿಮಾನ ನಿಲ್ದಾಣ ಸ್ಥಾಪಿಸುವುದನ್ನು ನಿಷೇಧಿಸಲಾಗಿದೆ.

— o —

# ಲೈಲಾ

ಪ್ರಾತಃಸಮಯ.

ದೂರದಿಗಂತದಲ್ಲಿ ಬಾಲಕೋಮಲ ದಿನಮಣಿ ಮೆಲ್ಲಮೆಲ್ಲನೆ ಮುಗಿಲ ದಿಣ್ಣೆಯನ್ನೇರುತಿದ್ದ.

ಶರತ್ಕಾಲೀನ ಪ್ರಾತಃಸೌಂದರ್ಯಧಾರೆಯಲ್ಲಿ ಜಗಮೆಲ್ಲ ಮಿಂದು ಪೊನ್ನರಾಜಿಯ ಹೊಂಗದಿರುಗಳು ಕಿಟಕಿಯಲ್ಲಿ ವೈಚಾಚುತ್ತಿವೆ.

ಸಮಾಜ ಶಾಸ್ತ್ರದ ಪ್ರೊಫೆಸರ್ ತರಗತಿಯನ್ನುದ್ದೇಶಿಸಿ ಉಚ್ಚಸ್ವರ ದಿಂದ ಬಿತ್ತರಿಸಿದರು "ನಿಮಗೆ ಅಗತ್ಯವೆನಿಸಿದ ಯಾವ ಪ್ರಶ್ನೆಯನ್ನಾದರೂ ಕೇಳಬಹುದು."

ಅವರು ನಿರರ್ಗಳವಾಗಿ ಹರಿಸಿದ ವಿಚಾರಧಾರೆಯಲ್ಲಿ ಬಹಳ ಸ್ವಾರಸ್ಯ ಪೂರ್ಣವಾಗಿ ಮಾನವ ಸಮಾಜ ಪ್ರಾಕಾರಗಳ ಮೇಲೆ ಮಾತಾಡಿದ್ದರು. ಹೆಣ್ಣು-ಗಂಡುಗಳ ಸಂಬಂಧ, ವೈವಾಹಿಕ ಜೀವನ, ಕೌಟುಂಬಿಕ ಪದ್ಧತಿ, ಅವಿಭಕ್ತ ಕುಟುಂಬಗಳ ರೀತಿನೀತಿಗಳನ್ನು ವಿವರ ಪೂರ್ಣವಾಗಿ ಅತ್ಯಂತ ಉತ್ಸುಕತೆಯಿಂದ ವಿವರಿಸುತಿದ್ದರು. ಅವರ ಕಂಠದಿಂದ ಕನ್ನಡ ಪದಪುಂಜ ಗಳ ಸಲಿಲಧಾರೆ ಕಾವೇರಿ ಲಹರಿಯಂತೆ ಸ್ವಚ್ಛಂದವಾಗಿ ಹರಿಯುತಿತ್ತು, ಸದ್ದಿಲ್ಲದ ನಿಃಶಬ್ದ ರಾಶಿಯಲ್ಲಿ ಮಾಡು ಮರುದನಿಗೊಡುವಂತೆ.

ಅವರ ಪಾಠಪ್ರವಚನಗಳೆಂದರೆ ಹುಡುಗ ಹುಡುಗಿಯರಿಗೆ ಅಚ್ಚು ಮೆಚ್ಚು. ಹುಡುಗರು ಎಷ್ಟೋ ಬಾರಿ ಕಿಡಿಗೇಡಿ ಪ್ರಶ್ನೆಗಳನ್ನು ಹಾಕಿ ಪ್ರೊಫೆಸರನ್ನು ಪೇಚಿಗೆ ಸಿಕ್ಕಿಸುತಿದ್ದುದೂ ಉಂಟು.

ತುಂಬಿದ ತರಗತಿಯಲ್ಲಿ ನಾಲು ಹುಡುಗಿಯರ ಮಧ್ಯೆ ಸುಖಾಸೀನ ಳಾದ ಲೈಲಾ ವಿಷಯಗಳ ಹುಚ್ಚು ಹೊಳೆಯಲ್ಲಿ ಮುಳುಗಿ ವಿಚಾರಮಂಥನ ದಲ್ಲಿ ಮೈಮರೆತಾಗ ಆಕೆಯ ವಿಮಲ ವಿಶಾಲನಯನಗಳು ಎರಡು ಜ್ವಲಂತ ಗ್ರಹಗಳೋಪಾದಿಯಲ್ಲಿ ಜ್ವಲಿಸುತಿದ್ದುವು.

ಹಿಂದಿನ ಬೆಂಚಿನಿಂದ ತರುಣ ಕಂಠದಿಂದ ಪ್ರಶ್ನೆಯೊಂದು ಹೊರ ಬಿತ್ತು.

"ಸರ್, ಸಾಮಾಜಿಕ ಬಂಧನದೊಳಗೆ ಹೆಣ್ಣು ಗಂಡುಗಳನ್ನು ಕೂಡಿ, ಕಟ್ಟುನಿಟ್ಟುಗಳ ಬೇಲಿಹಾಕಿ ಸಾಧಿಸುವುದಾದರೂ ಏನು ?"

"ನಿರ್ಮಲ ಜೀವನ." ಕಂಠಸ್ವರ ಠೇಂಕೃತವಾಯಿತು ಕಂಚು ಮಿಡಿದಂತೆ.

"ಸರ್, ಅದರಿಂದ ಜೀವನವನ್ನು ನಿಯಂತ್ರಣಕ್ಕೊಪ್ಪಿಸಿದಂತಾಗ ಲಿಲ್ಲವೇ ?"

"ಹೌದು. ಮನುಷ್ಯನಲ್ಲಿರುವ ಮನುಷ್ಯತ್ವವನ್ನು ಉಳಿಸಿಕೊಂಡು ನೆಮ್ಮದಿಯಿಂದ ಬಾಳುವುದಕ್ಕಾಗಿ ಸಾಮಾಜಿಕ ನಿಬಂಧನೆಗಳೂ ನಿಯಂತ್ರಣ ಗಳೂ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿರುವುದೊಳ್ಳೆಯದು."

"ಸರ್, ಬದುಕಿಗೆ ಕಡ್ಡಾಯ ಹೇರುವುದರಿಂದ ಪರಸ್ಪರ ಪ್ರೀತಿ ವಿಶ್ವಾಸಗಳ ಮೌಲ್ಯವನ್ನು ಕಳೆದುಕೊಂಡು ಬಾಳು ಬರಡಾಗದೇ ?"

"ಇಲ್ಲವೇ ಇಲ್ಲ....ಸಾಮಾಜಿಕ ಪ್ರಾಕಾರಗಳು ಮನುಷ್ಯತ್ವಕ್ಕೆ ನಾಂದಿ. ಕಟ್ಟು ಕಡ್ಡಾಯಗಳಿಲ್ಲದಿದ್ದಲ್ಲಿ ಮನುಷ್ಯ ಮೃಗಕ್ಕಿಂತಲೂ ಕಡೆ ಯಾಗುವುದರಲ್ಲಿ ಸಂಶಯವಿಲ್ಲ."

"ಅದು ಹೇಗೆ ಸರ್ ?"

"ಮನುಷ್ಯನ ಹರಿತವಾದ ಬುದ್ಧಿಗೆ ಲಂಗು ಲಗಾಮಿಲ್ಲದೆ ಹೋದರೆ ಪ್ರಪಂಚ ಹುಚ್ಚರ ರಾಜ್ಯಭಾರವಾಗುವುದು. ಯುಕ್ತಾಯುಕ್ತತೆಗಳನ್ನು ವಿಮರ್ಶಿಸುವ ಅದ್ಭುತ ಶಕ್ತಿಯನ್ನು ಕಳೆದುಕೊಂಡಲ್ಲಿ ವ್ಯಕ್ತಿ ತಿಳಿಗೇಡಿ ಯಾಗಿ ಆತನ ಜನ್ಮ ಸಾರ್ಥಕತೆಯು ಕಳೆದು ಹೋಗುತ್ತದೆ."

"ಸರ್, ಇದು ನಿಜವಾಗಿಯೂ ರೂಢಮೂಲವಾದ ಗೊಡ್ಡು ನಂಬಿಕೆ."

"ಆಳವಾಗಿ ಯೋಚಿಸಿ ನೋಡಿರಿ."

ವಿದ್ಯಾರ್ಥಿ ಕುಳಿತ.

ಲೈಲಾ ಎದ್ದು ನಿಂತಳು.

"ಸರ್, ಇಂದು ಮಾನವ ಸಾಮಾಜಿಕ ಪ್ರಾಕಾರಗಳಿಗಿಂತ ಪ್ರಾಣಿಗಳ ಸಾಮಾಜಿಕ ಪ್ರಾಕಾರಗಳು ಪರಿಶುದ್ಧವಾಗಿದೆ ಎಂದರೆ ತಪ್ಪಲ್ಲ." ಎಂದಳು ನಯನ ಯುಗ್ಮಗಳು ವಿಸ್ಫಾರಿತವಾದುವು.

"ವಾಸ್ತವ್ಯ" ಎಂದರು ಪ್ರೊಫೆಸರ್.

"ಅಂದಮೇಲೆ ಮಾನಸಿಕ ಬೆಳವಣಿಗೆ ಮುಖ್ಯವೇ ಹೊರತು ಕಡ್ಡಾಯ ದಿಂದ ಪ್ರಯೋಜನವುಂಟೇ ?"

"ಸಾಮಾಜಿಕ ರಂಗದಲ್ಲಿ ಪರಂಪರಾನುಗತವಾಗಿ ನಡೆದು ಬಂದ ಸಂಪ್ರದಾಯ, ಆಚಾರ, ವ್ಯವಹಾರಗಳು ನಮ್ಮದೃಷ್ಟಿಗೆ ತುಸು ಲಘುವಾಗಿ ಕಂಡರೂ ಪೂರ್ಣದೃಷ್ಟಿಗೆ ಬೌದ್ಧಿಕ, ಭಾವಾತ್ಮಕ, ಧಾರ್ಮಿಕ, ಆಧ್ಯಾತ್ಮಿಕ, ದಾರ್ಶನಿಕ ಮತ್ತು ಆದರ್ಶಗಳ ಚಟುವಟಿಕೆಗಳು ವ್ಯಕ್ತವಾಗದಿರುವುದಿಲ್ಲ. ಸಾಮಾಜಿಕ ಸಂಪ್ರದಾಯಗಳು ವಿಶಿಷ್ಟ ಜೀವನಕ್ಕೆ ನಾಂದಿ."

"ಹಿಂದೂ ಸಂಸ್ಕೃತಿಯ ರೂಢಮೂಲವಾದ ಸಮಾಜ ಶಾಸ್ತ್ರಕ್ಕೆ ಭಾರತೀಯರು ಹೊಂದಿಕೊಂಡು ಬಂದಿರುವುದರಿಂದಲೇ ಹಿಂದೂ ಸಂಸ್ಕೃತಿಯು ಇಂದಿಗೂ ಅಚ್ಚಳಿಯದೆ ಉಳಿದಿದೆ. ವ್ಯಕ್ತಿ ಸಂಪ್ರದಾಯ ಶರಣನಾದರೆ ಸರ್ವಧರ್ಮ ಸಮನ್ವಯ ದೃಷ್ಟಿ ಬೆಳೆದು ಬರುತ್ತದೆ. ಅಂತಲೇ ಸಮಾಜ ಶಾಸ್ತ್ರಕ್ಕೆ ಅಂದಿಗೂ ಇಂದಿಗೂ ಎಂದಿಗೂ ಮನ್ನಣೆ ದೊರೆಯುತ್ತದೆ."

"ಸರ್, ಪ್ರಾಣಿಗಳು ಸಾಮಾಜಿಕ ನಿಬಂಧನೆಗಳಿಲ್ಲದಿದ್ದರೂ ಧಾರ್ಮಿಕ ಜೀವನ ನಡೆಸುತ್ತವೆ. ಇದಕ್ಕೇನು ಹೇಳುವಿರಿ ?"

"ಅವು ನಿಜವಾಗಿಯೂ ಮಾನವರಿಗಿಂತ ಧರ್ಮಶೀಲತೆ ಪಡೆದಿವೆ. ಹಾಗೆಂದು ಅದೇ ನೇರಕ್ಕೆ ಮಾನವನನ್ನು ನೋಡಲಾಗದು. ಪ್ರಾಪ್ಯಕ್ಕಿಂತಲೂ ಹತ್ತು ಪಟ್ಟುಗಳಿಸುವ ಪ್ರಲೋಭನೆಗೆ ಸಿಕ್ಕಿರುವ ಅಪೂರ್ಣ ಮಾನವ ಆಂತರ್ಯದ ಕ್ಷಯ ಹೊಂದಿ ಮನುಷ್ಯತ್ವವನ್ನು ಕಳೆದುಕೊಳ್ಳುವುದರಿಂದ ಆತನಿಗೆ ಅಗತ್ಯವಾಗಿ ಸಾಮಾಜಿಕ ನಿಬಂಧನೆಗಳು ಬೇಕೇಬೇಕು."

ಲೈಲಳ ಮುಖದಲ್ಲಿ ಎಳೆನಗು ಬೆಳುದಿಂಗಳಂತೆ ಮೂಡಿತು.

"ಸರ್, ನಮ್ಮಲ್ಲಿರುವ ಸಾಮಾಜಿಕ ನಿಬಂಧನೆಗಳಿಂದ ಮಾನವ ಪ್ರಗತಿ ಪಥದಲ್ಲಿ ಹೆಜ್ಜೆ ಇಟ್ಟದ್ದಾನೆಯೆ ?"

"ಹೌದು ಎಂದರೆ ಅತಿಶಯೋಕ್ತಿಯಾಗಲಾರದು. ಮನುಷ್ಯ ನೂರೆಂಟು ಹಗಲುಗನಸುಗಳನ್ನು ಕಾಣುತ್ತಾನೆ. ಹಲವಾರು ವ್ಯವಹಾರಗಳನ್ನು ಹಚ್ಚಿಕೊಳ್ಳುತ್ತಾನೆ. ನಾನಾ ಕಾಮನೆಗಳು ತಲೆಯಲ್ಲಿ ತುಂಬಿ

ಕಾಮವಿಕಾರಗಳನ್ನು ಪ್ರಚೋದನೆಗೊಳಿಸುತ್ತವೆ. ಆಸೆ ನಿರಾಸೆಗಳ ಖಡ್ಗ ಹತಿಯಲ್ಲಿ ಸಿಕ್ಕಿ ಮಾನಸಿಕವಾಗಿ ದುರ್ಬಲನಾಗುತ್ತಾನೆ. ಮಾನಸಿಕ ಶೈಥಿಲ್ಯ ಹಿತಾಹಿತಗಳನ್ನು ಲಕ್ಷಿಸಲಾರದು. ಅಂತಲೇ ಮಾನವನಿಗೆ ಸಾಮಾಜಿಕ ನಿಬಂಧನೆಗಳು ಬೇಕೇಬೇಕು. ಕಟ್ಟುನಿಟ್ಟುಗಳ ಚೌಕಟ್ಟಿನಲ್ಲಿ ಬದುಕು ಸಾಗುವುದು ಬಹಳ ಕ್ಷೇಮ."

"ಸರ್, ಕಟ್ಟುನಿಟ್ಟುಗಳಿಗೊಳಪಟ್ಟು ಪತಿಪತ್ನಿಯರಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಲೋಕಾಭಿರಾಮವಾಗಿ ಬದುಕು ಸಾಗಿಸುವುದೇನು ಸುಖ?"

"ಭಿನ್ನಭಾವಗಳು ಸರಿಪಡಿಸಲಾಗದ ಸಮಸ್ಯೆಗಳಲ್ಲ. ಅವನ್ನು ಲಕ್ಷಿಸಿದರೆ ಭಿನ್ನಭಾವ. ಇಲ್ಲದಿದ್ದರೆ.....?" ಪ್ರೊಫೆಸರ ಸುಲಲಿತ ಕಂಠಶ್ರೀ ಪ್ರಶ್ನೆ ಹಾಕಿತು.

ಲೈಲಾ ಹಸನ್ಮುಖಿಯಾಗಿ ಕುಳಿತುಕೊಂಡಳು. ಕ್ಷೀಣಿತ ಕಟಿ ಪ್ರಾಂತ್ಯದಲ್ಲಿ ದೀರ್ಘ ಘನಕೃಷ್ಣವೇಣಿಯು ಹರಿದಾಡುತಿತ್ತು. ನಸು ತಲೆಬಾಗಿ ಕುಳಿತ ಅವಳ ಅವಿಲೋಲ ನೇತ್ರಗಳು ಗ್ರಂಥದ ಕಡೆ ಹರಿದುವು. ಎಡಬಲಗಳಲ್ಲಿನ ಹುಡುಗಿಯರು ಹರ್ಷದ ಹೂನಗೆ ಚೆಲ್ಲಿದರು. ಲೈಲಳ ಮುಖದಲ್ಲೂ ಪ್ರತಿನಗೆ ಒಡೆದು ಮೂಡಿತು. ತೆರೆದ ಕಿಟಕಿಯಿಂದ ನುಗ್ಗಿ ಬಂದ ಮಂದಪವನ ಮುಖ ಮೈಗಳನ್ನು ಮುದ್ದಿಟ್ಟು ಹೋದ. ಆ ಹೂಸ್ಪರ್ಶ ತನುಮನಗಳಿಗೆ ಆಹ್ಲಾದವನ್ನೂಡಿಸಿತು. ಸವಿಗಾಳಿಯ ಸವಿಯನ್ನು ಸವಿಯುತ್ತಾ ಕುಳಿತಳು ಲೈಲಾ. ತಲೆ ಹಲವು ಯೋಚನೆಗಳ ಬೀಡಾಗಿ ಕೆಲವು ನಿಮಿಷಗಳು ಸದ್ದಿಲ್ಲದೆ ಗತಿಸಿದುವು. ಹಿಂದಿನ ಬೆಂಚಿನಿಂದ ಸಣ್ಣಗೆ ಮಡಿಸಿದ ಚೀಟಿಯೊಂದು ಪ್ರೊಫೆಸರ ಕಣ್ಣು ತಪ್ಪಿಸಿ ಕೈಯಿಂದ ಕೈಗೆ ಚಲಿಸುತ್ತಾ ಬಂದು ಅವಳ ಮುಂದೆ ಕುಳಿತಿತು. ಅದರೆಡೆಗೆ ನೋಟ ಹರಿಯುವುದರೊಳಗಾಗಿ ಅದು ಮಾರ್ಟಿನ್ನನದೆಂಬುದನ್ನರಿತು ಮನಸ್ಸು ಸಿಡಿದೆದ್ದಿತು.....ಆತ ಗೊತ್ತುಗುರಿಯಿಲ್ಲದ ಹುಂಬ, ಕಾಲೇಜಿನ ಮೊದಲ ವರ್ಗದಲ್ಲೇ ಹಲವು ಬಾರಿ ಮುಗ್ಗರಿಸಿದ ವ್ಯಕ್ತಿ. ಆತನಲ್ಲಿ ಯಾವ ಉದ್ದಾಮ ಗುರಿಯೂ ಇಲ್ಲ. ಪುಂಡರ ಗುರು....ಸೋಮಾರಿಗಳ ಗೆಳೆಯ ಭಂಡರೊಳಗೆ ಭಂಡ. ನಾನಾತನ ಸ್ನೇಹವನ್ನು ಇನ್ನೊಂದು ಜನ್ಮಕ್ಕೂ

ಮಾಡಲಾರೆ, ಈ ಜನ್ಮದ ಮಾತಿರಲಿ ...

ಎದೆಯು ಹಕ್ಕಿ ಇನ್ನೂ ಏನೇನೋ ಉಲಿಯುತ್ತಲೇ ಇದೆ, ಅಕ್ಷರ ಅಕ್ಷರವೂ ಸ್ಪಷ್ಟವಾಗಿ ಕೇಳಿಸುವಂತೆ. ಮನೋವೇಗ ಸಹಜ ಅನುಭಾವದ ತರಂಗಗಳಿಗೆ ತಾಕಲಾಡುವಾಗ ಹೃದಯ ಮೃದಂಗ ಈಗಲೀಗ ಬಿರಿಯು ವಂತೆ ಉದ್ಘೋಷಿಸುತಿತ್ತು. ಒಂದು ಘಳಿಗೆ ಸುಮ್ಮನೆ ತಲೆಬಾಗಿ ಕಣ್ಮುಚ್ಚಿದಳು. ಕಣ್ತೆರೆದಾಗ ದೃಷ್ಟಿಗೆ ಬಿದ್ದುದು ಅದೇ ಚೀಟಿ. ಮರ್ಮ ಭೇದಿ ದೃಷ್ಟಿ ಒಮ್ಮೆ ಕಟುವಾದರೂ ಇನ್ನೊಮ್ಮೆ ಕರುಣಮನೋಹರ ಅಪಾಂಗಗಿಂದ ನಿಟ್ಟಿಸಿತು.

ಮಾರ್ಟಿನ್ ಜೀವನೋದ್ದೇಶದಲ್ಲಿ ಅಸಫಲನಾದರೂ ಪ್ರೇಮ ಸಾಮ್ರಾಜ್ಯದ ಅಧಿಪತ್ಯದಲ್ಲಿ ಅಸಫಲನಾಗಲು ಉದ್ದೇಶಿಸಿರಲಿಲ್ಲವೇನೋ.... ಬಾಷ್ಪಗದ್ಗದ ಕಂಠದಿಂದ ಪ್ರೇಮಭಿಕ್ಷೆಯನ್ನು ದೈನ್ಯವೇ ಮೂರ್ತಿಯೆತ್ತಿ ಬಂದಂತೆ ಹಲವಾರು ಬಾರಿ ಮುಂದಿಟ್ಟಿದ್ದ. ತಾವಿಬ್ಬರೇ ಎಲ್ಲಾದರೂ ನಿರ್ಜನ ಪ್ರದೇಶದಲ್ಲಿ ಚರ್ಚಿಸಬೇಕೆಂಬುದು ಅವನ ಆಶಯ. ಆದರೆ, ಈ ನರಜಂತುಗಳನ್ನು ನಂಬುವುದುಂಟೇ? ಇಷ್ಟಕ್ಕೂ ಜೀವನೋದ್ದೇಶದಲ್ಲಿ ಅಸಫಲನಾದ ವ್ಯಕ್ತಿಯೊಂದಿಗೆ ಜೀವನವಾದರೂ ಹೇಗೆ ಸಾಧ್ಯ ? ಹಾಗೆಂದರೆ ಅವನೆನ್ನುವುದು ಇಷ್ಟೆ, ನನ್ನ ವಿದ್ಯಾಭ್ಯಾಸ ಮುಗಿಯುವವರೆಗೆ ಅಪ್ಪ ಹಣ ಕೊಟ್ಟೇಕೊಡುತ್ತಾರೆ. ಅನಂತರ ನಾನು ದುಡಿದುಕೊಳ್ಳುವೆ, ಯೋಚಿಸ ಬೇಡ ಎಂದು.

ಆದರೆ........

ಆ ವಿಚಾರ ಸರಣಿಗೆ ಹಣೆ ಮಣಿಯುವಷ್ಟು ಪರಮ ಮೂರ್ಖಳಲ್ಲ ನಾನು. ಆತನ ಮನಮೋಹಕವಾದ ರೂಪಿಗೆ ಮನಸೋತು ಭವಿಷ್ಯವನ್ನು ಹಾಳುಮಾಡಿಕೊಳ್ಳಲಾರೆ. ನನಗೆ ಈ ಜೀವನದಲ್ಲಿ ಮಹತ್ಪೂರಿತ ಉದ್ದೇಶವಿದೆ. ಲಿಟರೇಚರ್ ಆನರ್ಸ್ ತೆಗೆದುಕೊಂಡದ್ದು ಬರಿಯ ಆಡಂಬರಕ್ಕಲ್ಲ ; ದಿವ್ಯ ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುವ ಸಾಹಸಕ್ಕಾಗಿ. ಸತ್ ಸಾಹಿತ್ಯ ಕ್ಷೇತ್ರದ ಮಹಾ ಶಾರದೀಯ ಸಾಗರದಲ್ಲಿ ಮುಳುಗಿ ಮಿಂದೆ ದ್ದರೆ ಅಗಾಧವಾದ ಮನಶ್ಶಾಂತಿ ; ಇಲ್ಲದಿದ್ದರೆ ಇಲ್ಲವೇ ಇಲ್ಲ. ಕಾಮನೆಗಳ ಕೊಳದಲ್ಲಿ ಮಿಾಯುವುದಕ್ಕಿಂತ ಸಾಹಿತ್ಯ ಸಾಗರದಲ್ಲಿ ಈಸುವುದು ಲೇಸು.

ನನ್ನ ಜೀವನೋದ್ದೇಶವೇ ಅದು. ಈ ನಾರೀ ಜೀವನದ ಪರಮಲಕ್ಷ್ಯವೂ ಸಹ ಅದೇ. ಒಂದು ವೇಳೆ ಸಫಲಳಾದರೆ ನನ್ನ ಜನ್ಮಜನ್ಮಾಂತರಗಳು ಕೃತಾರ್ಥವಾದಂತೆಯೇ. ಹಾಗೆಂದು ನನ್ನ ಲೇಖನಿಯಿಂದ ಸಾಹಿತ್ಯ ಕ್ಷೇತ್ರವು ಕಲುಷಿತವಾಗಬಾರದು, ಎಂಬ ಅನುಪಮ ಲಕ್ಷ್ಯವನ್ನೂ ಸಹ ನಾನು ಮರೆಯುವುದಿಲ್ಲ.

ಅಂದಮೇಲೆ ನಾನಿಡುವ ಹೆಜ್ಜೆ ಮಂಗಳಮಯವಾಗಿರಲೇಬೇಕು. ನನ್ನ ಆಶೆ-ಆಕಾಂಕ್ಷೆಗಳಿಗೆ ಆ ಭಗವಂತ ಸಹಾಯ ಮಾಡಿದರೆ ಸಾಕು.... ಅಷ್ಟಾದರೆ ನಾನು ಪರಮಸುಖಿ....ಓ....ಭಗವಂತಾ ನನಗೆ ಅಷ್ಟು ಸಹಾಯ ಮಾಡು....

ಹೃದಯ ಬನದ ಕೋಗಿಲೆ ಮೊರೆಯಿಡುತ್ತಲೇ ಇತ್ತು-ಕೊನೆ ಮೊದಲಿಲ್ಲದಂತೆ.

ಯಾವುದೋ ಜಡಿನೆಯಲ್ಲಿ ಬಿಗಿದು ಕೂತಂತೆ ಕುಳಿತ ಅವಳನ್ನು ಎಡಬಲಗಳಲ್ಲಿನ ಹುಡುಗಿಯರು ತಿವಿದು-"ಏನು ಅಮ್ಮಾವರು....ಮಾರ್ಟಿನ್ನನ ಧ್ಯಾನದಲ್ಲಿ ಮೈಮರೆತಿರಲ್ಲಾ....!"

ಹಾಸ್ಯಸಲಿಲವಾಣಿ ಮಧುರವಾಗಿ ಹರಿದಾಗ ಕಪೋಲಪಾಲಿಯಲ್ಲಿ ಯಾವುದೋ ಒಂದು ವಿಚಿತ್ರವಾದ ಗಂಭೀರ ಅಲಸಿಕೆ ಮುದ್ರೆಯೊತ್ತಿದಂತಿತ್ತು. ಲಜ್ಜೆಯಿಂದ ಆರಕ್ತಮಯವಾದ ಮುಖದ ಶೋಭಾ ಸಮುದ್ರದಲ್ಲಿ ಸಣ್ಣ ತರಂಗವೆದ್ದು ತಟ್ಟನೆ ಶಾಂತವಾದಂತೆ ಉದಿಸಿದ ಮುಹೂರ್ತದಲ್ಲಿಯೇ ಲಜ್ಜೆಗೆಂಪು ಅಳಿಯಿತು. ಆಕೆ ಸ್ಥಿರಗಂಭೀರದಿಂದ ಚೀಟಿಗೆ ಕೈ ಹಾಕಿದಳು. ಮುಖಬಿಂಬದಲ್ಲಿ ಅಲೆಅಲೆಯಾಗಿ ಸೂಸಿ ಬರುವ ಭಾವಧಾರೆ ವಿಚಾರತರಂಗಗಳಿಗೆ ತಾಕಲಾಡುತಿತ್ತು. ತೆರೆದ ಕಿಟಕಿಯಿಂದ ಪಲ್ಲವಿತ ವನಸುಮಗಳ ಕಮನೀಯ ಕಂಪು ಮೆಲ್ಲಮೆಲ್ಲನೈತಂದು ನಾಸಿಕಾಗ್ರದಲ್ಲಿ ನುಗ್ಗಿ ತನುಮನಗಳಿಗೆ ಆಹ್ಲಾದವನ್ನೂಡಿಸಿತು. ಸವಿಗಂಪನ್ನು ಸವಿಯುತ್ತಾ ಚೀಟಿಯ ಮಡಿಕೆಯನ್ನು ಬಿಚ್ಚಿದಳು ಲೈಲಾ.

"ಭಿನ್ನಭಾವಗಳು ಸರಿಪಡಿಸಲಾಗದ ಸಮಸ್ಯೆಗಳಲ್ಲ; ಅವನ್ನು ಲಕ್ಷಿಸಿದರೆ ಭಿನ್ನಭಾವ. ಇಲ್ಲದಿದ್ದರೆ....?"

ಪ್ರೊಫೆಸರ ನುಡಿಯನ್ನು ತನ್ನ ಲೇಖನಿಯಲ್ಲಿ ಸೆರೆಹಿಡಿದಿದ್ದ

ಮಾರ್ಟಿನ್. ಹೇಗೆಂದರೆ ಹಾಗೆ ಸಮಯ ಸಂದರ್ಭಗಳನ್ನು ಉಪಯೋಗಿಸಿಕೊಳ್ಳಬಲ್ಲ ಎನಿಸಿ ತನ್ನಷ್ಟಕ್ಕೆ ಸಣ್ಣ ನಗು ಮೂಡಿ ಮಾಯವಾಯಿತು. ಅಂದಿನಿಂದಲೂ ಒಂದಲ್ಲ, ಎರಡಲ್ಲ, ಹಲವಾರು ಬಾರಿ ಒಲ್ಲೆನೆಂದು ಆತನಿಗೆ ಹೇಳಿಯಾಗಿತ್ತು. ಶುದ್ಧಾಂಗವಾಗಿ ನಿರಾಕರಿಸಿಯೂ ಆಗಿದೆ. ಆದರೂ, ಇನ್ನೊಮ್ಮೆ ಪರ್ಯಾಲೋಚಿಸು ಎಂಬುದು ಅವನ ಕೋರಿಕೆ. ಆಗುವುದಿಲ್ಲ ಎಂದ ಮೇಲೂ ಬೇಡುವುದು ಕಾಡುವುದು ಕೀಟಲೆ ಕೊಡುವುದು ಎಂತಹ ಅಸಹ್ಯ. ಇಂತಹವರಿಗೆ ಸಾಮಾಜಿಕ ಪ್ರಾಕಾರಗಳು ಇಲ್ಲದೆ ಹೋಗಿದ್ದರೆ ನಿಜವಾಗಿಯೂ ಕಷ್ಟವೆ.....

ಯೋಚಿಸುತ್ತಾ ಚೀಟಿಯನ್ನು ಮುದುರಿಸಿ ಮುದ್ದೆಗಟ್ಟಿ ಗುಲುಗಂಜಿಯಂತೆ ಸಣ್ಣಗೆ ನುಲಿದು ಕೆಳಗೆ ಎಸೆದಳು. ಅದು ಉರುಳಿ ಡೆಸ್ಕಿನಡಿ ಬಿದ್ದಿತು, ಕುಪಿತ ಮಗು ಮೂಲೆಯನ್ನು ಸೇರುವಂತೆ. ಚಿತ್ತಭಿತ್ತಿಯಲ್ಲಿ ಮಾರ್ಟಿನ್ನನ ದೈನ್ಯ ಮನೋಹರ ಮೂರ್ತಿ ತಳಕ್ಕನೆ ಸುಳಿದಳಿಯಿತು. ಮನಸ್ಸು ಒಂದು ಘಳಿಗೆ ಡೋಲಾಯಮಾನವಾಗಿ ತುಸು ಯೋಚನೆಗೊಳಗಾದಳು. ಅನ್ಯಥಾ ಚಿಂತೆಯ ಭಾರವನ್ನೇ ಆಗಲೀ, ಈಗಲೇ ಭವಿಷ್ಯವನ್ನು ನಿರ್ಧರಿಸುವ ಹೊಣೆಯನ್ನೇ ಆಗಲೀ ಹೊರಲಾರದೆ ಈ ಉತ್ಕಟ ಪರಿಸ್ಥಿತಿಯಿಂದ ನನ್ನನ್ನು ಕಾಪಾಡು ಎಂದು ಮೊರೆಯಿಟ್ಟಿತು, ಅಂತರಾತ್ಮ.

ಚೀಟಿಗಾದ ಮರ್ಯಾದೆಯನ್ನು ಕೈಯಿಂದ ಕೈಗೆ ಚಲಿಸಿದ ಚೀಟಿಯೊಂದು ಸದ್ದಿಲ್ಲದೆ ಹೋಗಿ ಮಾರ್ಟಿನ್ನನಿಗೆ ವರದಿ ಮಾಡಿತು. ಮಾರ್ಟಿನ್ ಅಲ್ಲಿಗೂ ಸುಮ್ಮನಾಗಲಿಲ್ಲ. ಪುನಃ ಏನನ್ನೋ ಸಣ್ಣಗೆ ಗೀಚಿ ಸಣ್ಣ ಚೀಟಿಯೊಂದನ್ನು ಸಹಪಾಟಿಗಳ ಮುಖೇನ ಕೈಯಿಂದ ಕೈಗೆ ಸಾಗಿಸಿದ. ಪ್ರೊಫೆಸರ ಕಣ್ಣು ತಪ್ಪಿಸಿ ಮರುಕ್ಷಣದಲ್ಲಿ ಲೈಲಳ ಮುಂದೆ ಹಾಜರಾಯಿತು ಆ ಸಣ್ಣ ಚೀಟಿ. ಈ ಸಲ ಅವಳು ಅದನ್ನು ಬಿಚ್ಚಿ ಸಹ ನೋಡಲಿಲ್ಲ. ಪಕ್ಕದಲ್ಲಿ ಮೈಗೆ ಮೈಯಾನಿಸಿ ಕುಳಿತಿದ್ದ ಲ್ಯೂಸಿ ಪಿಸುದನಿಯಲ್ಲಿ ಕೇಳಿದಳು "ಅದೇಕೆ ನೋಡಲಿಲ್ಲ ಲೈಲಾ ?"

"ಶ್ಶ್ ! ಸುಮ್ಮನಿರು."

ಲ್ಯೂಸಿ ತುಂಟ ನಗೆ ಬೀರಿದಳು. ಕಣ್ಣುಗಳಲ್ಲಿ ಆಶ್ಚರ್ಯದ ಛಾಯೆ ಮಿನುಗಿತು.

ಸಾಲುಸಾಲಾಗಿ ಕುಳಿತ ಹುಡುಗಿಯರ ಕುತೂಹಲ ತೃಷಿತ ಕಣ್ಣಾಲಿಗಳು ಇತ್ತ ಹೊರಳಿದುವು. ಎಡಬಲಗಳಲ್ಲಿ ತುಂಟ ನಗುವಿನ ಎಳೆ ಸದ್ದು ಮೆಲ್ಲನೆ ಮರ್ಮರಿಸಿತು. ಲೈಲಳ ಗಂಭೀರ ಮನೋಹರ ಅಪಾಂಗ ಎಡ ಬಲಗಳಲ್ಲಿ ಒಂದೆರಡು ಕ್ಷಣ ಹರಿದಾಡಿ ಮತ್ತೆ ನೋಟ್ ಬುಕ್ಕಿನೆಡೆಗೆ ಹರಿಯಿತು.

ವೇದಿಕೆಯಿಂದ ಪ್ರೊಫೆಸರ ಕಂಠ ಕಹಳೆಯಂತೆ ಮೊಳಗಿತು.

"ಮದುವೆಯೆಂಬುದು ಸಗ್ಗ ನಿಶ್ಚಿತವಾದುದು. ಇಂತಹ ಹೆಣ್ಣಿಗೆ ಇಂತಹ ಗಂಡೆಂಬುದು ಬ್ರಹ್ಮಲಿಖಿತವೇ ವಿನಾ ಮಾನವನಿಶ್ಚಿತವಲ್ಲ. ಒಮ್ಮೆ ಒಲ್ಲೆವೆಂದು ತೊರೆದ ಹೆಣ್ಣು ಗಂಡುಗಳೇ ಮುಂದೆ ದಂಪತಿಗಳಾಗುವುದು, ಪ್ರೇಮಿಸಿದ್ದ ಹೆಣ್ಣು ಗಂಡುಗಳು ವ್ಯವಹಾರಿಕವಾಗಿ ತಪ್ಪಿಹೋಗಿ ಎಲ್ಲೋ ಗೊತ್ತು ಗುರಿಯಿಲ್ಲದೆಡೆ ಮದುವೆಯಾಗುವುದು, ಮದುವೆಯಾಗುವುದಿಲ್ಲವೆಂದು ನಿರ್ಧರಿಸಿದ ವ್ಯಕ್ತಿಗಳು ಅನಂತರ ಮನಸ್ಸು ಬದುಲಿಸಿ ಮದುವೆಯಾಗುವುದು. ಇಂತಿಂತಹ ಘಟನೆಗಳನ್ನು ಒರೆಗೆ ಹಚ್ಚಿನೋಡಿದರೆ ಮದುವೆ ಎಂಬುದು ಮಾನವ ನಿಯೋಜಿತವಲ್ಲ ಎಂಬುದು ಅರ್ಥವಾಗುತ್ತದೆ."

ಮಾರ್ಟಿನ್ ಎದ್ದು ನಿಂತ.

"ಸರ್, ನೀವು ಹೇಳುವ ರೀತಿಯನ್ನು ಗಮನಿಸಿದರೆ ಮಾನವ ಪ್ರಯತ್ನ ಏನೇನೂ ನಡೆಯುವುದಿಲ್ಲ ಎಂದ ಹಾಗಾಯಿತು."

"ಹೌದು ಎಂದರೆ ತಪ್ಪಲ್ಲ."

"ಹಾಗಾದರೆ...." ತುಸು ಅನುಮಾನಿಸಿದ ಮಾರ್ಟಿನ್.

"ಹೂಂ, Go on." ಪ್ರಸನ್ನವಾಣಿ ಮೊಳಗಿತು.

"ಹಾಗಾದರೆ....ಪರಸ್ಪರ ಬಯಸುವ ಹೆಣ್ಣು ಗಂಡುಗಳಿಗಾಗಿ ಪ್ರಯತ್ನಿಸುವುದು ಪ್ರಯೋಜನವಿಲ್ಲವೇ ?"

"ಅದು ಸಗ್ಗ ನಿಶ್ಚಿತವಾಗಿರದಿದ್ದಲ್ಲಿ ಖಂಡಿತ ಪ್ರಯೋಜನವಿಲ್ಲ."

"ಸರ್, ನಾನು ಬಯಸುವ ಹೆಣ್ಣು ಸಗ್ಗ ನಿಶ್ಚಿತವಾಗಿರುತ್ತದೆ ಎಂದೇ ಭಾವಿಸುವೆ!"

ಒಡನೆ ಎಲ್ಲೆಲ್ಲೂ ನಗುವಿನ ಮಧುರಧಾರೆ ಉಕ್ಕಿ ಹರಿಯಿತು.

ಲೈಲಳ ಚಂಗೆನ್ನೆಗಳ ಮೇಲೆ ಮೂಡಿದ ಲಜ್ಜೆಯ ಶೋಭೆ ದರ್ಶನೀಯವಾಗಿತ್ತು.

ಸಮಾಜ ಶಾಸ್ತ್ರದ ಪ್ರೊಫೆಸರ್ ನಗುನಗುತ್ತ "I hope so." ಎಂದರು.

ಎಡ ಬಲಗಳಲ್ಲಿನ ಹುಡುಗರು ಹರ್ಷೋದ್ಗಾರ ಮಾಡಿದರು.

ಮಾರ್ಟಿನ್ ಕುಳಿತ. ಎದೆಯ ಸಂತಸ ಮುಖಮುದ್ರೆಯಲ್ಲಿ ಹೊಮ್ಮಿ, ಅರಳಿ ಹೊಂದಾವರೆಯಾಯಿತು.

ಪ್ರೊಫೆಸರ ವಿಚಾರಧಾರೆ ಪುನಃ ಮುಂದುವರಿಯಿತು.

"ಮನುಷ್ಯ ಪ್ರವೃತ್ತಿಗೂ ಪ್ರಾಣಿ ಪ್ರಾಕಾರಗಳಿಗೂ ಅಜಗಜಾಂತರವಿದೆ. ರೂಢಿಮೌಢ್ಯ ಮತಾಂಧತೆಗಳು ನಮ್ಮದೃಷ್ಟಿಗೆ ಅತಿಯೆನಿಸಿದರೂ ಸಾಮಾಜಿಕ ಪ್ರಾಕಾರಗಳನ್ನು ಅಲ್ಲಳೆಗಯುವಂತಿಲ್ಲ. ಸ್ವಹಿತರಕ್ಷಣೆ ಮಾನವನ ಜನ್ಮಸಿದ್ಧವಾದುದು. ಆದಿಮಾನವ ಸ್ವಹಿತ ಸಾಧನೆಯ ಸಲುವಾಗಿ ಕ್ರಮ ಕ್ರಮೇಣ ಕುಟುಂಬವರ್ಗವನ್ನು ಬೆಳೆಸಿಕೊಂಡ. ಅನಂತರ ಅವರ ರಕ್ಷಣೆಯ ಭಾರ ಹೆಗಲನ್ನೇರಿತು. ಕುಟುಂಬ ರಕ್ಷಣಾ ವ್ಯವಸ್ಥೆಗಳು ಸಾಮಾಜಿಕ ಎಲ್ಲೆಕಟ್ಟುಗಳನ್ನು ನಿರ್ಮಿಸಿದುವು. ಇವು ಮೇಲುನೋಟಕ್ಕೆ ಕರ್ಕಶವಾಗಿ ತೋರಿದರೂ ಬಹಳ ಮಟ್ಟಿಗೆ ಮನುಷ್ಯತ್ವಕ್ಕೆ, ನಿರ್ಮಲ ಜೀವನಕ್ಕೆ ತಳಹದಿ."

ಪಕ್ಕದ ಬೆಂಚಿನಿಂದ ಇನಿದನಿಯೊಂದು ಮೊಳಗಿತು.

"ಸರ್, ಸಾಮಾಜಿಕ ಪ್ರಾಕಾರಗಳಿಗೆ ನಾವು ತಲೆ ಬಾಗಲೇ ಬೇಕಾದಲ್ಲಿ ನಮ್ಮ ವಿದ್ಯೆಬುದ್ಧಿಗಳಿಂದಾಗುವ ಪ್ರಯೋಜನವಾದರೂ ಏನು ?"

"ಪ್ರಯೋಜನವಿಲ್ಲವೇ ?.....ಯೋಚಿಸಿನೋಡಿ. ಸಾಮಾಜಿಕ ಸುಭದ್ರತೆಗಾಗಿ, ಸಾಮಾಜಿಕ ಸುಧಾರಣೆಗಾಗಿ ವಿದ್ಯೆ ಬುದ್ಧಿಗಳ ಅಗತ್ಯ ಬಹಳವಿದೆ."

"ಸರ್, ಸಾಮಾಜಿಕ ಪ್ರಾಕಾರಗಳಿಂದ ಮನುಷ್ಯ ಸುಖಿಯಾಗಿದ್ದಾನೆಯೆ ?"

"ವಿಷಯವನ್ನು ಸೂಕ್ಷ್ಮವಾಗಿ–ಕೂಲಂಕಷವಾಗಿ ಪರಿಶೀಲಿಸಿದರೆ ಸಾಮಾಜಿಕ ಪ್ರಾಕಾರಗಳಿಂದ ಮನುಷ್ಯ ಸುಖಿ ಎಂಬುದಷ್ಟೇ ಅಲ್ಲ, ಆತನ

ಜ್ಞಾನದೀವಿಗೆ ಉಜ್ವಲವಾಗಿ ಬೆಳಗುತ್ತದೆ ಎಂಬುದನ್ನು ನೀವು ಅರಿಯ ಬಲ್ಲಿರಿ."

"ದಯಮಾಡಿ ವಿವರಿಸಿ ಹೇಳಿ ಸರ್."

"ನಿಮ್ಮ ಹರಿತವಾದ ಮನಸ್ಸಿನ ಗೊತ್ತುಗುರಿಯಿಲ್ಲದ ಕಾಮನೆಗಳಿಗೆ ಅಡೆತಡೆಗಳಿಲ್ಲದಿದ್ದರೆ ಪ್ರತಿ ಘಳಿಗೆಯಲ್ಲೂ ಗಂಡವನ್ನೆದುರಿಸಬೇಕಾಗುತ್ತದೆಂಬುದನ್ನು ನೀವು ಯೋಚಿಸಲಾರಿರಾ ?"

ವಿದ್ಯಾರ್ಥಿನಿ ಕುಳಿತುಕೊಂಡಳು.

ಲೈಲಾ ಎದ್ದು ನಿಂತಳು.

"ಸರ್, ಈ ಅಡೆತಡೆಗಳಿಂದಲೇ ಹೆಣ್ಣು ಗಂಡಿನ ಗುಲಾಮಳಾಗಿದ್ದಾಳೆ !"

ಮಾರ್ಟಿನ್ ಸಮರ್ಥಿಸಿದ "ಹೌದು ಸರ್, ಅದು ಖಂಡಿತವಾಗಿಯೂ ನಿಜ. ಈ ಎಲ್ಲಿ ಕಟ್ಟಿನಿಂದಾಗಿಯೇ ಹೆಣ್ಣು ಇನ್ನೂ ಭೋಗ ಸಾಮಾಗ್ರಿಯಾಗಿದ್ದಾಳೆ !"

ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುವಷ್ಟು ಆನಂದ ಮೂಡಿತು ಮಾರ್ಟಿನ್ನನಿಗೆ.

"ವಿದ್ಯೆ ಬುದ್ಧಿಗಳು ಸ್ತ್ರೀ ಪುರುಷರಲ್ಲಿ ಸಮಾನ ಭಾವನೆ ಮೂಡಿಸುತ್ತವೆ" ಎಂದರು ಸಮಾಜ ಶಾಸ್ತ್ರದ ಪ್ರೊಫೆಸರ್.

ಕೆಲವೇ ಕೆಲವು ನಿಮಿಷಗಳೊಳಗಾಗಿ ಪ್ರೊಫೆಸರ ಕಣ್ಣು ತಪ್ಪಿಸಿ ಕೈಯಿಂದ ಕೈಗೆ ಚಲಿಸುತ್ತಾ ಬಂದ ಚಿಕ್ಕ ಚೀಟಿಯೊಂದು ಪುಟಿದು ಲೈಲಳ ಮುಂದೆ ಕುಳಿತಿತು....ಸ್ತ್ರೀ ಪುರುಷರ ನಡುವೆ ಸಮಭಾವನೆಯೇ ಸುಖಜೀವನಕ್ಕೆ ತಳಹದಿ ಎಂಬುದು ಮಾರ್ಟಿನ್ನನ ದೃಢ ಮನೋಭಾವ.....

ಲೈಲಾ ಅದನ್ನು ಕಡೆಗಣ್ಣಿನಿಂದ ನೋಡಿ ಹರಿದು ಸಣ್ಣ ಮುದ್ದೆಗಟ್ಟಿ ಕೆಳಗೆಸೆದಳು. ವಯರ್‌ಲೆಸ್ ಸುದ್ದಿಯಂತೆ ಅದು ಆ ಕೊನೆಯನ್ನು ಮುಟ್ಟಿದ ವಿಚಾರವು ಈ ಕೊನೆಗೂ ನಿರಾಯಾಸವಾಗಿ ಬಂದು ತಲುಪಿತು. ಹೇಗಾದರೂ ಈ ನಿತ್ಯ ದುರಂತದಿಂದ ತಪ್ಪಿಸಿಕೊಳ್ಳಬೇಕೆಂಬುದು ಎದೆಯ ಮೊರೆ. ಏನೇ ಆದರೂ ಅವನು ಬಿಡ. ಭಯ-ಉದ್ವೇಗ-ಚಂಚಲತೆಗಳ ದಾಂಧಲೆಯಲ್ಲಿ ಸಿಕ್ಕಿ ಹೃದಯ ತಳಮಳಗೊಂಡಿತು. ನೋಟ್ಸ್ ಬರೆಯುವ

ನೆಪದಲ್ಲಿ ತಲೆಬಾಗಿ ಕುಳಿತುಕೊಂಡಳು. ತಲೆಯನ್ನು ನೂರಾರು ಯೋಜನಾ ಸರಣಿಗಳು ಮುತ್ತಿದುವು. ಸುಖ ದುಃಖಗಳ ಹೊಸಲಲ್ಲಿ ನಿಂದು ಪುಸ್ತಕಗಳನ್ನು ಜೋಡಿಸಿಕೊಳ್ಳುವಾಗ ಪುಸ್ತಕದ ಮೊದಲ ಹಾಳೆಯಲ್ಲಿ ಕಣ್ಣೋಚರಿಸಿದುದು ಮುದ್ದಾದ ಹೆಸರು ಮಾರ್ಟಿನ್ !

ಅದಾವ ಗೆಳತಿಯೋ ಮುದ್ದು ಅಕ್ಷರಗಳಲ್ಲಿ ಮುದ್ದಾಗಿ ಹೆಸರು ಕೆತ್ತಿದ್ದಾಳೆ. ಛೀಃ! ಹರಿಯುವಂತಹ ಹಾಳೆಯೂ ಅಲ್ಲ; ಅಳಿಸುವಂತಹ ಮಸಿಯೂ ಅಲ್ಲ. ಈ ಸಹಪಾಟಿಗಳ ಕೀಟಲೆ ದೇವರಿಗೇ ಪ್ರೀತಿ.....ಲೈಲಳಿಗೆ ಸಿಟ್ಟು ದುಃಖಗಳೆರಡೂ ಒಮ್ಮೆಲೇ ಉಕ್ಕಿ ಬಂದುವು. ಮುಖ ರಂಗೊರೆದಂತೆ ಕೆಂಪು ತಳೆಯಿತು. ಮಸಿ ಅಳಿಸುವ ರಬ್ಬರಿನಿಂದ ಉಜ್ಜಿ ಉಜ್ಜಿ ಅಳಿಸ ಹತ್ತಿದಳು. ಅದು ಹೋಗದಾದರೂ ಇವಳು ಬಿಡಳು.

ಎಡಬಲಗಳಲ್ಲಿನ ಹುಡುಗಿಯರು ನಗು ಮುಖದಿಂದ ಪಿಸುಗುಟ್ಟಿದರು.... ಮಾರ್ಟಿನ್ !

ಮಾರ್ಟಿನ್ !

ನಿಜವಾಗಿಯೂ ಮುದ್ದಾದ ಹೆಸರು. ಅವನೂ ಸಹ ಮುದ್ದಾಗಿದ್ದಾನೆ..... ಆದರೆ..... ಆದರೆ.... ಅಧಿಕಪ್ರಸಂಗಿ..... ಶತಮೂರ್ಖ..... ಹಗ್ಗಕಿತ್ತಗೂಳಿ.... ಅರಿತೋ ಅರಿಯದೆಯೋ ಎಲ್ಲರೂ ತಪ್ಪು ಮಾಡುತ್ತಾರೆ; ಹಾಗೆಂದು ಇನ್ನೊಬ್ಬರ ಮೇಲೆ ಬಲಾತ್ಕಾರ ಹೇರುವುದು ಸರಿಯಲ್ಲ. ನನಗಿಷ್ಟವಿಲ್ಲವೆಂಬುದು ಈತನಿಗೆ ಅಂದಿನಿಂದಲೂ ಗೊತ್ತು. ಮತ್ತೂ ಮತ್ತೂ ಕಾಡುವುದೆಂದರೇನು ? ಸುದ್ದಿ ಊರೆಲ್ಲಾ ಜನಜನಿತವಾಯಿತು. ಈತನಿಂದ ಮನಸ್ಸಿಗೆ ನೆಮ್ಮದಿಯಿಲ್ಲ. ಚಿಂತೆ.....ಚಿಂತೆ.....ಯೋಚಿಸಲೂ ಸಮಯವಿಲ್ಲದಷ್ಟು ಚಿಂತೆ. ಈ ಕಾಟ ತಡೆಯಲಾರೆ, ಯಾರ ಕರ್ಮಕ್ಕೆ ಯಾರು ಬಳಲಬೇಕು.....?

ಪದ್ಮಪಲಾಶದ ಮೇಲಿನ ತುಹಿನ ಬಿಂದುಗಳಂತೆ ಆಕೆಯ ಶೋಣವರ್ಣದ ಮುಖದಮೇಲೆ ತುಂತುರು ತುಂತುರಾಗಿ ಬೆವರಿನ ಹನಿಗಳು ಮೂಡಿದುವು. ಹೃದಯಕಾಂತಾರದಲ್ಲಿ ಸಾರಸಗಳ ಕ್ರೇಂಕಾರದಂತೆ ಹೊಮ್ಮುತ್ತಿದೆ ಕಿಸಲಯ ಕೋಮಲವಾಣಿ.....ಬೇಡ.....ಬೇಡ.....ನೀನೊಪ್ಪಲೇ ಬೇಡ....

ಪುಸ್ತಕಗಳನ್ನು ಜೋಡಿಸಿಕೊಂಡು ಹುಡುಗಿಯರ ಗುಂಪಿನೊಳಗೆ ಸುಸುಳಿ ಮನೆ ಮುಟ್ಟಿದಾಗ ಎದೆಯ ಭಾರ ಇಳುಹಿದಂತಾಯಿತು. ಆದರೂ, ಅವನ ರೀತಿ ನೀತಿಗಳು ಇನಿತೂ ಕುಗ್ಗಲಿಲ್ಲ. ಹಾದಿ ಬೀದಿಯಲ್ಲಿ ಅಂಗಡಿಗಳಲ್ಲಿ ಲೈಬ್ರರಿಯಲ್ಲಿ ಕಾಲೇಜಿನಲ್ಲಿ ಎಲ್ಲೆಂದರಲ್ಲಿ ಯಾವಾಗೆಂದರೆ ಆವಾಗ ಪ್ರತ್ಯಕ್ಷನಾಗಿ ಬಿಡುವ. ಯಾವ ಸಮಯದಲ್ಲಿ ಏನೋ ಎಂಬಷ್ಟು ಭಯ ಭೀತಿಯಿಂದ ಹೃದಯ ಬಿರಿಯುವಂತಾಗುವುದು. ಮೈಯಲ್ಲಿ ಕಂಪನದ ಅಲೆ ಹರಿದಾಡುವುದು. ಊರು ಬಿಟ್ಟು ಬೇರೆಲ್ಲಾದರೂ ಹೋಗಲೇ ಎಂಬಷ್ಟು ಯೋಚನೆ....ಆದರೆ, ಹೋಗುವುದಾದರೂ ಎಲ್ಲಿಗೆ?.... ಕಡು ಹಿಂಸೆ....ತಡೆಯಲಾಗದ ಹಿಂಸೆ.....

ದಿನಗಳಗಾಲಿಯುರುಳಿತು.

ಶಾಲಾ ಕಾಲೇಜುಗಳು ರಜವನ್ನು ಸಾರಿವೆ.....

ಎರಡುವಾರಗಳು ಕಳೆಯುವತನಕ ಮಾರ್ಟಿನ್ನನ ಕಾಟವಿಲ್ಲ. ಹುಡುಗ ಹುಡುಗಿಯರ ಅಣಕವೂ ಇಲ್ಲ. ತಲೆ ನೂರು ಯೋಚನೆಗಳಿಂದ ಒಮ್ಮೆಲೇ ಬಿಡುಗಡೆ ಹೊಂದಿತು. ಲೈಲಾ ಮನೆ ಮಂದಿಯೊಂದಿಗೆ ಸೇರಿ ಕೊಂಡು ನೆಮ್ಮದಿಯ ಮುಂಡಿಗೆಯನ್ನುಣ್ಣ ತೊಡಗಿದಳು. ಹಾಗೆ ಅದೆಷ್ಟು ದಿನಗಳುರುಳಿದುವೋ....

ಹಾಂ....!

ದಿನಾಂತ ಕಾಲೀನ ಅಸುರ ಸಂಭ್ರಾಂತ ಶ್ರೀಮಂತ ಸಂಧ್ಯೆ !

ತಣ್ಣನೆಯ ಮೆಲ್ಲೆಲರಿಗೆ ಮೈಗೊಟ್ಟ ಲೈಲಾ ಹೂಗಿಡಗಳಿಗೆ ಆನಂದದಿಂದ ನೀರೆರೆಯುತ್ತಿದ್ದಾಳೆ. ನೆತ್ತಿಯ ಮೇಗಡೆ ಬಾನ್ ಬಯಲ ನೀಲ ಮಹಾ ಸಾಗರದಲ್ಲಿ ಶಾಂತಿ ಸಂಭ್ರಮಗಳಿಂದ ಹಾರುವ ಬೆಳ್ಳಕ್ಕಿಗಳ ಸಮೂಹ ಮಲ್ಲಿ ಗೆಯ ಹೂಗಳನ್ನೆರಚಿದಂತೆ ನಯನ ಮನೋಹರವಾಗಿ ಕಂಗೊಳಿಸುತ್ತಿವೆ. ಮಾಮರದ ಕೆಂದಳಿರಿನ ನೆತ್ತಿಯಲ್ಲಿ ಹುದುಗಿ ಕುಳಿತ ಕಾಮಳ್ಳಿ ಇನಿದನಿ ಯಲ್ಲಿ ಹಾಡುತ್ತಿದೆ. ಲೈಲಾ ಬಿಂದಿಗೆಯ ಸಹಿತ ಒಂದು ಘಳಿಗೆ ನಿಂತಳು. ಅಂಬರದಲ್ಲಿ ಸಾಲುಗಟ್ಟಿ ಹಾರುವ ಬೆಳ್ಳಕ್ಕಿಗಳು ತನುಮನಗಳನ್ನು ಸೂರೆ ಗೊಂಡುವು. ಅಪೂರ್ವ ಆನಂದಾನುಭವದಿಂದ ಹೃದಯ ಸಮುದ್ರದ ಅಲೆಗಳು ತುಯ್ಯಲಾಡಿದುವು.

ಟಪ್. ಟಪ್. ಟಪ್. ಟಪ್.

ಚಿತ್ತೈಕಾಗ್ರತೆಗೆ ಭಂಗತಂದ ಆ ಸಪ್ಪಳ ವೃತ್ಯುವಿನ ಹೆಜ್ಜೆಗಳ ಲೀಲಾ ವಿಲಾಸದಂತೆ ಕೇಳಿಸುತ್ತಿದೆ. ಟಪ್. ಟಪ್. ಟಪ್. ಟಪ್.

ಸದ್ದು ಬಂದ ಕಡೆಗೆ ಕಣ್ಣುಗಳು ಸಹಜವಾಗಿ ಹರಿದುವು.

ಮಾರ್ಟಿನ್ !

ಸಂಜೆಯ ಮುಬ್ಬುಗತ್ತಲಿನಲ್ಲಿ ಕರಗಿ ಶ್ರೀಹೀನನಂತೆ ನಿಂತಿದ್ದಾನೆ. ಅಬ್ಬಾ, ಮನೆತನಕ.....ಮಾರ್ಟಿನ್ !

ಮುಖದಲ್ಲಿ ಮುಗುಳ್ನಗು ಸೂಸಿ ನಾಲ್ಕು ಹೆಜ್ಜೆ ಮುಂದುವರಿದ. ಮೇಲಂಗಿಯ ಕಿಸೆಯಂಚಿನಲ್ಲಿ ಕಾಗದವೊಂದು ಹಣಿಕಿ ನೋಡುತಿತ್ತು. ಕೊಡವನ್ನು ಜರಿದು ಓಡಿ ಹೋಗೋಣವೆ ಎಂಬಷ್ಟು ಭಯ ಮನಸ್ಸಿಗೆ. ಆದರೆ, ಅಷ್ಟರೊಳಗಾಗಿ ಮಾರ್ಟಿನ್ ಸನಿಹಕ್ಕೆ ಬಂದಾಗಿತ್ತು. ಹಸನಾದ ನಗೆ ಬೀರಿ ಅವನೆಂದ,

"ದಯಮಾಡಿ ಒಂದು ನಿಮಿಷ....ಲೈಲಾ !"

"ಏನು ಹೇಳು ?"

"ನನ್ನೊಡನೆ.....ಐದು ನಿಮಿಷ...."

"ಉಹೂ....ಉಹೂ...."

ಒಂದೆರಡು ಕ್ಷಣ ಗಂಭೀರವಾಗಿ ಉರುಳಿದುವು.

"ಲೈಲಾ !"

"........."

"ಹೋಗಲಿ, ಈ ಕಾಗದವನ್ನು ಓದಿ ನೋಡುವಷ್ಟಾದರೂ ತಾಳ್ಮೆ ತೆಗೆದುಕೊ."

"ಕೊಡು ಬೇಗನೆ."

"ಅದೇಕೆ ಅಷ್ಟೊಂದು ಆತುರ ಲೈಲಾ?"

"........"

"ನಿನಗೆ ಬೇಗನೆ ನನ್ನನ್ನು ನಿವಾರಿಸುವ ಯೋಚನೆಯೆ ?"

"ಯಾರಾದರೂ ನೋಡಿದರೆ ತಪ್ಪು ತಿಳಿದುಕೊಳ್ಳುತ್ತಾರೆ."

"ಲೈಲಾ........ನಿನಗೆ ಅಷ್ಟು ಹೆದರಿಕೆಯೆ ?" ಮುಗುಳುನಗೆ ಬೀರಿದ ಮಾರ್ಟಿನ್.

"ದಯವಿಟ್ಟು ನೀನು ಹೊರಟು ಹೋಗು."

"ನಾನು ಹೋಗಲೇಬೇಕೆ ?"

"ಹೌದು. ಅಷ್ಟು ಉಪಕಾರ ಮಾಡು."

ಮಾರ್ಟಿನ್ ಕಿಸೆಯಿಂದ ಕಾಗದವನ್ನು ತೆಗೆದು ಅವಳ ಕಡೆಗೆ ನೀಡಿ "ನಾನು ಹೋಗಲೇ ?"

"ಹೋಗು !"

"ಹೋಗಲೇ ಬೇಕೇ ? ಹೇಳು ಲೈಲಾ....."

"ಹೌದು.....ಖಂಡಿತ ಹೋಗು...."

"ಇಲ್ಲಿಂದ ಮಾತ್ರವಲ್ಲ, ಈ ಲೋಕದಿಂದಲೂ ಹೋಗಲೇ ?"

"........"

"ಹೇಳು ಲೈಲಾ."

ಪ್ರಶ್ನೆ....ಅನುಚಿತ."

"ಬರೀ ಹಾಗೆಂದರೇನು ಫಲ ? ಮಾನೀವಿಯತೆಯಿಂದ ನೋಡು."

"ಸುಮ್ಮನೆ ನನ್ನನ್ನು ಕಾಡಬೇಡ. ಈಗಲೇ ಹೊರಟು ಹೋಗು."

ಆ ಧ್ವನಿ ಕಾದ ರಸದಂತೆ ಕಿವಿಯನ್ನು ತಾಗಿತು. ತೀವ್ರ ಮಾನಸ ಸಂತಾಪದಿಂದ ತೀಕ್ಷ್ಣವಾದ ಭಾವಜ್ವಾಲೆಯಲ್ಲಿ ಸಿಲುಕಿ ನೆತ್ತರು ಹೆಪ್ಪುಗಟ್ಟಿದಂತೆ ಕಪ್ಪು ತಳೆದು ಘನವೆತ್ತ ಕಾದಂಬಿನಿಯಂತಾದ ಮಾರ್ಟಿನ್. ಸಿಡಿದೊಡೆಯಲಿರುವ ಢಾಕಿಯಂತಿತ್ತು ಮೈ. ಏನೋ ಹೇಳಲು ತೊದಲಿ ಸಾಧ್ಯವಾಗದೆ ಅಲ್ಲಿಂದ ಹೊರಟ. ದಿಗ್ಮೂಢಳಂತೆ ಅತ್ತಲೇ ನಿಟ್ಟಿಸಿದಳು ಲೈಲಾ. ರಜತ ಸಲಾಕೆಯಂತಿದ್ದ ದೇಹಲತೆ ಭಾವಾನುಭಾವಗಳ ಘಾತವ್ಯಘಾತಗಳಿಂದ ಆಕಾಶ ಗಂಗೆಯ ಆವರ್ತನಕ್ಕೆ ಸಿಕ್ಕಿದ ಶತಾವರೀ ಲತೆಯಂತೆ ಚಂಚಲವಾಯಿತು. ಭಯಗ್ರಸ್ತ ನೋಟ ಒಮ್ಮೆ ಸುತ್ತಲೂ ಹೊರಳಿತು. ದೈವವಶಾತ್ ಯಾರೂ ದಿಟ್ಟಿಗೆ ಬೀಳಲಿಲ್ಲ. "ಸಾಕಪ್ಪಾ, ಯಾರಾದರೂ, ನೋಡಿದ್ದರೆ...." ಎಂದುಕೊಂಡಾಗ ಇದುವರೆವಿಗೆ ಹಿಡಿದಿಟ್ಟಿದ್ದ ಉಸಿರೆಲ್ಲಾ ಒಮ್ಮೆಲೇ ಹೊರ ನುಗ್ಗಿ ಬಂತು. ಭಾವೋದ್ವೇಗದಲ್ಲಿ ಮೂರ್ತಿಮತೀ ಜಡ ಶೋಭೆಯಂತೆ ಅಲುಗದೆ ನಿಂತಿದ್ದು, ಅನಂತರ ಎಚ್ಚೆತ್ತು, ಕಂಪಿತ ಕರ ಪಲ್ಲವಗಳಿಂದ ಪತ್ರವನ್ನು ಬಿಚ್ಚಿ ಓದಿಕೊಂಡರೆ ಅನುದಿನವೂ ಹರಿದ ವಿಚಾರ ಧಾರೆಯೇ ಇಂದೂ ಹರಿದಿದೆ. ಒಲ್ಲದ ವಿಷಯಗಳನ್ನು ಹೀರುವಾಗ ಮನಸ್ಸು ಸಿಡಿದೆದ್ದಿತು. ಮುಖಬಿಂಬ ಲಜ್ಜೆ–ಕೋಪ–ತಾಪಗಳ ರಂಗೇರಿದು

ಹೊಂದಾವರೆಯಾಯಿತು. ಒಂದು ಘಳಿಗೆ ಮರವಟ್ಟಂತೆ ನಿಂತಳು. ಸಮಾಜ ಶಾಸ್ತ್ರದ ಪ್ರೊಫೆಸರ ವಿಚಾರ ಸರಣಿ ಮೆಲ್ಲನೆ ಅಲೆಯಲೆಯಾಗಿ ಬಗೆಯಲ್ಲಿ ತೇಲಿಬಂತು.

ಯೌವ್ವನವೆಂಬುದು ಇಲ್ಲವೆಂದಲ್ಲ. ಆ ತೀಕ್ಷ್ಣತೆಗೆ ಮನಸ್ಸು ಬಳಲುತ್ತದೆ ಬುದ್ಧಿಯೂ ಚಂಚಲವಾಗುತ್ತದೆ. ಮುಸುರೆ ತೊಳೆಯುತ್ತ, ಸುವಾರ್ತೆಗಳನ್ನು ಓದುತ್ತ, ಕಾಲಹರಣ ಮಾಡುವ ಗೊಡ್ಡುತನವೂ ಇಲ್ಲ. ಹಿತಾಹಿತಗಳನ್ನು ಕುರಿತು ಯೋಚಿಸಬಲ್ಲ ಆಲೋಚನಾಶೀಲೆ. ಅಂತಲೇ ಅವಳಿಗೆ ಜೀವನವನ್ನು ಕಂಡರೆ ಭಯ.... ಈಗಲೇ ಆತುರ ಬೇಡ ಎಂಬಷ್ಟು ವಿವೇಚನೆ ...ಯುಕ್ತಾಯುಕ್ತತೆಗಳನ್ನು ವಿಮರ್ಶಿಸುವಷ್ಟು ಜ್ಞಾನಧಾರೆ.....

ಅಂದು ಸಮಾಜ ಶಾಸ್ತ್ರದ ಪ್ರೊಫೆಸರ್ ತಮ್ಮ ಉಚ್ಚ ಕಂಠವನ್ನು ಶಂಖ ಧ್ವನಿಯಂತೆ ಹರಿಹಾಯಿಸಿದುದು ಮನದಲೆಯಲ್ಲಿ ತೇಲಿ ಬಂತು.

"ನಿಮ್ಮ ಹರಿತವಾದ ಮನಸ್ಸಿನ ಗೊತ್ತು ಗುರಿಯಿಲ್ಲದ ಕಾಮನೆಗಳಿಗೆ ಅಡೆತಡೆಗಳಿಲ್ಲದಿದ್ದರೆ ಪ್ರತಿಘಳಿಗೆಯಲ್ಲೂ ಗಂಡವನ್ನೆದುರಿಸಬೇಕಾಗುತ್ತದೆಂಬುದನ್ನು ನೀವು ಗ್ರಹಿಸಲಾರಿರಾ !"

ಒಂದಲ್ಲ, ಹತ್ತಲ್ಲ, ಹಲವು ಬಾರಿ ಅದೇ ನುಡಿ ಕಿವಿಯಲ್ಲಿ ಮತ್ತೆ ಮತ್ತೆ ಮಾರ್ನುಡಿಯಿತು. ಒಡನೆ ದೇಹದಾದ್ಯಂತ ಚಿಲ್ಲನೆ ಕಂಪನದ ಅಲೆ ಹರಿದಾಡಿ ಹೋಯಿತು. ಲೈಲಾ ಕಾಗದವನ್ನು ಸಣ್ಣ ಸಣ್ಣ ಚೂರುಗಳಾಗಿ ಹರಿದು ಕಸದ ತೊಟ್ಟಿಗೆ ಚೆಲ್ಲಿಕೊಟ್ಟಳು. ಹಾಗೆ ಚೆಲ್ಲಿಕೊಟ್ಟಾಗ ಯಾವುದೋ ತೀಕ್ಷ್ಣತೆಯ ಸೆಳೆತಕ್ಕೆ ಸಿಕ್ಕಿ ಕತ್ತಿಯಲುಗಿನಮೇಲೆ ಹರಿದಾಡಿದಂತೆ ಅಂತಃಕರಣ ಚಡಪಡಿಸಿತು. ತಾತ್ವಿಕವಾಗಿ ಧಾರ್ಮಿಕವಾಗಿ ನಾನಾ ರೀತಿಯಾಗಿ ತರ್ಕಿಸಿತು ಬುದ್ಧಿ, ಆದರೂ, ಅದು ಅಂತಿಮ ನಿರ್ಧಾರ. .....ಇನ್ನೆಂದಿಗೂ ಅಚಲ.....ಅಚಂಚಲ.....

ಮನೆಯುವರಾರೂ ಇಲ್ಲದ ಸಮಯದಲ್ಲಿ ಅವನಿಗಾಗಿ ನಾಲ್ಕಾರು ಪಂಕ್ತಿಯನ್ನು ಬರೆದು ತನ್ನ ದೃಢ ನಿರ್ಧಾರವನ್ನು ತಿಳಿಸುವ ಸಾಹಸಕ್ಕೆ ಕೈ ಹಾಕಿದಳು ಲೈಲಾ.

....ನಿಜಕ್ಕೂ ಹೇಳುವುದಾದರೆ ಏನಾದರೂ ಬರೆಯಬೇಕೆಂದರೆ ಮನಸ್ಸೇ ಆಗುವುದಿಲ್ಲ. ಆದರೂ, ಪ್ರಯತ್ನ ಪೂರ್ವಕವಾಗಿ ಬರೆಯುತ್ತಿರುವೆ. ನೀನಿನ್ನೂ ನಿನ್ನೆ ಮೊನ್ನೆಯ ಕೂಸು. ನಿನ್ನಿಂದ ವಿಚಾರಮಂಥ

ಸವಾಗಲೀ ಜೀವನಧರ್ಮವನ್ನಾಗಲೀ ಕುರಿತು ಯೋಚಿಸಲು ಚಿಂತಿಸಲು ತರ್ಕಿಸಲು ಇಂದಿನ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲ. ನಿನ್ನ ಓದು ಪೂರೈಸಿ ಸಾತ್ವಿಕತೆ ಬೆಳೆದು ಸ್ವಾರ್ಥದ ಮಹಾ ಕಡಲಿನ ಪರಮಾವಧಿಯನ್ನು ದಾಂಟಿ ಉತ್ತಮೋತ್ತಮ ಜೀವನ ಪಟು ಆಗುವತನಕ ಯಾವ ಹೆಣ್ಣಿನ ಬೇಂಟಿಯೂ ನಿನಗೆ ಸಲ್ಲ.

ಈಗ ಸದ್ಯಕ್ಕೆ, ನಿನ್ನ ಕೋರ್ಸ್ ಮುಗಿಸಿಕೊಂಡು ನಿನ್ನ ಹಿರಿಯರಿಗೆ ಮೆಚ್ಚಿನ ಮಗನಾಗಿ, ಗೆಳೆಯರಿಗೆ ಉತ್ತಮ ಸಂಘವಾಗಿ, ಗುರುಗಳಿಗೆ ಉತ್ತಮ ವಿದ್ಯಾರ್ಥಿಯಾಗಿ, ಕಾಲೇಜಿಗೆ ಕೀರ್ತಿ ಶಿಖರವಾಗಿ ಬಾಳು ಗೆಳೆಯಾ! ಬದುಕಿನ ಘನೋದ್ದೇಶವನ್ನು ಅರಿತವಗೆ ಪ್ರಾಂಜಲೀಬದ್ಧನಾಗಿ ಬಿಕ್ಕೆ ಬೇಡುವ ಅಗತ್ಯ ಎಂದೂ ಬಾರದು ಎಂಬುದನ್ನು ಇನ್ನಾದರೂ ಮನಗಾಣು. ನೀನು ನಿಜವಾಗಿಯೂ ಕೀರ್ತಿ ಶಿಖರವನ್ನು ಏರಿದೆಯಾದರೆ ಭವ್ಯ ಭವಿತವ್ಯವನ್ನು ಕಂಡು ಕೊಂಡೆಯಾದರೆ ಆತ್ಮಶಕ್ತಿ ಪುಟಿಪುಟಿದೇಳುತ್ತದೆ. ಅಂತಲೇ ಜಾಣನಾಗಿ ದುಡಿ; ಧೀರನಾಗಿ ದುಡಿ ನವಜೀವನಕ್ಕೆ ಜ್ಞಾನಸಿದ್ಧಿ ಮತ್ತು ನಾಗರಿಕತೆಗಳು ಪರಸ್ಪರ ಪೂರಕ. ನವ್ಯಜೀವನ ಪ್ರಕಾಶವು ಆತ್ಮೋನ್ನತಿಗೆ ಪರಮಗಂತವ್ಯ....

ವಿಳಾಸವನ್ನು ಬರೆಯುವಾಗ ಮನಸ್ಸು ಅಳುಕಿತು. ಲೇಖನಿ ವಿಕಂಪಿಸಿತು. ಯಾವುದೋ ಕಾಣದ ಕೈ ಹೃದಯವನ್ನು ಮೆಲ್ಲಮೆಲ್ಲನೆ ಹಿಸುಕಿದಂತೆ ಭಾಸವಾಯಿತು.

ಹಾ....!

- ಚಿತ್ರವಿಚಿತ್ರ ಅನುಕಂಪ....

ಅನುಭವ ಪಕ್ವವಾದರೆ ಕಾಲ ಕೂಡುತ್ತದೆ. ಕಾಲ ಕೂಡಿದರೆ ಜೀವನ ಹೆಬ್ಬಾಗಿಲು ತೆರೆಯುತ್ತದೆ. ಮತ್ತೇಕೆ ಅನುಕಂಪ....? ಹುಟ್ಟಿಸಿದವ ಹುಲ್ಲು ಮೇಯಿಸುತ್ತಾನೆ.

ಆದರೆ....ಆದರೆ....ಈ ಜೀವನ ಆದರೆ ಮಯ....

ಮೂರು ದಿನಗಳನಂತರ ಬಂದ ಸುದ್ದಿ.....ಮಾರ್ಟಿನ್ನನ ಪವಿತ್ರಾತ್ಮ ಅಲ್ಲದ ಸಲ್ಲದ ನೂರಾರು ಅಡೆತಡೆಗಳನ್ನು ಕಿತ್ತೊಗೆದು ಲೋಕಾಂತರವನ್ನೈದಿತ್ತು!

ಓ....ಪುಣ್ಯಾತ್ಮ! ಪವಿತ್ರಾತ್ಮ....!

— o —

# ಹೈಡ್ ಪಾರ್ಕ್

ಗಗನಾಂಗಣ ಶುಭ್ರ ನೀಲ ಮಹಾ ಸಾಗರದಂತೆ ಜ್ವಲಿಸುತಿತ್ತು.

ಸಂಜೆಯ ಸೊಂಪು ಚಂದನರಾಗವನ್ನು ಬೆಳ್ಮುಗಿಲುಗಳಿಗೆ ಬಳಿಯುತ್ತಿದೆ.

ಹರೀಶ ಭಾವೋದ್ವೇಗದಿಂದ ಆನಂದ ತುಂದಿಲನಾಗಿ ವಂದಿಸಿದ ಭೂಜನನೀ....ತವ ಶರಣು....ಶರಣು.....ಶರಣು.

ಮನೋವೇಗದಿಂದ ಒಂದಲ್ಲ, ಹತ್ತಲ್ಲ, ನೂರಲ್ಲ, ಸಹಸ್ರ ಬಾರಿ ವಂದಿಸಿಯಾಗಿತ್ತು. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿದ್ದಂತೆ ಹರೀಶ ನಿಮೀಲಿತ ನಯನನಾಗಿ ಪುನಃ ವಂದಿಸಿದ. ಭೂ ಜನನೀ.....ತವ ಶರಣು.....ಶರಣು....

ವಿಮಾನ ಭೀಮವೇಗದಿಂದ ಮುಗಿಲ ಮಾಲೆಯಲ್ಲಿ ತೂರಿ ನಭೋಮಂಡಲದಿಂದ ಭೂವಲಯಕ್ಕೆ ಇಳಿದಾಗ ಹೃದಯ ಮೃದಂಗ ಹತ್ತೋಟಿ ಮೀರಿ ಮಿಡಿಯಿತು. ದಡ. ದಡ. ದಡ. ಮರುಕ್ಷಣ ಸುರಕ್ಷಿತವಾಗಿ ಭೂಸ್ಪರ್ಶ ಮಾಡಿದೊಡನೆ ಎದೆಯ ಭಾರವಿಳಿದು ಶಾಂತಿ ಸಮಾಧಾನಗಳ ವಿಜಯಧಾರೆ ಹರಿದಾಡಿತು. ಪ್ರಥಮ ವಿಮಾನಯಾನ ಕೈಕೊಂಡಿದ್ದ ಹರೀಶನ ಮನವನ್ನಾವರಿಸಿದ ಭಯ ಭೀತಿಯ ಭೂತ ಒಮ್ಮೆಲೇ ಪಲಾಯನ ಬೆಳೆಸಿ ಹರ್ಷೋನ್ಮತ್ತನಾದ. ಸಹಪಯಣಿಗರೊಂದಿಗೆ ಇಳಿಯುವಾಗ ಸಂತಸವೇ ಮೈವೆತ್ತು ಬಂದಂತೆ ಮುಖ ಅರಳಿ ಹೂವಾಯಿತು. ಹೊಸ ವಾತಾವರಣ, ಹೊಸ ಜನ, ಹೊಸ ನಾಡು ಮನಃಪ್ರಾಣಗಳಿಗೆ ಹೊಸ ಹುರುಪನ್ನು ನೀಡಿದುವು. ಹರೀಶ ಪುಳಕಿತನಾದ.

ಜನ ಭರಿತವಾದ ನಿಲ್ದಾಣದಲ್ಲಿ ಎಲ್ಲಿಂದ ಎಲ್ಲಿಯವರೆಗೂ ಕೆಂಪು ಮುಖದ ಮಂದಿ, ತುಂಡು ಲಂಗದ ಅಂಗನೆಯರು, ಕೆಂಗೂದಲಿನ ಮುದ್ದು ಮಕ್ಕಳು ಕಣ್ಣಿಗೆ ಬೀಳುತಿದ್ದರು....ನೋಟದ ಕಕ್ಷೆಯವರೆಗೆ ಎಷ್ಟು ನೋಡಿದರೂ ಮನ ತಣಿಯದಂತಹ ದೃಶ್ಯಮಾನ ಸೌಂದರ್ಯ ಹೆಪ್ಪುಗಟ್ಟಿದಂತಿತ್ತು.

ಪ್ರೊಫೆಸರು ಹೀಥ್ರೂ ವಿಮಾನ ನಿಲ್ದಾಣಕ್ಕೆ ಒಬ್ಬ ವಿದ್ಯಾರ್ಥಿಯನ್ನು ಕಳುಹಿಸುವುದಾಗಿ ಬರೆದಿದ್ದರು. ಇಷ್ಟೊಂದು ಮಂದಿಯಲ್ಲಿ ಆ ಗುರುತು ಕಾಣದ ವಿದ್ಯಾರ್ಥಿಯನ್ನು ಕಂಡುಹಿಡಿಯುವುದು ಸಹ ಕಷ್ಟವೇ. ಎಲ್ಲಿ ಯಾವ ಕಣ್ಣುಗಳು ತನಗಾಗಿ ತಡುಕುತ್ತಿವೆ ಎಂಬ ಕುತೂಹಲಪೂರ್ಣ ದೃಷ್ಟಿಗೆ ಕಮನೀಯ ಕಾತರತೆ ಎಲ್ಲೂ ಕಾಣಿಸಲಿಲ್ಲ. ತನ್ನ ರೀತಿಯನ್ನು ನೋಡಿದರೆ ಯಾರಾದರೂ 'ಬೆಪ್ಪ' ಎಂದುಕೊಂಡಾರು ಎಂಬ ಅಂಜಿಕೆ ಬೇರೆ. ಸೂಟ್‌ಕೇಸ್ ವಿಮಾನ ಸಿಬ್ಬಂದಿಯವರಿಂದ ಬಿಡುಗಡೆ ಹೊಂದು ವುದರೊಳಗಾಗಿ ವಿಮಾನ ನಿಲ್ದಾಣವನ್ನು ಒಂದು ಸುತ್ತು ಹಾಕಿ ಅಪರಿಚಿತ ಸ್ಥಳದ ಪರಿಚಯ ಮಾಡಿಕೊಂಡ. ಮೊದಲ ಹಂತದಲ್ಲಿ ಹೊಸ ನಾಡಿನ ಅಲ್ಪ ಪರಿಚಯವಾದಂತಾಯಿತು. ಪೆಟ್ಟಿಗೆಯನ್ನು ತೆಗೆದುಕೊಂಡು ಟ್ಯಾಕ್ಸಿ ನಿಲ್ದಾಣಕ್ಕಭಿಮುಖವಾಗಿ ಹೊರಡುವಷ್ಟರಲ್ಲಿ ಕೃಷ್ಣ ಪಕ್ಷದ ಕಾಳ ಗಪ್ಪನ್ನು ಪ್ರತಿಬಿಂಬಿಸುವಂತೆ ಕರಾಳರೂಪಿಯೂ ದೈತ್ಯ ಶರೀರಿಯೂ ಆದ ನೀಗ್ರೋ ತರುಣನೊಬ್ಬ ಸನಿಹಕ್ಕೈತಂದ.

"ನೀನು ಮೈಸೂರು ಯೂನಿವರ್ಸಿಟಿಯ ವಿದ್ಯಾರ್ಥಿ ಹರೀಶನೆ ?"

"ಹೌದು.....ನೀನು ?"

"ನಾನು ಲಂಡನ್ ಯೂನಿವರ್ಸಿಟಿಯ ವಿದ್ಯಾರ್ಥಿ. ನಿನಗಾಗಿ ಕಳುಹಿ ಸಿದ್ದಾರೆ ನಮ್ಮ ಪ್ರೊಫೆಸರ್."

"ಓ....! ನಿನ್ನನ್ನು ನೋಡಿ ಬಹಳ ಸಂತೋಷವಾಯಿತು.....ತುಂಬ ಥ್ಯಾಂಕ್ಸ್!"

ಆತನನ್ನು ನೋಡಿದ ಪ್ರಥಮ ನೋಟಕ್ಕೆ ಭಯಚಕಿತ ಅಣುಗನಂತಾ ದರೂ ಹಾರ್ದಿಕವಾಗಿ ಗಂಭೀರಭಾವದಿಂದ ಕೈ ಕುಲುಕಿದ. ತುಟಿಗಳಲ್ಲಿ ಎಳೆ ನಗು ನಲಿಯಿತು. ಹೊಸ ವ್ಯಕ್ತಿಯ ಹಾವಭಾವಗಳನ್ನು ಗಮನಿ ಸುತ್ತ ನಾಲ್ಕಾರು ಗಂಟೆಗಳನ್ನು ಒಂದೇಬಾರಿಗೆ ಬಾರಿಸಿದಂತೆ ಹಿರಿಯ ದನಿ ಯಲ್ಲಿ "ತುಂಬ ಸಂತೋಷ." ಎಂದ ನೀಗ್ರೋ ತರುಣ, ಹಸನ್ಮುಖಿಯಾಗಿ

"ನಿನ್ನ ಹೆಸರೇನು ?"

"ಕೊಸಾಂಬಿ."

ಇಬ್ಬರ ಮುಖದಲ್ಲೂ ಸ್ನೇಹಮೇದುರ ಮಧುರ ಹಾಸ ನಲಿದಾಡಿತು.

ಕೊಸಾಂಬಿ ಬಲು ದಿನಗಳ ಗೆಳೆಯನಂತೆ ಪೆಟ್ಟಿಗೆಗೆ ಕೈ ಹಾಕಿದ. ಹರೀಶ ತಾನೇ ಕೊಂಡೊಯ್ಯುವುದಾಗಿ ಹೇಳಿಕೊಂಡರೂ ಬಿಡದೆ ತೆಗೆದು ಕೊಂಡ.

"ನೀನೇಕೆ ಹೊರುವ ಶ್ರಮ ತೆಗೆದುಕೊಳ್ಳುತ್ತಿ ?"

"ಇದೊಂದು ಶ್ರಮವೇ ?"

"ಅಲ್ಲವೇ ?"

"ನೀನು ಪಯಣದಿಂದ ದಣಿದಿದ್ದಿ. ಸ್ವಲ್ಪ ಸುದಾರಿಸಿಕೊ. ಅನಂತರ.....ಇದ್ದೇ ಇದೆ."

"ಬಹಳ ಥ್ಯಾಂಕ್ಸ್! ಆದರೂ...."

ಕೊಸಾಂಬಿ ನಡುವೆ ಬಾಯಿ ಹಾಕಿದ "ಅಷ್ಟೇಕೆ ಯೋಚನೆ ? ನಾನು ನಿನ್ನಂತೆ ಡೆಲಿಕೇಟ್ ಡಾರ್ಲಿಂಗ್ ಅಲ್ಲ!"

"ನಾನೇನು ಬಹಳ ಡೆಲಿಕೇಟ್ ?"

"ಕನ್ನಡಿ ಮುಂದೆ ನಿಂತು ನೋಡು !"

ಹರೀಶ ಮುಗುಳು ನಕ್ಕ.

ಶುದ್ಧ ಇಂಗ್ಲೀಷಿನಲ್ಲಿ ಅವನು ಮಾತಾಡುವ ವಿಧಾನ....ಪದ ಪುಂಜ ಗಳ ಸಲಿಲಧಾರೆ ಮೆಚ್ಚಿಕೊಳ್ಳುವಂತಿತ್ತು. ಕಾಳಮೇಘದಲ್ಲಿ ಸೆಳೆ ಮಿಂಚು ಸುಳಿದು ಹೋದಂತೆ ಹಾಸ ವಿಲಾಸವನ್ನು ಹರಿಸಿ ಕೊಸಾಂಬಿಯೆಂದ "ನಾನು ಇಲ್ಲಿಗೆ ಬರುವುದು ಐದು ನಿಮಿಷ ತಡವಾಯಿತು. ಅದರಿಂದ ನಿನಗೆ ಸ್ವಲ್ಪ ತೊಂದರೆಯಾಗಿರಬಹುದು."

"ಇಲ್ಲ.....ಪ್ರೊಫೆಸರು ಬರೆದಿದ್ದುದರಿಂದ ಸ್ವಲ್ಪ ಹುಡುಕಾಡಿದೆ ಅಷ್ಟೆ."

"ನಾನು ಖಂಡಿತವಾಗಿಯೂ ಹೇಳುವೆ! ನೀನು ಬಹಳ ಮಟ್ಟಿಗೆ ಕೆಂಪು ಮೂತಿಗಳನ್ನೇ ಹುಡುಕಿದ್ದಿ !"

"ಹಾಗೇನಿಲ್ಲ."

"ನೀನು ನಿಜವಾಗಿಯೂ ಹೇಳು.....?" ಸವಾಲು ಹಾಕಿದ.

ಹರೀಶ ನಕ್ಕು ಬಿಟ್ಟ.

ಕೊಸಾಂಬಿ ಹತ್ತು ಗಂಟೆಗಳನ್ನು ಒಮ್ಮೆಲೇ ಬಾರಿಸಿದಂತೆ ನಕ್ಕ. ಧ್ವನಿ ಹಿರಿಯ ಮಾಡಿನಲ್ಲಿ ಪ್ರತಿಧ್ವನಿತವಾಯಿತು. ಹರೀಶ ಆಶ್ಚರ್ಯ

ತೃಷಿತಲೋಚನಗಳಿಂದ ಅವನನ್ನು ನಿಟ್ಟಿಸಿದ. ಜಗತ್ತಿನ ಚಿತ್ರವಿಚಿತ್ರ ವನ್ನು ಗಮನಿಸುತ್ತ ಆ ಜನ ಸಮುದಾಯವನ್ನು ದಾಟಿ, ಮುಂದಿನ ಪ್ರಾಂಗಣವನ್ನು ಕಳೆದು ಕಾರುಗಳ ನೆಲೆಗೆ ಬಂದಾಗ ಅಸಂಖ್ಯಾತ ವಾಹನ ಗಳು ಸಮುದ್ರದೋಪಾದಿಯಲ್ಲಿ ನಿಂತಿದ್ದುದು ಗೋಚರಿಸಿತು. ಮುಂದಿನ ಸಾಲಿನಲ್ಲಿ ನಿಂತಿದ್ದ ಬಿಳಿಯರ ಟ್ಯಾಕ್ಸಿಗಳನ್ನು ಹಿಡಿಯದೆ ಆ ಬದಿಯಲ್ಲಿ ನಿಂತ ವರ್ಣೀಯರ ಟ್ಯಾಕ್ಸಿಯಲ್ಲಿ ಸೂಟ್ ಕೇಸನ್ನು ಇಟ್ಟು ಕೊಸಾಂಬಿ ನುಡಿದ,

"ಐದು ನಿಮಿಷ ಮುಂದಾಗಿಯೇ ಇಲ್ಲಿಗೆ ಬರಬೇಕೆಂದಿದ್ದೆ. ಆದರೆ, ಅಗ ಲಿಲ್ಲ....ಈ ಕೆಟ್ಟ ಊರಿನಲ್ಲಿ ನಾವು ಸಮಯವನ್ನು ಹೊಂದಿಸಿಕೊಳ್ಳುವುದು ಕಷ್ಟ."

ಅವನೇಕೆ ಹಾಗೆಂದನೆಂಬುದು ಹರೀಶನಿಗೆ ಅರ್ಥವಾಗಲಿಲ್ಲ. ಒಂದು ಕ್ಷಣ ಯೋಚಿಸಿ–"ಪರವಾಯಿಲ್ಲ. ನೀನು ಇಷ್ಟು ಉಪಕಾರ ಮಾಡಿದ್ದಕ್ಕಾಗಿ ಥ್ಯಾಂಕ್ಸ್ ಹೇಳಬೇಕಾದುದು ನನ್ನ ಕರ್ತವ್ಯ."

"ಇದೇನಪ್ಪಾ ? ಬಾರಿ ಬಾರಿಗೂ ಥ್ಯಾಂಕ್ಸ್ ಹೇಳುತಿದ್ದಿ.....? ಇವು ಕಾಲಾನುಕಾಲಕ್ಕೂ ಇರುವಂತಾದ್ದೋ ? ಅಥವಾ ಮೂರು ದಿನಕ್ಕೆ ಓಡು ವಂತಾದ್ದೋ ?"

"ಹಾಗೇನಿಲ್ಲಪ್ಪಾ, ಬೇಕಾದರೆ ಕಾದು ನೋಡು."

ನಿಮಿಷಕಾಲ ಶುಭ್ರ ಆರ್ದ್ರಹಾಸದ ಮಿಂಚಿನ ರೇಖೆಯೊಂದು ಆತನ ರೂಕ್ಷ ಅಧರಗಳ ಮೇಲೆ ಮಿಂಚಿನಂತೆ ಮಿಂಚಿತು. ಹರೀಶ ಕೊರಳೆತ್ತಿ ನೋಡಿದ. ಕಾಳಿಕೆಯನ್ನು ಅಣಕಿಸುವ ಆ ಉದ್ದಂಡ ದೇಹ ಪುರಾಣ ಕಾಲದ ದಿತಿಯ ಪುತ್ರರನ್ನು ನೆನಪಿಗೆ ತಂದಿತು.

ಟ್ಯಾಕ್ಸಿಯ ಕದವನ್ನು ತೆರೆದು ಹಿಡಿದು ನಿಂತು "ಇನ್ನು ಕೂಡಪ್ಪಾ!" ಎಂದಾಗಲೇ ಇತ್ತ ಗಮನ. ಹರೀಶ ಹತ್ತಿ ಕುಳಿತ. ಕೊಸಾಂಬಿ ಮಗ್ಗುಲಲ್ಲಿ ಕುಳಿತು ಕದವನ್ನು ಎಳೆದುಕೊಂಡ. ಟ್ಯಾಕ್ಸಿ ಹೊರಟಿತು. ಬಿಳಿಯರ ಟ್ಯಾಕ್ಸಿಯನ್ನು ಬೇಕಾಗಿಯೇ ಅವನು ಹಿಡಿಯಲಿಲ್ಲವೆಂಬುದನ್ನು ಮನದಲ್ಲೇ ಗ್ರಹಿಸಿದರೂ ಆತನ ರೀತಿ ನೀತಿಗಳು ಅರ್ಥವಾಗುವುದು ಕಷ್ಟ. ಪ್ರಾಯಶಃ ವರ್ಣಭೇದ ನೀತಿಯಲ್ಲಿ ಆತ ನೊಂದಿರಬಹುದು ಎಂದುಕೊಂಡ. ಇಕ್ಕೆಲ

ಗಳಲ್ಲಿನ ಸಾಲು ಮನೆಗಳ ವೈಶಿಷ್ಟ್ಯವನ್ನು ಅತ್ಯಂತಿಕ ಆಸಕ್ತಿಯಿಂದ ಗಮನಿಸುತ್ತಾ ಹರೀಶ್ ಕೇಳಿದ "ನಾವೀಗ ಹೋಗುವುದೆಲ್ಲಿಗೆ ?"

"ಯೂನಿವರ್ಸಿಟಿ ಹಾಸ್ಟಲ್ ; ನನ್ನ ಕೊಠಡಿಯಲ್ಲೇ ನಿನಗೂ ಸ್ಥಾನ !"

"ಓ....ಹೋ ?"

"ನನ್ನ ಜೊತೆ ಇರುವುದು ನಿನಗೆ ಕಿನಿಸಿಗೆಯೇ ?"

"ಇಲ್ಲಪ್ಪಾ," ಹರೀಶ್ ಮುಗುಳು ನಕ್ಕ.

"ಭಾರತದಲ್ಲೂ ವರ್ಣನೀತಿಗೆ ಪ್ರಾಧಾನ್ಯತೆ ಇದೆ ಎಂಬುದನ್ನು ಕೇಳಿ ಬಲ್ಲೆ."

"ಅದು ಒಂದಾನೊಂದು ಕಾಲದ ಮಾತು."

"ಈಗ.....?"

"ಎಲ್ಲೋ ಅಲ್ಪ ಸ್ವಲ್ಪ."

ಹಿರಿಯ ಕಟ್ಟಡಗಳನ್ನು ಹಿಂದೆ ಬಿಟ್ಟು, ಜನ ಜಲಧಿಯನ್ನು ದಾಟಿ, ರಾಜಮಾರ್ಗವನ್ನು ಹೊಕ್ಕು ಉನ್ಮತ್ತವೇಗದಿಂದ ಓಡಿತು ಟ್ಯಾಕ್ಸಿ. ಹರ ದಾರಿ ಕಳೆದ ನಂತರ ವಾಮಮಾರ್ಗ ಹಿಡಿದು ಯೂನಿವರ್ಸಿಟಿಯ ಸನಿಹಕ್ಕೆ ಬಂದೊಡನೆ ವೇಗವನ್ನು ಮಿತಿಗೊಳಿಸಿದ ಡ್ರೈವರ್. ದೊಡ್ಡ ನಾಮಫಲಕ ಹೊತ್ತ ಯೂನಿವರ್ಸಿಟಿಯ ಪ್ರಾಸಾದವನ್ನು ತೋರಿ "ಇದೇ ಲಂಡನ್ ಯೂನಿವರ್ಸಿಟಿ" ಎಂದ ಕೊಸಾಂಬಿ.

ಅವನು ಬೆರಳು ತೋರಿದೆಡೆಗೆ ನಿಡಿಗಣ್ಣ ನೋಟ ಹರಿಯಿತು. ನಾಲ್ಕಾರು ಸಿಟ್ಟಿಗೆ ಮೈ ಚಾಚಿನಿಂತ ಆ ಗಗನಚುಂಬೀ ಮಹಾ ಪ್ರಸಾದವನ್ನು ಔತ್ಸುಕ್ಯ ಭಾವದಿಂದ ಗಮನಿಸಿದ. ಮುಖಮಂಡಲ ಮಧ್ಯಾಹ್ನ ಕಾಲೀನ ಪಲ್ಲವಿತ ಕುಸುಮದಂತೆ ಪ್ರಫುಲ್ಲವಾಯಿತು. ಕೊಸಾಂಬಿ ಅಷ್ಟೇ ನಿರ್ಲಕ್ಷ್ಯದಿಂದ ನುಡಿದ "ನಾಲ್ಕು ವರ್ಷಗಳಿಂದ ಈ ಯೂನಿವರ್ಸಿಟಿಗೆ ಮಣ್ಣು ಹೊತ್ತಾಗಿದೆ, ಆದರೂ, ಏರಿಲ್ಲ ; ಪೇರಿಲ್ಲ. ಅದೇ ರೀತಿ ; ಅದೇ ನೀತಿ !"

ಟ್ಯಾಕ್ಸಿ ಯೂನಿವರ್ಸಿಟಿಯ ಕಟ್ಟಡದ ಪ್ರಾಂಗಣವನ್ನು ಬಳಸಿ ಸುತ್ತಿ ಬಲಬದಿಯಲ್ಲಿದ್ದ ದೊಡ್ಡ ಕಟ್ಟಡದ ಮುಂದೆ ನಿಂತಿತು.

"ಹರೀಶ್ ! ಇದೇ ನಮ್ಮ ಹಾಸ್ಟಲ್ !"

ಹರೀಶ್ ಆ ಮಧುರ ಕ್ಷಣದಲ್ಲಿ ಆನಂದಭೋಗದಿಂದ ಭಾವಾವಿಷ್ಟನಾದ.

* * * *

ಸದಾ ಜಿನುಗುವ ಮಳೆ. ಸುತ್ತಮುತ್ತ ನೀರಿನಿಂದ ಆವೃತವಾದ ದೇಶ ; ಅನುದಿನವೂ ಮಂಜು ಮೋಡಗಳಿಂದ ಕೂಡಿದ ತಣ್ಣನೆಯ ವಾತಾವರಣ. ಹೊರಗಡೆ ತಲೆ ಹಾಕಲು ಸಾಧ್ಯವಾಗದಂತಹ ಶೀತ. ಮೇಲಾಗಿ, ಏನೋ ಒಂದು ಬಗೆಯ ಪರಾಧೀನತೆ. ಏನೋ ಒಂದು ರೀತಿಯಲ್ಲಿ ದುರ್ದಮನೀಯವಾದ ದ್ವಂದ್ವೋನ್ಮುಖಿಯಾದ ಭಾವವಿಭಾವ ತಾನವಿತಾನಗಳ ಅನನ್ಯ....ಅಸಮಾನ್ಯ....ದಿನಚರಿ.

ಹರೀಶ ಕಾಲೇಜಿಗೆ ಸೇರಿ ಪುಸ್ತಕಗಳನ್ನು ಕೊಳ್ಳುವತನಕವೂ ಕೊಸಾಂಬಿಯದೇ ವ್ಯವಹಾರ. ಸಂಜೆಯಲ್ಲಿ ಇಬ್ಬರೂ ಹೊರಗಡೆ ಎಲ್ಲಾದರೂ ತಿರುಗಾಡಿ ಬರುವರು. ಅವನ ಮಾತಿನ ಚಕಮಕಿ ವ್ಯವಹಾರ ನಿಪುಣತೆಗಳನ್ನು ಮನಸ್ಸು ಆನಂದದಿಂದ ಮೆಚ್ಚಿಕೊಂಡಿತು ಅವನ ಸಹವಾಸವನ್ನು ಛಂದೋಬದ್ಧವಾಗಿ ಅಂತರಂಗ ಒಪ್ಪಿಕೊಂಡಿತು.

ತಿಂಗಳಗಾಲಿಗಳು ನಿರಾತಂಕವಾಗಿ ಉರುಳಿದುವು.

ಅಂದು ಬೆಳಿಗ್ಗೆ ಹೊರ ಹೋದ ಕೊಸಾಂಬಿ ಮಧ್ಯಾಹ್ನ ಹಾಸ್ಟೆಲ್ಲಿಗೆ ಹಿಂದಿರುಗಿದಾಗ ಹರೀಶ್ ಬಾಲ್ಕನಿಯಲ್ಲಿ ನಿಂತು ರಸ್ತೆಯಮೇಲೆ ನೋಟವನ್ನು ಚೆಲ್ಲಿಕೊಟ್ಟಿದ್ದ. ಮುಖದ ಮೇಲೆ ಹಸನಾದ ಎಳೆನಗುವನ್ನು ಸೂಸಿ ಕೇಳಿದ ಕೊಸಾಂಬಿ "ಏನಪ್ಪಾ, ನೋಡುತ್ತಿದ್ದಿ ?"

"ಏನಿಲ್ಲ ; ಸುಮ್ಮನೆ....."

"ಸುಮ್ಮನೆ.....?"

"ಹೌದಪ್ಪಾ, ಸುಮ್ಮನೆ. ನೋಡಿದೆ.....ಅಷ್ಟೆ."

"ಬೆಪ್ಪ ! ರಸ್ತೆಯಲ್ಲಿರುವವರನ್ನು ನೋಡಿ ಮನಕ್ಕೆ ಆನಂದ ತುಂಬಿಕೊಳ್ಳುತ್ತಿದ್ದಿ. ಇದಕ್ಕೆನೇನ್ನೋಣ ? ಹಿಹ್ಹಿಹ್ಹೀ !"

ಕೊಸಾಂಬಿ ಜಾಗಟೆ ಬಾರಿಸಿದಂತೆ ಹಿರಿಯ ದನಿಯಲ್ಲಿ ನಕ್ಕ.

ಅವನು ಹಾಗೇಕೆ ನಕ್ಕನೆಂಬುದು ಅರ್ಥವಾಗದೆ ಮೃಗಶಿಶುವಿನಂತೆ ಮಿಕಿ ಮಿಕಿ ನೋಡುತ್ತ ನಿಂತ ಹರೀಶ್.

"ನೋಡಿ ದಣಿಯುವುದಕ್ಕಿಂತ ಅನುಭವಿಸಿ ತಣಿ !"

"ಅಂದರೆ ?"

"ನೋಡುವುದರಲ್ಲಿ ಆಸಕ್ತಿ ! ಮುದ್ದಿಸಲು ಹೆದರಿಕೆ !"

"ಯಾರನ್ನು ಮುದ್ದಿಸುವುದು ?" ಹರೀಶ್ ಕಿಲಕಿಲ ನಕ್ಕ.

"ಯಾರನ್ನು ಮೆಚ್ಚುವೆಯೋ ಅವರನ್ನು !"

"ಇಷ್ಟಕ್ಕೂ ನಾನು ಯಾರನ್ನೂ ಮೆಚ್ಚಲಿಲ್ಲ."

"ಹೇಡಿ !!"

ಹರೀಶನ ಕಣ್ಣುಗಳು ವಿಚಿತ್ರ ಜ್ಯೋತಿಯಿಂದ ಪ್ರದೀಪ್ತವಾದುವು. ಅಧರಗಳಲ್ಲಿ ಸರಳ ಸ್ನಿಗ್ಧಹಾಸ ವಿಕಸನಗೊಂಡಿತು.

"ಹಾಗೆ ನಿಂತು ನೋಡುವುದಕ್ಕಿಂತ ಮನ ಮೆಚ್ಚಿದ ಹುಡುಗಿಯನ್ನು ಮುದ್ದಿಸು !"

"ಯಾರನ್ನಾದರೂ ಮುದ್ದಿಸಹೋದರೆ ಸುಮ್ಮನೆ ಬಿಟ್ಟಾರೆ ?"

"ಹಿಹ್ಹಿಹ್ಹೀ ! ಸೊಪ್ಪು ತಿನ್ನುವ ನೀನು ಇನ್ನೊಂದು ಜನ್ಮಕ್ಕೂ ಕಣ್ತೆರೆಯಲಾರೆ !"

"ಕುರಿ ದನ ತಿನ್ನುವ ನೀನು ಕಣ್ತೆರೆದಿದ್ದಿಯಲ್ಲಾ ಅದೇ, ಸಾಕು."

"ಹೇಡಿಗಳ ವಿಚಾರಧಾರೆ !"

ಹರೀಶ್ ಮಂದಹಾಸ ಬೀರಿದ.

"ಮೈಯಲ್ಲಿ ಶಕ್ತಿ ಇರುವಾಗ ಉತ್ಸಾಹವಿರುವಾಗ ಬಾಳಿನ ಎಳೆ ಎಳೆಯನ್ನೂ ಮುಟ್ಟಿ ನೋಡಬೇಕು. ಖಾದ್ಯಾಖಾದ್ಯಗಳನ್ನು ಸವಿಯದ ಹೊರತು ಕಹಿ-ಸಿಹಿ ಅರಿಯುವುದು ಹೇಗೆ ?"

"ಹೊರನೋಟದ ಹಿತಕ್ಕಿಂತ ಅಂತರ್ದೃಷ್ಟಿಗೆ ಗೋಚರವಾಗುವ ಹಿತಾಹಿತಗಳು ಸಾಲವೇ ?"

"ನನ್ನ ನೀತಿ ಏನಿದ್ದರೂ ಹಾಲಿದ್ದಾಗ ಹಬ್ಬ !"

"ಹಾಲಿದ್ದಾಗ ಹಬ್ಬವುಂಡು ಹಾಲಿಲ್ಲದಾಗ ಕೊರಗುವುದಕ್ಕಿಂತ ಹಬ್ಬದ ಗೋಜಿಗೆ ಹೋಗದಿರುವುದು ಲೇಸಲ್ಲವೇ ?"

"ದುರ್ಬಲರ ನೀತಿ !" ಕೊಸಾಂಬಿ ಆನಂದೋತ್ಸಾಹದಿಂದ ಮುಂದು ವರಿದ "ಹರೀಶ್ ! ನಾವು ಈ ಜಗತ್ತಿಗೆ ವಿನಾಕಾರಣ ಬರಲಿಲ್ಲ....ನಮ್ಮ ನಮ್ಮ ಅಮೂಲ್ಯವಾದ ವೇಳೆಯು ಎಂದೂ ವ್ಯರ್ಥವಾಗಬಾರದು !"

"ಅದನ್ನು ಖಂಡಿತ ಒಪ್ಪಿಕೊಳ್ಳುವೆ! ನಾವು ಬಂದಿರುವುದು ಯಾವುದೋ ಮಹೋದ್ದೇಶಕ್ಕಾಗಿ. ಬರಿಯ ಐಹಿಕ ಸುಖಕ್ಕಾಗಿ ಅಲ್ಲ."

ಕೊಸಾಂಬಿ ಮೇಘಮಂಡಲದಲ್ಲಿ ಅರಳಿದ ಚಂದ್ರಮಲ್ಲಿಕೆಯಂತೆ ಮನೋಹರವಾದ ನಗುವನ್ನು ಬೀರಿದ. ಕಣ್ಣುಗಳು ಕಾಂತಿಯುತವಾದುವು.

"ನನ್ನ ನಿನ್ನ ಜೋಡಿ ಎತ್ತು ಕೋಣಗಳ ಜೋಡಿ ಇದ್ದ ಹಾಗೆ!"

"ಕೋಣ ಎತ್ತಾಗುವುದು ಕಷ್ಟವಲ್ಲ."

"ನೋಡೋಣ, ಎತ್ತು ಕೋಣವಾಗುವುದೋ? ಕೋಣ ಎತ್ತಾಗುವುದೋ?"

"ಆಗಲಯ್ಯಾ, ಆಗಲಿ!" ಮೊದಲೇ ಅರಳಿದ್ದ ಮೂಗಿನ ಹೊಳ್ಳೆಗಳು ಇನ್ನಷ್ಟು ಅರಳಿದುವು. ಹುಬ್ಬೇರಿಸಿ ನುಡಿದ ಕೊಸಾಂಬಿ "ನೋಡುತ್ತಿರು; ಆ ಕಾಲ ಬಹಳ ದೂರವಿಲ್ಲ!"

ಅವನ ದಪ್ಪ ತುಟಿ, ಚಪ್ಪಟೆ ಮೂಗು, ಕುರುಚಲು ಕೂದಲುಗಳ ವಿಶೇಷ, ಎಲ್ಲಕ್ಕಿಂತ ಮಿಗಿಲಾದ ಒರಟು ಭಾವನೆಗಳ ವೈಶಿಷ್ಟ್ಯವನ್ನು ಗಮನಿಸುತ್ತಾ–"ಕೊಸಾಂಬಿ....!"

ಅವನನ್ನು ಮುಂದುವರಿಸಗೊಡದಂತೆ ನಡುವೆ ಬಾಯಿ ಹಾಕಿದ ಕೊಸಾಂಬಿ "ಹರೀಶ್, ಯೋಚಿಸಿನೋಡು; ನಮ್ಮ ಬದುಕನ್ನು ವ್ಯರ್ಥಗೊಳಿಸುವುದು ಸರಿಯಲ್ಲ."

"ಸರಿ; ನಿನ್ನ ಜನ್ಮ ಸಾರ್ಥಕತೆ ಏನೇನಿದೆಯೋ ಎಲ್ಲಾ ತೀರಿಸಿಕೋ."

"ಕುರಿ ಇನ್ನೇನೆಂದೀತು?"

ಹರೀಶ್ ಮುಗುಳು ನಕ್ಕ.

* * * *

ಯೋಜನ ಯೋಜನ ಯೋಜನ ಹಬ್ಬಿರುವ ವನಪ್ರದೇಶಗಳ ಅಸೀಮ ಸೌಂದರ್ಯಕ್ಕೆ ಮನಸೆತ್ತು ಗೆಳೆಯರಿಬ್ಬರೂ ಹಸುರು ಹುಲ್ಲಿನ ಮೆತ್ತೆಯ ಮೇಲೆ ಮಂಡಿಸಿದರು. ಜಗತ್ ರಂಗದಲ್ಲಿ ಶ್ರೀ ಶಕ್ತಿಯ ಲೀಲಾಖೇಲನವನ್ನು ಅವಲೋಕಿಸುತಿದ್ದಂತೆ ಒಮ್ಮೆ ಶಿವಮಯವಾಗಿ ತೋರಿದರೆ ಇನ್ನೊಮ್ಮೆ ಮಧುಮಯವಾಗಿ ತೋರುತಿತ್ತು ಜಗತ್ತು. ನಿರ್ಮಾನುಷವಾದ ಆ ಸುಂದರ ಪ್ರದೇಶದಲ್ಲಿ ಹರಿದ ನಿಶ್ಶಬ್ದ ಮಂಗಳಧಾರೆ ಪ್ರಕೃತಿಯ

ಸೌಂದರ್ಯವನ್ನು ಇಮ್ಮಡಿಗೊಳಿಸಿತ್ತು. ಸಂಧ್ಯಾ ಜ್ಯೋತ್ಸ್ನೆಯ ಪ್ರತಿಫಲನದಿಂದ ಮುಖ ಮಂಡಲದಲ್ಲಿ ಸರಳ ಸ್ನಿಗ್ಧತೆ ವರ್ಧಿಸಿತು. ಹಚ್ಚ ಹಸುರುಡೆಯುಟ್ಟ ಪ್ರಕೃತಿ ನಾನಾವರ್ಣರಂಜಿತ ಪುಷ್ಪರಾಜಿಯ ಸೆರಗು ಹೊದ್ದು ವಸಂತ ವೈಖರಿಯಲ್ಲಿ ತನುಮನಗಳಿಗೆ ಆನಂದವೂಡಿಸುವಂತಿದ್ದಾಳೆ.

ಹರೀಶ್ ಆ ಅಪೂರ್ವ ಸೌಂದರ್ಯಧಾರೆಯಲ್ಲಿ ಮುಳುಗಿ ಭಾವನಾ ಲೋಕದಲ್ಲಿ ಮುಳುಗಿದ.

ಕೊಸಾಂಬಿ ಹಸುರು ಹುಲ್ಲಿನ ಮೆತ್ತೆಯ ಮೇಲೆ ಅಡ್ಡಾದ. ಕೈತೋಳುಗಳು ತಲೆದಿಂಬಾಗಿ ಆಶ್ರಯ ನೀಡಿದುವು. ಉದ್ದವಾಗಿ ನೀಡಿದ ಕಾಲುಗಳನ್ನು ಸಣ್ಣಗೆ ಅಲುಗಿಸುತ್ತ ಆಕಾಶದೆಡೆಗೆ ದಿಟ್ಟಿಯನಟ್ಟಿದ.

"ದಿನವೂ ಪೇಟೆ ಪಟ್ಟಣ ನೋಡಿ ನೋಡಿ ಬೇಸರವಾಗಿತ್ತು. ಇಂದು ಹಾಯಾಗಿ ಎಷ್ಟು ಹೊತ್ತಾದರೂ ಕಳೆಯಬಹುದು." ಎಂದ ಹರೀಶ್.

"ಈ ವಸಂತ ಋತುವಿನಲ್ಲಿ ಮಾತ್ರ ಇಂಗ್ಲೆಂಡ್ ಹೀಗೆ. ಅನಂತರ ದೇವರೇ ಗತಿ."

"ಅದಕ್ಕೆಂತಲೇ ನಿನ್ನನ್ನು ಈಗ ಎಳೆತಂದದ್ದು."

ಕೊಸಾಂಬಿ ಮುಗುಳುನಗುತ್ತಾ ದಿಟ್ಟಿಯನ್ನು ಗಗನದೆಡೆಗೆ ಅಟ್ಟಿ ಸುಮ್ಮನಾದ. ವನರಾಜಿಯ ವೈಭವದಲ್ಲಿ ತಲ್ಲೀನನಾಗಿದ್ದ ಹರೀಶನ ನೋಟ ಕೆಂದಳಿರುಗಳ ಮೇಲೆ ಹರಿದಾಡುತಿತ್ತು.

"ಹರೀಶ್ !"

"........."

"ಹರೀ !"

"ಏನಪ್ಪಾ ?"

"ಮನದಲ್ಲೇ ಮಂಡಿಗೆಯುಣ್ಣುವ ಪ್ರಾಣಿ ನೀನು !"

ಹರೀಶ್ ಕ್ಷಣಕಾಲ ಅವನನ್ನು ನಗುಮುಖದಿಂದ ನಿಟ್ಟಿಸಿದ, ಮಾತಾಡಲಿಲ್ಲ.

"ನೀನು ಸದಾ ಅಂತರ್ಮುಖಿ. ಬಹುಶಃ ಮುಂದಿನ ನೋಬೆಲ್ ಬಹುಮಾನ ಪಡೆಯುವವನು ನೀನೇ ಎನ್ನಿಸುತ್ತೆ !"

"ಬರಲಿ....ಬಂದರೆ ಯಾರಿಗೆ ಬೇಡ ?"

ಸುತ್ತಮುತ್ತ ಗಿಡದಿಂದ ಗಿಡಕ್ಕೆ ಹಾರಿ ಜಿಗಿದಾಡುವ ಪಕ್ಷಿ ಸಂಕುಲಗಳ ಇನಿಗಾನ ಕಿವಿಯ ಮೇಲೊರೆಯುತಿತ್ತು. ದೂರದಲ್ಲಿ ಕರಿಯ ಹೆಬ್ಬಾವಿನಂತೆ ಅಂಕು ಡೊಂಕಾಗಿ ಹರಿದ ರಸ್ತೆಯಲ್ಲಿ ವಾಹನಗಳು ತೀವ್ರಗತಿಯಲ್ಲಿ ಹರಿದಾಡುವುದು ಗೋಚರಿಸುತಿತ್ತು. ಹಸುರು ಒಸರುವ ಸಾನು ಪ್ರದೇಶವನ್ನು ನಿಟ್ಟಿಸುತ್ತಾ "ಈ ಹಿಂದೆ ನೀನೆಂದಾದರೂ ಈ ಸ್ಥಳಕ್ಕೆ ಬಂದಿದ್ದೆಯಾ?" ಎಂದ ಹರೀಶ. ಮಿನುಮಿನುಗುವ ಕಣ್ಣುಗಳಲ್ಲಿ ಕುತೂಹಲದ ಛಾಯೆ ತಲೆ ಹಾಕಿತು.

"ಇಷ್ಟು ದೂರದ ಹೊರವಲಯಕ್ಕೆ ಯಾರು ಬರುತ್ತಾರೆ ಹೇಳು? ಇಷ್ಟಕ್ಕೂ ನಾನು ಕಾಡುಮೇಡುಗಳನ್ನು ಬಯಸುವುದೂ ಇಲ್ಲ. ಬಯಕೆಯಾದರೆ ಬೇಕಾದಷ್ಟು ಜಗತ್‌ಪ್ರಸಿದ್ಧ ಪಾರ್ಕುಗಳಿವೆಯಲ್ಲಾ? ಕೆನ್ಸಿಂಗ್‌ಟನ್, ಬ್ಯಾಟರ್ಸಿ, ರೀಜೆಂಟ್, ಸೇಂಟ್‌ಜೇಮ್ಸ್, ಹೈಡ್‌ಪಾರ್ಕ್ ಎಲ್ಲಾದರೂ ಹೋಗಿ ಸುತ್ತಾಡಿ ಬರುವೆ. ಇಲ್ಲದಿದ್ದರೆ ಹಾಯಾಗಿ ಬಾರ್ ಕಡೆ ಹೋಗಿ ಹೊತ್ತು ಕಳೆಯುವೆ. ಮೇರಿ ಬಂದ ದಿನ ಸಿನಿಮಾಕಡೆ ಹೋಗಿ ಬರುತ್ತೇವೆ."

"ಅಂದ ಹಾಗೆ....ಯಾವಾಗ ನಿಮ್ಮ ಮದುವೆ?"

"ಮೇರಿ ಇನ್ನೂ ತನ್ನ ಅಭಿಪ್ರಾಯ ತಿಳಿಸಿಲ್ಲ."

"ನಿನ್ನ ಅಭಿಪ್ರಾಯ ಹೇಳು?"

"ನಾನು ಈಗಲೇ ಸಿದ್ಧ!" ಹಸನಾದ ನಗೆ ಬೀರಿದ ಕೊಸಾಂಬಿ.

"ಮದುವೆಯಾದನಂತರ ನಿನ್ನ ಇಚ್ಛೆ ಏನು? ಆಫ್ರಿಕಾ ಕಡೆ ಹೋಗುವಿಯೋ? ಅಥವಾ ಇಲ್ಲೇ ನೆಲಸುವಿಯೋ?"

"ಅಲ್ಲಿಗೆ ಹೋಗುವ ಯೋಚನೆಯಿಲ್ಲ."

"ಊರಿಗೆ ಮೇರಿಯನ್ನು ಕರೆದೊಯ್ಯುವುದಿಲ್ಲವೇ?"

"ಅಲ್ಲಿ ನನ್ನ ಪ್ರೇಯಸಿ ಇದ್ದಾಳೆ."

"ಪ್ರೇಯಸಿ....?"

"ಹೌದು."

"ಅಂದರೆ ನಿನಗೆ ಮದುವೆಯಾಗಿದೆಯೆ?"

"ಹೌದು. ಮಗ ಮಗಳೂ ಇದ್ದಾರೆ."

"ನಿಜವಾಗಿ ?"

ಕೊಸಾಂಬಿ ಮೆಲುನಗೆ ಬೀರಿದ.

"ಮತ್ತೇಕೆ ಮದುವೆ ?"

"ಇಲ್ಲಿರುವತನಕ ನಾನೊಬ್ಬನೇ ಇರಲಾರೆ. ನನಗೆ ಮುದ್ದುಮೊಗದ ಹೆಣ್ಣು ಬೇಕು."

"ಅದಕ್ಕೆ ನಿನ್ನ ಸತಿಯ ಸಮ್ಮತಿ ಇದೆಯೆ ?"

"ಅವಳು ಅಲ್ಲೇ ಇರುತ್ತಾಳಾದುದರಿಂದ ಸಮ್ಮತಿಯ ಪ್ರಶ್ನೆಯೇ ಏಳುವುದಿಲ್ಲ."

"ಶ್.....!"

"ನಾನು ಹೇಗೂ ಅಲ್ಲಿ-ಇಲ್ಲಿ ಇರುವೆ. ಆದರಿಂದ ಭಾದಕವೇನೂ ಇರುವುದಿಲ್ಲ."

ಏನು ಹೇಳಬೇಕೋ ತೋರದೆ ಹರೀಶ ಸುಮ್ಮನಾದ.

"ಏಕೆ ಸುಮ್ಮನಾದೆ ? ನೀತಿ ಧರ್ಮಗಳ ಬಗ್ಗೆ ಉದ್ದುದ್ದ ಭಾಷಣ ಮಾಡುವ ನೀನು ಸುಮ್ಮನಾದುದು ಆಶ್ಚರ್ಯ.... ಏನಾಯಿತು ನಿನಗೆ ?"

"ಏನಿಲ್ಲಪ್ಪಾ, ನಿನ್ನ ರೀತಿ ನೋಡಿ ಆಶ್ಚರ್ಯವಾಯಿತು ಅಷ್ಟೆ."

"ನೀನು ಎಷ್ಟೆಂದರೂ ಗಾಂಧೀ ನಾಡಿನಿಂದ ಬಂದವನು. ನಿನಗೆ ಆಶ್ಚರ್ಯವಾದರೆ ಅದೇನೂ ಹೆಚ್ಚಲ್ಲ." ಅತ್ಯಂತ ಗಂಭೀರ ಮುಖಮುದ್ರೆಯಿಂದ ನುಡಿದ ಕೊಸಾಂಬಿ.

ಮಾಲತೀಧಾಮದಂತೆ ನಯನ ಮನೋಹರವಾಗಿದ್ದ ವನಶ್ರೀಯ ಮೇಲೆ ನೋಟವನ್ನು ಚೆಲ್ಲಿಕೊಟ್ಟಿದ್ದ ಹರೀಶ. ನವ್ಯ ಆಮಿಷಾಶಿಯ ಅತಿ ಮಾನುಷತೆಯನ್ನು ಭಾವಿಸುತಿತ್ತು ಮನಸ್ಸು. ಕಲ್ಪನೆಯ ವೇಗಕ್ಕೆ ಸಿಕ್ಕಿ ಮನಸ್ಸಾಗರದ ಅಲೆಗಳು ಸುಳಿಸುತ್ತುತಿದ್ದುವು ತುಟಿಗಳು ಬಿರಿಯಲಿಲ್ಲ.

"ಆದರಿಂದ ಭಾದಕವೇನು ಮಿತ್ರಾ ? ನನ್ನ ದುಡಿಮೆ ಇಬ್ಬರಿಗೂ ಹಂಚಿ ಹೋಗುತ್ತದೆ."

"ನಿನ್ನ ಜೀವನ ಕಲ್ಪನೆಗೆ, ಅಧಿಕಾರ ಲಾಲಸೆಗೆ, ಸಂತಸದ ಪ್ರಾಣಾಳಿಕೆಗೆ ಅಚ್ಚುಮೆಚ್ಚಿನ ಒಬ್ಬಳೇ ಮಡದಿಯಿದ್ದು ಜೀವನ ವ್ಯಾಪ್ತಿಗೆ ಸಿಲುಕಬಹುದಾದ ಮುದ್ದಾದ ಸಂತತಿಯಿದ್ದರೆ ಆದರಿಂದ ನೀನು ಸಂತಸವ

ಸುಗ್ಗಿಯನ್ನುಣ್ಣುವೆ; ಇಲ್ಲದೆ ಹೋದಲ್ಲಿ ನಿನ್ನ ಭವಿಷ್ಯ ಸುಖದಾಯಕವಾಗಿರಲಾರದು ಖಂಡಿತ ಯೋಚಿಸಿ ನೋಡು."

"ವೃಥಾ ತಪ್ಪು ತಿಳುವಳಿಕೆ."

"ನನಗೊತ್ತು, ನೀನು ನನ್ನ ಹಾದಿಯಿಂದ ಒಂದಿಂಚೂ ಸರಿಯಲಾರೆ ಎಂದು. ಆದರೂ ಸಹ ಹೇಳುವುದು ನನ್ನ ಧರ್ಮ. ಆದರಿಂದ ಹೇಳುವೆ."

"ಕೇಳು!" ಕೆನೆದು ಗಂಟಲು ಸರಿಪಡಿಸಿಕೊಂಡ, ಕೊಸಾಂಬಿ.

ಹರೀಶ ಆತನ ರೀತಿಯನ್ನು ಕುತೂಹಲತೃಷಿತ ನೇತ್ರನಾಗಿ ಕೆಲವು ಕ್ಷಣ ನಿಟ್ಟಿಸಿದ. ಆತನ ವಿಷಯ ಸಂಪತ್ತಿಯ ಹುಚ್ಚು ಆಸೆ ಊಹಿಸಲೂ ಆಗದಂತಹ ಸಣ್ಣ ನಗು ತರಿಸಿತು.

"ಆಫ್ರಿಕನ್ನರನ್ನು ದನಗಳಂತೆ ಕುರಿಗಳಂತೆ ಹೀನಾಯವಾಗಿ ಕಂಡ ಈ ಇಂಗ್ಲೀಷರಿಗೆ ನಮ್ಮ ಗಂಡುತನವೇನೆಂಬುದನ್ನು ತೋರಿಯೇ ತೀರಬೇಕು. ಉದ್ಯೋಗದಲ್ಲೂ ಜೀವನದಲ್ಲೂ ಜಾಣ್ಮೆಯಲ್ಲೂ ಚೇತನದಲ್ಲೂ ನಾವು ನಮ್ಮ ಶೌರ್ಯವನ್ನು ತೋರಿಯೇ ತೀರಬೇಕು."

"ತೋರಿಸು ಅದಕ್ಕೂ ಇದಕ್ಕೂ ಎಲ್ಲಿಯ ಸಂಬಂಧ? ಇಬ್ಬರು ಹೆಂಡಿರು ಎಂದರೆ ಅದು ನಿನ್ನ ಜೀವನ–ಭವಿಷ್ಯ–ಸಂತತಿ ಬದುಕು ಇವುಗಳ ಮೇಲೆ ದುಷ್ಪರಿಣಾಮ ಉಂಟುಮಾಡುತ್ತದೆ. ಸಂಸಾರ ಬೆಳೆಯುತ್ತ ಹೋದಂತೆಲ್ಲಾ ನೀನು ಖಂಡಿತ ಮನಶ್ಶಾಂತಿಯನ್ನು ಕಳೆದುಕೊಳ್ಳುತ್ತಿ."

ಕೊಸಾಂಬಿ ಕಿಲಕಿಲ ನಕ್ಕು ನುಡಿದ "ನಾನು 'ಗಂಡು' ಎಂಬುದನ್ನು ನಿನಗೂ ಸಹ ತೋರಿಕೊಡುವೆ! ಮೇರಿ ಬಿಳಿಯ ಹುಡುಗಿ!"

ಹರೀಶ ಸುಮ್ಮನಾದ. ಅಂತರ್ವಾಣಿ ಮೆಲ್ಲನೆ ಉಲಿಯಿತು "ಮದುವೆಯಾಗದ ಹೊರತು ಹುಚ್ಚು ಬಿಡುವುದಿಲ್ಲ."

ಬಾನಂಗಣದಲ್ಲಿ ವಿಮಾನವೊಂದು ಶಬ್ದವೇಗಕ್ಕೂ ಮೀರಿದ ತೀವ್ರಗತಿಯಲ್ಲಿ ಹಾರುತಿತ್ತು.

ಹಾ.....! ಮಾನವ ನಿರ್ಮಿತ. ದಿವ್ಯ ಮಾನವ ಇಂದು ಏನೆಲ್ಲ ಸಾಧಿಸಬಲ್ಲ? ವಿಜ್ಞಾನ ಎಷ್ಟೊಂದು ಮುನ್ನಡೆದಿದೆ! ಮನುಷ್ಯ ಬರಿಯ ವಿಷಯ ಸಂಪತ್ತಿಯಲ್ಲೇ ಮುಳುಗಿದ್ದಿದ್ದರೆ ವಿಜ್ಞಾನ ಇಷ್ಟೊಂದು ಮುನ್ನಡೆಯುತ್ತಿತ್ತೆ?

ಯೋಚನೆಯ ಸುಳಿಯಲ್ಲಿ ಸಿಕ್ಕಿ ಹರೀಶ ಮರವಟ್ಟು ಕುಳಿತ.

* * * *

ಲಂಡನ್ನಿನ ವಾತಾವರಣಕ್ಕೆ ಹೊಂದಿಕೊಂಡರೂ ಕೊಸಾಂಬಿಯ ರೀತಿ ನೀತಿಗಳಿಗೆ ಹೊಂದಿಕೊಳ್ಳುವುದು ಎಲ್ಲಿಲ್ಲದ ಕಷ್ಟ. ಆದರೂ, ಅವನ ವ್ಯಕ್ತಿತ್ವ ಚಟುವಟಿಕೆಗಳನ್ನು ಯಾರೂ ತಳ್ಳಿ ಹಾಕುವಂತಿಲ್ಲ. ಒಮ್ಮೆ ಒಗಟಾಗಿ ತೋರಿದರೆ ಇನ್ನೊಮ್ಮೆ ಸರಳ ಸಲಿಲ ಧಾರೆಯಾಗಿ ತೋರುತಿದ್ದ. ಇಬ್ಬರೂ ತಾರ್ಕಿಕ ವಿಚಾರಗಳಿಗೆ ಕೈ ಹಾಕಿದಾಗ ಕ್ಷೇತ್ರ ವಿಶಾಲವಾಗುತಿತ್ತು. ವಿಷಯ ಬಿಗಡಾಯಿಸುತಿತ್ತು. ಮೇಲಾಗಿ ಸ್ನೇಹ ಸೇತು ಇನ್ನಷ್ಟು ಬಲ ಗೊಳ್ಳುತಿತ್ತು.

ಆಧುನಿಕ ಪ್ರಪಂಚವು ಚರ್ಚೆಗೆ ಎಂತು ವಸ್ತುವೋ ಪುರಾಣ ಪ್ರಸಿದ್ಧರ ಜೀವನ ಕ್ಷೇತ್ರವೂ ಅಂತೆಯೇ. ಕೊಂಸಾಬಿ ಎಲ್ಲದರಲ್ಲೂ ಸ್ವಚ್ಛಂದ ವಾಗಿ ಪಟ್ಟು ಹಿಡಿದು ಕೂರುವ. ಹೃದಯ ಬಿಚ್ಚಿ ಮಾತಾಡುವ.....ಅವನ ವಾಗ್ಧಾರೆ ಉನ್ಮತ್ತ ವೇಗದಿಂದ ಹರಿಯುತಿದ್ದರೆ ನೋಡುವವರಿಗೆ ಆ ಚಿತ್ರ ಕಲ್ಪನೆ ದ್ವಾಪರ ಯುಗದ ಭೀಮಸೇನನನ್ನು ನೆನಪಿಗೆ ತರುವಂತಿತ್ತು. ಇಂಗ್ಲಿಷ್ ಪದ ಪುಂಜಗಳ ಧಾರೆಯಲ್ಲಿ ತಮ್ಮ ಸಾಮಾಜಿಕ ರೀತಿ ನೀತಿ ಸು ಸುಗ್ಗಿಯನ್ನು ಣಿಸುವುದೊಂದೇ ಅಲ್ಲ, ಕುಣಿದು ಕುಪ್ಪಳಿಸಿ ತಮ್ಮ ಕುಣಿತದ ಭಾವಭಂಗಿಯನ್ನೂ ಪ್ರದರ್ಶಿಸುತಿದ್ದ. ಹರೀಶನಿಗೆ ಒಮ್ಮೆ ಅವನ ರೀತಿ ಸಾಕೆನಿಸಿದರೆ ಇನ್ನೊಮ್ಮೆ ಬೇಕೆನಿಸುವುದು.

ಕಡಲೆಲರು ಅಲೆಅಲೆಅಲೆಯಾಗಿ ಬೀಸುತಿತ್ತು.

ಪುಷ್ಪರಾಜಿಯ ಸೌರಭ ತನುಮನಗಳು ತಣಿಯುವಷ್ಟು ಹರಿದು ಬರುತ್ತಿದೆ.

ಇಂದು ಭಾನುವಾರವಾದ್ದರಿಂದ ಕಾಲೇಜಿಗೆ ಬಿಡುವು. ಮಧ್ಯಾಹ್ನದ ಊಟವಾದನಂತರ ಇಬ್ಬರೂ ಚೆಸ್ಸಿಗೆ ಕೈ ಹಚ್ಚಿದರು. ಹೊತ್ತು ನಾಲ್ಕರ ಅಂಚನ್ನು ದಾಟುವವರೆಗೂ ಆಟ ಅತ್ಯಂತ ಹುರುಪಿನಿಂದ ಸಾಗಿತು. ಅನಂತರ ಚಹ. ಚಹದ ಕೊನೆಯ ಗುಟುಕನ್ನು ಹೀರಿ ಬಸಿಯನ್ನು ಟ್ರೇ ಯಲ್ಲಿಟ್ಟು ಕೊಸಾಂಬಿಯೆಂದ "ನಡಿಯಪ್ಪಾ, ಹೇಗಿದ್ದರೂ ನೀನು ಗಿಡ ಮರ ಸೊಪ್ಪುಸದೆ ಕಂಡರೆ ಹಲ್ಲು ಕಿರಿಯುವವ. ಇಂದು ಹೈಡ್ ಪಾರ್ಕ್ ಕಡೆ ಹೋಗಿ ಬರೋಣ. ಅದರಿಂದ ನಿನಗೆ ಸಂತಸವಾಗಬಹುದು."

"ಓ, ಆಗಲಿ. ನೀನು ಹೇಗೆ ಹೇಳಿದರೆ ಹಾಗೆ."

ಕೊಸಾಂಬಿ ಮುಗುಳು ನಗೆ ಬೀರಿದ.

"ಸರಿ ಮತ್ತೆ."

ಹರೀಶ ಪ್ರತಿ ಹೇಳಲಿಲ್ಲ.

ಇಬ್ಬರೂ ಮೆಟ್ಟಲಿಳಿದರು. ಕೊಸಾಂಬಿ ಮುಂದೆ. ಹರೀಶ ಹಿಂದೆ.

ಲಂಡನ್ ನಗರದ ರೂಪುರೇಷೆಗಳನ್ನೂ, ಬಿಳಿ ಜನರ ಪರಿವಾರವನ್ನೂ, ಅವರ ಪ್ರಗತಿ ಪರ ಯೋಜನೆಯೊಂದಿಗೆ ವರ್ಣಭೇದ ನೀತಿಯನ್ನೂ, ಗಮನಿಸುವುದು ಹರೀಶನಿಗೆ ಮೋಜಾದರೆ ಕೊಸಾಂಬಿಗೆ ಎಲ್ಲಿಲ್ಲದ ತಿರಸ್ಕಾರ. ಅವರನ್ನು ಅವಹೇಳನ ಮಾಡಿದಷ್ಟೂ ಸಾಲದು. ಮೂಗು ಮುರಿದಷ್ಟೂ ಸಾಲದು.

ಹತ್ತು ನಿಮಿಷದೊಳಗಾಗಿ ಹಾರ್ಡಿಂಜ್ ಸರ್ಕಲ್ ದಾಟಿ ಹೆಮಿಂಗ್‌ವೇ ರಸ್ತೆಯಲ್ಲಿದ್ದ ಬಸ್ಸಿನ ನಿಲ್ದಾಣವನ್ನು ತಲುಪಿದಾಗ ಹೊತ್ತು ಇನ್ನೂ ಐದರ ಅಂಕಿಯನ್ನು ದಾಟಿರಲಿಲ್ಲ. ಐದೈದು ನಿಮಿಷಕ್ಕೊ ಬಸ್ಸುಗಳು ಬರುತ್ತವೆ ಹಾಗೂ ಹೋಗುತ್ತವೆ. ಸ್ಥಳ ಮೊಟ್ಟಿಗೆ ಬಿಳಿಯರಿಗೆ ಮೀಸಲು. ತಮಗಿಂತ ಹಿಂದಾಗಿ ಬಂದವರಿಗೂ ಸಹ.

ಕೊಸಾಂಬಿ ಹಲ್ಲು ಕಡಿದ "ಇವರ ಜನ್ಮ ಜಾಲಾಡನಿದ್ದರೆ....?"

ಮಾತು ಮುಗಿಯುವುದರೊಳಗಾಗಿ ಮಗದೊಂದು ಬಸ್ಸು ಬಂದು ನಿಂತಿತು. ಬಿಳಿಯರು ನುಗ್ಗಿದರು. ಇವರು ಇದ್ದಲ್ಲೀ ಉಳಿದರು. ಬಸ್ಸಿನ ನಿಲ್ದಾಣದಲ್ಲಿ ನೆರೆದ ಮಂದಿಯನ್ನು ಗಮನಿಸಿದರೆ ಇನ್ನೂ ಒಂದೆರಡು ಬಸ್ಸಿಗಾಗುವಷ್ಟು ಮಂದಿ ಕಲೆತಿದ್ದಾರೆ. ಬಿಳಿಯರ ಸರದಿಯ ನಂತರವೇ ಏನಿದ್ದರೂ ತಮಗೆ ಸ್ಥಾನ. ಅಂದಮೇಲೆ ಇನ್ನೆಷ್ಟು ಹೊತ್ತಿಗೋ....

ಹರೀಶ ಅಂದ "ನಾವೂ ನುಗ್ಗಬಹುದಾಗಿತ್ತು. ಹಿಂದೆ ಉಳಿದರೆ ಕೊನೆಯ ತನಕವೂ ಹೀಗೆಯೇ."

"ಹ್ಞೂ.....ಅಷ್ಟು ಸುಲಭ! ನಿನ್ನನ್ನವರು ಹತ್ತಗೊಡಿಸಬೇಕಲ್ಲ?"

ಸನಿಹದಲ್ಲಿ ನಿಂತಿದ್ದ ಬಿಳಿಯನೊಬ್ಬ ಅಂದ "ಈ ದೇಶ ನಿಮಗಾಗಿ ಅಲ್ಲ!"

ಕೊಸಾಂಬಿ ಸಿಡಿದೆದ್ದ "ನಮ್ಮ ದೇಶ ಮಾತ್ರ ನಿಮಗಾಗಿ ಇತ್ತು!"

"ಎಲ್ಲಿ ಬುದ್ಧಿಯ ಅಭಾವವಿರುತ್ತೋ ಅಲ್ಲಿ ಬುದ್ಧಿವಂತರ ಅಗತ್ಯವಿದ್ದೇ ಇರುತ್ತೆ !"

ಕೊಸಾಂಬಿ ತಿಕ್ಕನೆ ಅತ್ತ ಸರಿಯುವುದರೊಳಗಾಗಿ ಆತ ಬಸ್ಸು ಹತ್ತಿ ಮಿಂಚಿನಂತೆ ಮಾಯವಾದ. ಸದ್ದು ಗದ್ದಲ ಗೊಂದಲಮಯವಾಗಬೇಕಿದ್ದ ಜನಸಂತೆ ಯಾವ ದೇವರ ಅನುಗ್ರಹದಿಂದಲೋ ಅಲ್ಲಿಂದಲ್ಲೇ ತಣ್ಣಗಾಯಿತು. ಹರೀಶ ದೀರ್ಘನಿಶ್ವಾಸ ಬಿಟ್ಟ. ಯಾರೋ ಕೆಲವು ಕೆಂಗೂದಲಿನ ಶಾಲಾ ಬಾಲಕಿಯರು ಕಿಸಕ್ಕನೆ ನಕ್ಕರು.

ಕೊಸಾಂಬಿ ಒಂದು ಕ್ಷಣ ನೋಡಿ ಸುಮ್ಮನಾದ.

ಮರುಘಳಿಗೆಯಲ್ಲಿ ಬಂದ ಬಸ್ಸು ಖಾಲಿ ಇದ್ದುದರಿಂದ ಇವರಿಗೆ ಸ್ಥಳ ದೊರೆಯಿತು. ಬಸ್ಸಿನ ಪಯಣ ಮುಗಿಯುವವರೆಗೂ ಹರೀಶನ ಯೋಚನೆಯೊಂದಾದರೆ ಕೊಸಾಂಬಿಯದು ಇನ್ನೊಂದು. ಸಿಟ್ಟು ರೋಷಗಳ ಗಣಿಯಾಗಿ ಅವನು ಬುಸುಗುಡುತಿದ್ದರೆ ಹರೀಶ ಮನದಲ್ಲೇ ಮುಸಿ ಮುಸಿ ನಗುತಿದ್ದ.

"ನೋಡಿದೆಯಾ....?"

"ನಿನ್ನ ಒರಟುತನಕ್ಕೂ ಇವರ ರೀತಿ ನೀತಿಗಳಿಗೂ ಸರಿ ಹೋಗುತ್ತೆ."

ಬಸ್ಸು ಕೇರಿಕೇರಿಗಳನ್ನು ಬಳಸಿ ಸುತ್ತಿ ಹೈಡ್‌ಪಾರ್ಕ್ ತಲುಪಿತು. ಸ್ವಲ್ಪ ಹೊತ್ತು ತಣ್ಣಗಿರೋಣವೆಂದು ಭಾವಿಸಿದ್ದ ಮನಸ್ಸು ತುಸು ಮಿಡುಕಿತು. ಜನ.....ಜನ. ಎಲ್ಲಿ ನೋಡಿದರೂ ಜನ. ಸಂಸಾರಕ್ಕೆ ಸಂಸಾರಗಳೇ ಬಂದಿಳಿದಿವೆ, ಪುಷ್ಪರಾಜಿಯೆಂತು ವರ್ಣರಂಜಿತವೋ ಅಂತೆಯೇ ಜನರಾಶಿಯೂ ವರ್ಣರಂಜಿತ. ಪಾರ್ಕಿನ ಒಳಾವರಣಕ್ಕೆ ಕಾಲಿಡುತ್ತಲೂ ಕೊಸಾಂಬಿ ತುಸು ತಣ್ಣಗಾದ. ಗಮನವನ್ನು ಬೃಹದ್ ಪುಷ್ಪರಾಜಿ ಸೆರೆ ಹಿಡಿಯಿತೋ ಅಥವಾ ಅತುಲ ಜನರಾಶಿ ಸೆರೆ ಹಿಡಿಯಿತೋ ಎಂಬುದನ್ನು ಊಹಿಸುವುದೂ ಕಷ್ಟ. ವನಾಂತರದಲ್ಲಿ ಅಂಕು-ಡೊಂಕಿನ ಸಣ್ಣ ಹಾದಿಗಳಲ್ಲಿ ಅಲೆದಲೆದು ಹೂಗಳ ಸೊಂಪು-ಕಂಪುಗಳನ್ನು ಸವಿದು ತನು ಮನಗಳಿಗೆ ಆನಂದ ರಸಾನ್ನವನ್ನೂಡಿಸಿದರು. ಬಣ್ಣ ಬಣ್ಣದುಡುಪು ತೊಟ್ಟ ರಂಗು ರಂಗಿನ ಮಕ್ಕಳು ಕೇಕೆ ಹಾಕಿ ನಕ್ಕು ನಲಿಯುತ್ತ ಆಟವಾಡುತ್ತಿವೆ. ಹಿರಿಯರು ಅಲ್ಲಲ್ಲೆ ಅಡ್ಡಾಡುತಿದ್ದಾರೆ. ಕೆಲವರು ಮನೆಯಿಂದ ತಂದ ಕಾಫಿ–

ತಿಂಡಿಗಳನ್ನು ಅಲ್ಲಲ್ಲಿ ಸವಿಯುತ್ತಿದ್ದಾರೆ. ಆ ಆನಂದ ಸಾಮ್ರಾಜ್ಯದಲ್ಲಿ ನಾಯಿಗಳೂ ಪಾಲ್ಗೊಂಡಿವೆ.

ಪಾರ್ಕಿನ ಮಧ್ಯೆ ಸರ್ಪಂಟೈನ್ ಎಂಬ ವಿಶಾಲವಾದ ತಿಳಿನೀರಿನ ಪುಷ್ಕರಣಿ. ಅದರ ವೈವಿಧ್ಯತೆಯಲ್ಲಿ ಪುರಾತನ-ವಿನೂತನಗಳ ಸೊಬಗು ಕಾಣಿಸುತಿತ್ತು. ತೀರದಲ್ಲಿ ಅಲ್ಲಲ್ಲಿ ದೋಣಿಗಳು ನಿಂತಿದ್ದುವು. ಅನೇಕಾನೇಕ ದೋಣಿಗಳಲ್ಲಿ ವಿಹಾರ ನಡೆಯುತಿತ್ತು. ಇಬ್ಬರೂ ಒಂದು ದೋಣಿ ಹಿಡಿದರು. ಕೊಸಾಂಬಿ ಹರೀಶನ ಭುಜದಮೇಲೆ ನಲ್ಮೆಯಿಂದ ಕೈ ಹಾಕಿ.

"ನಿನಗೆ ಹಾಡು ಬರುವಂತಿದ್ದರೆ ಒಂದು ಹಾಡು ಹೇಳು. ಹಾಡು ಹೇಳದಿದ್ದರೆ ದೋಣಿ ವಿಹಾರ ರುಚಿಸುವುದಿಲ್ಲ."

"ನನಗೆ ಸಂಗೀತ ಬರುವುದಿಲ್ಲ....ಬರುತಿದ್ದರೆ ನೀನೇ ಹೇಳು."

ಅಷ್ಟಂದದ್ದೇ ಸಾಕಾಗಿತ್ತೋ ಏನೋ....ಕೊಸಾಂಬಿ ಆಫ್ರಿಕನ್ ಹಾಡುಗಳನ್ನು ಉಚ್ಚಸ್ವರದಲ್ಲಿ ಹಾಡಿದ. ಒಂದಾದಮೇಲೊಂದು....ಒಂದಾದಮೇಲೊಂದು.....

"ಎಲಾ ಹುಡುಗ ! ನೀನೇನೂ ಕಡಿಮೆಯಿಲ್ಲ !"

ಕೊಸಾಂಬಿ ನಕ್ಕು ಬಿಟ್ಟ.

ಅರ್ಥವೋ ಅನರ್ಥವೋ ಅವುಗಳನ್ನೊ ಸವಿದ ಹರೀಶ. ಎಡಬಲಗಳಲ್ಲಿ ವಿಹರಿಸುತ್ತಿದ್ದ ಬಿಳಿಯರ ದೋಣಿಗಳಿಂದ ಹಾಡುಗಾರಿಕೆ-ಟ್ರಾನ್ಸಿಸ್ಟರ್ ಹಾಡುಗಾರಿಕೆ-ಹರ್ಷೋದ್ಗಾರ-ವಿಜಯೋತ್ಸಾಹಗಳು ಕೇಳಿ ಬರುತ್ತಿದ್ದುವು. ಎಲ್ಲಿಂದ ಎಲ್ಲಿಯವರೆಗೂ-ದೋಣಿಗಳ ವೇಗಕ್ಕೆ ಸಿಕ್ಕಿ—ತರಂಗಾಯಮಾನವಾಗುವ ಸುನೀಲ ಜಲರಾಶಿ....ತಂಗಾಳಿಯ ಶ್ರುತಿಯೊಂದಿಗೆ ಕರ್ಣಪಟಲಗಳ ಮೇಲೊರಿಯುವ ಮೃದು ಮಧುರ ಜಲತರಂಗಿತ ನಿನಾದ. ಜುಳು, ಜುಳು, ಜುಳು, ಜುಳು.

ದೋಣಿ ವಿಹಾರಾನಂತರ ಕೊಸಾಂಬಿ ಹುಬ್ಬೇರಿಸಿ ನುಡಿದ "ಬಾಪ್ಪಾ ಹೊಟ್ಟೆಗೊಂದಿಷ್ಟು ಏನಾದರೂ ಹಾಕದಿದ್ದರೆ ಅದು ಕೇಳುವಂತಿಲ್ಲ."

"ನಾನೇ ಹೇಳಬೇಕೆಂದಿದ್ದೆ."

"ಮತ್ತೇಕೆ ಹೇಳಲಿಲ್ಲ ? ಅದಕ್ಕೂ ಭಯವೇ ?"

"ಯೋಚನೆ ಬರುವುದರೊಳಗಾಗಿ ನೀನೇ ಹೇಳಿದೆ."

ಇಬ್ಬರೂ ಉಪಹಾರ ಮಂದಿರದ ಹಾದಿ ಹಿಡಿದರು. ಎಡಬಲಗಳ ವನ ದೇಶದ ಸೌಂದರ್ಯರಾಜಿಯನ್ನು ಉತ್ಕಂಠಿತ ಆನಂದಾತಿಶಯದಿಂದ ಸವಿಯುತಿತ್ತು ಅಂತರಂಗ. ಅಷ್ಟಭುಜದ ಗಾಜಿನ ಉಪಹಾರ ಮಂದಿರದೆಡೆಗೆ ಹರಿಯಿತು ಹಾದಿ. ಒಳಗಡೆ ಕಲಕಲರವಗೈಯ್ಯುತ್ತ ಮಂಡಿತರಾದ ಸ್ತ್ರೀ ಪುರುಷರ ಶೋಭೆಗೆ ಗಾಜಿನಮನೆಂು ಸೌಂದರ್ಯ ಉಪಮಾನವಾಗು ವಂತಿತ್ತು. ಆನಂದ ತೃಷಿತ ಮನಃಪ್ರಾಣಗಳಿಗೆ ತಂಪೂಡಿಸಿ ಹೊರ ಬರುವಷ್ಟ ರಲ್ಲಿ ಹಲವಾರು ಪೌಂಡುಗಳು ಕೈಬಿಟ್ಟುವು. ಹಣ ತೆತ್ತು ಹೊರ ಬಂದಾಗ ಹರೀಶನ ಹಣೆಯಲ್ಲಿ ತುಂತುರು ತುಂತುರಾಗಿ ಹನಿಗಳು ಮೂಡಿದುವು.... ಕೊಸಾಂಬಿಗೆ ಅವೆಲ್ಲವೂ ನಿರಾಳ. ನಗೆ ಮಾತುಗಳ ಹಾಸ್ಯದ ಚಟಾಕಿಯನ್ನು ಹಾರಿಸುತ್ತಾ ಗೆಳೆಯನನ್ನು ಮುಂದಿನ ಕವಲು ಹಾದಿಯಲ್ಲಿ ಎಳೆದೊಯ್ದ. ಹಾದಿ ನಡೆಯುತ್ತ ಹೊಂಬಿಸಿಲಲ್ಲಿ ಮಿಾಯುವಾಗ ಯಾವುದೋ ನಿರ್ಧೂಮ ಅಗ್ನಿಜ್ವಾಲೆ ಮೈಮೇಲೆ ವರ್ಷಿತವಾಗುತ್ತಿದೆಯೋ ಎಂಬಂತಿತ್ತು. ಗಿಡಮರ ಗಳ ಮೇಲೆ ವರ್ಣರಂಜಿತ ಪಕ್ಷಿಗಳು ಮೇಲ ನಡೆಸಿವೆ.

* * * *

ಸಂಜೆಯ ವಾತಾವರಣ ಸುಮಧುರವಾಗಿತ್ತು.

ಪಕ್ಷಿಗಳ ಕಲಕಲರವದ ಮಧ್ಯೆ ಅಲ್ಲಲ್ಲಿ ಕೇಳಿ ಬರುವ ಅನೇಕಾನೇಕ ಟ್ರಾನ್ಸಿಸ್ಟರಿನ ವಿಧವಿಧ ದನಿಗಳೊಂದುಗೂಡಿ ಚಿತ್ರವಿಚಿತ್ರವಾಗಿ ವಿಕರಾಳ ವಾಗಿ ಅರಚಿಕೊಳ್ಳುತ್ತಾ ಹೃದಯವನ್ನು ಕೊರೆಯುವಂತೆ ಗದ್ದಲ ಹೂಡಿವೆ. ಜನಗಳ ಮಾತುಕತೆಯ ಗುಜುಗುಂಪಲು, ಮಕ್ಕಳ ಕೇಕೆ, ಹೆಂಗಳೆಯರ ಇನಿದನಿ, ನಾಯಿಗಳ ಬೊಗಳುವಿಕೆ, ಸಿಗಾರಿನ ವಾಸನೆ, ಉಪಹಾರಗಳ ಕಂಪು, ಬೀರ್ ವಿಸ್ಕಿ ಬಾಟಲ್‌ಗಳ ಜಿಣಿಜಿಣಿ ಸದ್ದುಗಳು ಮೇಳೈಸಿ ಪೇಟೆ ಪಟ್ಟಣಗಳನ್ನು ನೆನಪಿಗೆ ತರುವಂತಿತ್ತು.

ಹೈಡ್ ಪಾರ್ಕಿನ ಅಂದಚೆಂದವನ್ನು ಗಮನಿಸುತ್ತಾ ಹರೀಶ್ ಹೆಜ್ಜೆ ಹಾಕಿದ.

ಹಾದಿ ಕಳೆದಾಗ ಮುಂದೆ ದಿಟ್ಟಿಗೋಚರವಾದುದು "Speaker's Corner"

ಅಲ್ಲೊಂದು ವೇದಿಕೆ. ಅದರಮೇಲೆ ಭಾರತೀಯನೊಬ್ಬ ನಿರರ್ಗಳವಾಗಿ

ವ್ಯ ತಾಡುತ್ತಿದ್ದಾನೆ. ಉತ್ಸಾಹ–ಸಮಯಸ್ಫೂರ್ತಿಗಳಿಂದ ಭಾಷಣಕ್ಕೆ ಖಳೆ ಯೇರಿದೆ ಸ್ವತಂತ್ರ ಭಾರತದ ರೀತಿ ನೀತಿಗಳನ್ನೂ, ಸ್ವಾತಂತ್ರ್ಯಾನಂತರ ಸಾಧಿಸಿದ ಪ್ರಗತಿಯನ್ನೂ, ರಾಷ್ಟ್ರೀಯ ಸ್ಥಾನಮಾನಗಳನ್ನೂ ಅಂಕಿ ಅಂಶಗಳ ಸಹಿತ ಅತ್ಯಂತ ಮೊಹನತ್ತಿನಿಂದ ವಿವರಿಸುವ ನೀತಿ ಮನವನ್ನು ಸೆಳೆಯಿತು. ಇಬ್ಬರೂ ಅಲ್ಲೇ ನಿಂತರು.

"ಉತ್ತಮ ವಾಗ್ಮಿ!"

"ಅಷ್ಟು ಮಾತ್ರವಲ್ಲ; ವಿಷಯಗಳನ್ನು ಚೆನ್ನಾಗಿ ತಿಳಿದು ಕೊಂಡಿ ದ್ದಾನೆ."

ನಸುದೂರದಲ್ಲಿ ಕಾರುಗಳಲ್ಲಿ ಕುಳಿತು ಭಾಷಣ ಕೇಳುವವರೂ ಕೇಳು ತಿದ್ದಾರೆ. ಅಲ್ಲಲ್ಲಿ ಗುಂಪುಗೂಡಿ ನಿಂತು ಕೇಳುವವರೂ ಕೇಳುತಿದ್ದಾರೆ. ನಾನಾ ದೇಶೀಯರಿಂದ ನಾನಾ ವರ್ಣೀಯರಿಂದ ತುಂಬಿದ ತಾಣ ಭಾಷಣ ಕಾರನಿಗೆ ಹುರುಪು ನೀಡಿದೆ."

"ಹುಡುಗ ಪರವಾಯಿಲ್ಲ!"

ಕೊಸಾಂಬಿ ತಲೆದೂಗಿ ಸಮ್ಮತಿ ಸೂಸಿದ.

ಗುಂಪಿನ ಮಧ್ಯೆ ನಿಂತವರಾರೋ ರೇಗಿಸಿದರು "ಭಾರತದೇಶ ಅಮೆರಿಕ ರಷ್ಯಗಳ ಬಾಲಂಗೋಚಿ!"

"ಕೊನೆಯಪಕ್ಷ ಅಷ್ಟಾದರೂ ಅನ್ನದಿದ್ದರೆ ನಿಮ್ಮ ಹೊಟ್ಟೆಯುರಿ ನಂದುವುದೆಂತು?"

ದೀಪ್ತಕಂಠ ಗಂಟಾಘೋಷವಾಗಿ ಮೊಳಗಿ ಕೇಳಿದವರ 'ರಾಹು' ಬಿಡಿ ಸಿತು ತಿರುಗುಬಾಣಕ್ಕೆ ಸೋತು ಪ್ರಶ್ನೆ ಕೇಳಿದ ವ್ಯಕ್ತಿ ಗುಂಪಿನಲ್ಲಿ ಕರಗಿ ಹೋದ. ನಗುವವರು ನಕ್ಕರು. ಅಣಕಿಸುವವರು ಅಣಕಿಸಿದರು. ಆದರೂ ಆತನ ವಾಗ್ಝರಿ ಹರಿಯುತ್ತಲೇ ಇತ್ತು. ಪರೀಶ ಸ್ವಲ್ಪ ಹೊತ್ತಿನ ನಂತರ ತಿರುಗಿ ನೋಡಿದಾಗ ಕೊಸಾಂಬಿ ಗುಂಪಿನ ಮಧ್ಯೆ ಕಾಣೆಯಾಗಿದ್ದ. ವಿಚಾರ ಗತ್ತರಿಗೆ ಸಿಲುಕಿ ಅಚ್ಚರಿಯಿಂದ ಸುತ್ತ ಮುತ್ತ ಹುಡುಕಾಡಿದರೂ ಪತ್ತೆ ಯಿಲ್ಲ. ಆತನಿಗಾಗಿ ಇನ್ನೆಷ್ಟು ಹೊತ್ತು ಕಾಯಬೇಕೋ ಎಂದುಕೊಳ್ಳುತ್ತ ಅತ್ತಿತ್ತ ನೋಡುವುದರೊಳಗಾಗಿ ವೇದಿಕೆಯಿಂದ ಅವನ ಉಚ್ಚಸ್ವರ ಮೊಳ ಗಿತು. ತಕ್ಷಣ ದಿಟ್ಟ ಅತ್ತ ಹೊರಳಿಸಿದರೆ ಅವನು ಭಾಷಣ ಬಿಗಿಯುತಿದ್ದಾನೆ!

ಅರೆರೆ ! ಹುಡುಗ !

ಹರೀಶ ತಮಾಷೆ ನೋಡುತ್ತಾ ನಿಂತ. ಮನಸ್ಸು ಪ್ರಫುಲ್ಲವಾಯಿತು.

ಇಡೀ ಪಶ್ಚಿಮದ ನಾಗರೀಕತೆಯನ್ನು ವಾಚಾಮಗೋಚರವಾಗಿ ತೆಗಳಿ ಅವರ ಧೂರ್ತತೆಯನ್ನು ಕಟುವಾಗಿ ಟೀಕಿಸಿದ. ಮುಖ್ಯವಾಗಿ ಬ್ರಿಟನ್ನಿನ ವರ್ಣಭೇದ ನೀತಿಯನ್ನು ಮುಂದಿಟ್ಟು, ದುಷ್ಟ ಪ್ರವೃತ್ತಿಯನ್ನು ಖಂಡಿಸಿ ಲೀಲಾ ಖೇಲನದಿಂದ ಅವರ 'ತಿಥಿ' ಮಾಡಿ ರೊಚ್ಚು ತೀರಿಸಿಕೊಂಡ. ಉಚ್ಚಕಂಠದಿಂದ ಅವಿರಲ ವಾಗ್ಝರಿ ಹರಿಯುವುದರಲ್ಲಿ ಒಂದು ಸೊಗಸಿತ್ತು.

ಬಿಳಿಯರ ಮುಖಗಳು ಮನೋವೇಗದಿಂದ ಕೆಂಪು ತಳೆದುವು.

ಕೊಸಾಂಬಿ ಸವಾಲು ಹಾಕಿದ,

"ನಿಜವಾಗಿಯೂ ನಿಮ್ಮಲ್ಲಿ ಸಂಸ್ಕೃತಿ ಎಂಬುದು ಕಿಂಚಿತ್ತಾದರೂ ಇದೆಯೆ? ದಯೆ ದಾಕ್ಷಿಣ್ಯಗಳಿವೆಯೇ ? ನಮ್ಮಲ್ಲಿಗೆ ಬಂದಿರಿ. ಮೋಸದಿಂದ ರಾಜ್ಯವಾಳಿದಿರಿ. ಮೋಸ ಕೃತ್ರಿಮ ಅನಾಚಾರಗಳಿಂದ ನಿಮ್ಮ ಹೊಟ್ಟೆ ತುಂಬಿಕೊಂಡಿರಿ. ಇಂಥ ಹೀನ ಜನ ಇನ್ನೆಲ್ಲಿಯಾದರೂ ಇದ್ದಾರೆಯೆ ? ನಾಯಿ ಬೆಕ್ಕುಗಳನ್ನು ಮುದ್ದಾಡುವ ನೀವು ಮನುಷ್ಯರಲ್ಲಿ ವರ್ಣಭೇದ ತೋರುತ್ತೀರಿ. ಇದು ನಾಗರಿಕತೆಯೆ ? ಇದು ಸಂಸ್ಕಾರವೇ ? ಇದು ಮುಂದುವರಿದ ದೇಶವೇ ?"

ಕೊಸಾಂಬಿ ಹೆಂಗಳೆಯರ ಕಡೆ ತಿರುಗಿ ಅರಚಿದ "ನಿಮ್ಮಲ್ಲಿ ಶುಚಿ ಎಂಬುದಿದೆಯೆ? ಶೀಲ ಎಂಬುದಿದೆಯೇ ನೀವು ಸ್ನಾನ ಮಾಡಿದ್ದು ಎಂದೋ? ಬಟ್ಟೆಯೊಗೆದು ಇನ್ನೆಂದೊ ? ಒಂದೆರಡು ಹನಿ ನೀರು ಮುಟ್ಟಿದರೂ ಸಾಕು ದಿವ್ಯ ಸ್ನಾನ ಎಂದು ಬಿಡುತ್ತೀರಿ !"

"ಛೀಃ ! ಇಲ್ಲವೇ ಇಲ್ಲ. ನಾವು ಚೊಕ್ಕವಾಗಿ ಸ್ನಾನ ಮಾಡುತ್ತೇವೆ!"

"ನೀವು ಎಂದಾದರೂ ಮಾಡಿದ್ದೀರಾ....ಹೇಳಿ ?"

"ಎಂದಾದರೂ ಏಕೆ ?.....ಇಂದೇ ಮಾಡಿದ್ದೇವೆ !"

"ಇಂದು....?"

"ಹೌದು ಇಂದೇ !"

"ಬಹಳ ಹಿಂದೆ !"

ಒಮ್ಮೆಲೇ ಗೊಳ್ಳನೆ ನಗುವಿನಲೆಯೆದ್ದಿತು.

ಪತ್ರಿಕೆಗಳಲ್ಲಿ ಟೆಲಿವಿಷನ್‌ಗಳಲ್ಲಿ ಭಾಷಣ ಮಂದಿರಗಳಲ್ಲಿ ಕೊರಬೀಳದಂತಹ ವಿಷಯುಗಳನ್ನೆಲ್ಲಾ ಕೊಸಾಂಬಿ ಹೊರಹಾಕಿದ. ಶೈಲಿ ಅತ್ಯಂತ ಸರಳವಾಗಿದ್ದರೂ ಕಂಠ ಕಟುವಾಗಿತ್ತು. ಬ್ರಿಟನ್ನಿನ ಪ್ರಭುತ್ವವನ್ನು ಛೀಃಮಾರಿ ಮಾಡಿ ರಾಣಿಯ ಪದಚ್ಯುತಿಗೆ ಸರಾಗವಾಗಿ ಕರೆ ನೀಡಿದ!

ಆ ರಸಮಯ ಸನ್ನಿವೇಶ, ಶ್ರೋತೃಗಳ ಪ್ರಶ್ನೆಗಳ ಚಕಮಕಿ, ಮನಃಪ್ರಾಣಗಳನ್ನು ಚೇತನಗೊಳಿಸಿದರೂ ಅವನು ಅಷ್ಟು ಮುಂದೆ ಹೋಗಬಾರದಿತ್ತು ಎನಿಸಿ ಸ್ವಲ್ಪ ಅಸಮಾಧಾನದಿಂದ ಘಳಿಗೆ ಘಳಿಗೆಗಳನ್ನೆಣಿಸತೊಡಗಿದ ಹರೀಶ. 'ಬಾಬಿ'ಗಳು (ಲಂಡನ್ ಪೋಲೀಸರು) ಅಲ್ಲಲ್ಲೇ ಸುತ್ತಾಡಿ ತುಂಬಿದ ಜನಗಳ ಮಧ್ಯೆ ಸುಸುಳಿ ಸದ್ದುಗದ್ದಲವನ್ನು ಅಡಗಿಸುತ್ತ ಭಾಷಣಕಾರನ ಸುತ್ತಮುತ್ತ ಸುಳಿದಾಡುತಿದ್ದಾರೆ... ಆದರೆ ಅವರು ಜನರಿಗೆ ಗದ್ದಲ ಮಾಡದಂತೆ ವಿನಂತಿಸಿಕೊಳ್ಳುತಿದ್ದರಲ್ಲದೆ ಭಾಷಣಕಾರನಿಗೆ ಅಡ್ಡಿಯಾಗದಂತೆ ಮಂದಿಯುನ್ನು ದೂರ ದೂರ ಇಡುತಿದ್ದಾರೆ!

ಕೊಸಾಂಬಿಯ ಗಮನ ಬ್ರಿಟನ್ನಿನ ಪ್ರಭುತ್ವದಿಂದ ಸರಿದು ವಿಶ್ವವ್ಯಾಪಿಯಾಗತೊಡಗಿತು ನಾನಾ ಸಂಪ್ರದಾಯಗಳನ್ನೂ, ರಾಜಕೀಯ ಪ್ರಾಕಾರಗಳನ್ನೂ, ಸಾಮಾಜಿಕ ಕ್ಲೈಬ್ಯವನ್ನೂ ಅಲ್ಲಗಳೆದ. ಅವನ ಇಂಗ್ಲೀಷ್ ಪದಪುಂಜಗಳ ಧಾರೆಯಲ್ಲಿ ಆಂಗ್ಲೇಯರು ಮಿಂದು ಹರ್ಷಿತರಾಗುತ್ತಿದ್ದುದನ್ನು ಕಂಡು ಹರೀಶ್ ಪುಳಕಿತನಾದ

* * * *

ಕೊಸಾಂಬಿ ವೇದಿಕೆಯಿಂದ ಜಿಗಿದು ಜನಜಂಗುಳಿಯಲ್ಲಿ ಕರಗಿಹೋದ.

ಅನಂತರ ವೇದಿಕೆ ಏರಿದವರಿಗಂತೂ ಇತಿಮಿತಿಯೇ ಇಲ್ಲ. ನೋಡು ನೋಡುತಿದ್ದಂತೆ ಹತ್ತಾರು ಕಡೆ ಧ್ವನಿ ಮೊಳಗಹತ್ತಿತು, ಆಂಗ್ಲೇಯರು, ಆಫ್ರಿಕನ್ನರು, ಪಾಕೀಸ್ತಾನಿಗಳು, ಅರಬ್ಬರು ವೇದಿಕೆಗಳನ್ನೇರಿ ಮನಸ್ಸಿಗೇ ಅರಚಿಕೊಳ್ಳತೊಡಗಿದರು. ವೇದಿಕೆಯ ಬಳಿ ಬಾಬಿಗಳು ಸುತ್ತಾಡಿ ಭಾಷಣಕಾರರಿಗೆ ಅಡ್ಡಿಯಾಗದಂತೆ ನೋಡಿಕೊಳ್ಳುತಿದ್ದರು. ಆದರೂ, ಬಿಡದೆ ಶ್ರೋತೃಗಳನೇಕರು ಕಿಡಿಗೇಡಿತನದ ಪ್ರಶ್ನೆಗಳನ್ನು ಹಾಕಿ ಭಾಷಣಕಾರರನ್ನು ಪೇಚಿಗೆ ಸಿಕ್ಕಿಸುತಿದ್ದುದಲ್ಲದೆ ತಿರುಗುಬಾಣಗಳ ಹೊಡೆತವನ್ನೂ ಸಹಿಸುತಿದ್ದಾರೆ. ಬರಬರುತ್ತಾ ಸ್ಪೀಕರ್ಸ್ ಕಾರ್ನರ್ ಖಳೆಯೇರುತ್ತಾ ಬಂತು. ಜನ ಒತ್ತಡವು ಘಳಿಗೆ ಘಳಿಗೆಗೂ ಹೆಚ್ಚುತಿತ್ತು.

ಸೋಫಿನ ಪೆಟ್ಟಿಗೆಯಮೇಲೆ ನಿಂತು ಮನಸ್ವೀ ಮಾತಾಡಿದವರೂ ಉಂಟು. ಗಂಭೀರವಾಗಿ ವಿಚಾರಪೂರ್ಣವಾಗಿ ಭಾಷಣ ಮಾಡಿದವರೂ ಉಂಟು. ತಂತಮ್ಮ ಸಾಮರ್ಥ್ಯ ವಾಕ್ಚಾತುರ್ಯ ಧೀಶಕ್ತಿಗಳನ್ನು ವೈವಿಧ್ಯ ಪೂರ್ಣವಾಗಿ ಪ್ರದರ್ಶಿಸಿದವರೂ ಉಂಟು.

ನೋಡುವ ಕಣ್ಣುಗಳಿಗೆ ಸುಗ್ಗಿಯಾದರೆ ಕೇಳುವ ಕಿವಿಗಳಿಗೆ ಹುಗ್ಗಿ.

ಮಗದೊಬ್ಬ ನೀಗ್ರೊ ವಿಚಾರಪೂರ್ಣವಾಗಿ ಮಾತಾಡುತ್ತ ಆಂಗ್ಲೇಯರಿಗೆ ಸವಾಲು ಹಾಕಿದ "ನಿಮ್ಮಂತಹ ಕಿರುಬ ಜಾತಿಯ ಕುನ್ನಿಗಳು ಬೇರೆಲ್ಲಾದರೂ ಇದ್ದಾರೆಯೆ ?"

"ನಾವು ನಿಮಗೆ ಸ್ವಚ್ಛಂದವಾಗಿ ಮಾತಾಡಲು ಅವಕಾಶ ನೀಡಿದ್ದೇವೆ. ರಷ್ಯದಲ್ಲಾಗಿದ್ದಿದ್ದರೆ ನಿಮ್ಮನ್ನು ಕತ್ತಲುಮನೆಗೆ ನೂಕುತಿದ್ದರು!" ಎಂದು ಶ್ರೋತೃಗಳ ಗುಂಪಿನಿಂದ ಕೆಂಪು ಮೊಗದ ಚಿರಂಜೀವಿ ದೀಪ್ತ ಸ್ವರದಿಂದ ಮಾರುತ್ತರ ನೀಡಿದ.

ಮಗದೊಬ್ಬ ರಘುಂಕೃತ ಜಾಗಟೆಯಂತೆ ಉಚ್ಚಸ್ವರವನ್ನು ಹರಿ ಹಾಯಿಸಿದ "ಅಷ್ಟೇ ಅಲ್ಲ, ನಿಮಗೆ ಗುಂಡೇಟು ಬೀಳುತಿತ್ತು!"

"ಅದು ಎಷ್ಟೋ ಕ್ಷೇಮ ! ಇಲ್ಲಿ ನೀವು ಹುಚ್ಚಾಸ್ಪತ್ರೆ ಕಾಣಿಸಿದರೆ ಆಶ್ಚರ್ಯವಿಲ್ಲ !"

ಶ್ರೋತೃಗಳ ನೆಲೆಯಿಂದ ನೂರಾರು ಗೆಜ್ಜೆಸರಗಳನ್ನು ಒಂದೇ ಬಾರಿಗೆ ಅಲುಗಿಸಿದಂತೆ ನಗುವಿನಲೆಯೆದ್ದಿತು.

"ನಿಮ್ಮ ಸಂಸ್ಕೃತಿ ನಿಂತಿರುವುದೇ ಪರಪೀಡನೆಯ ತಳಹದಿಯ ಮೇಲೆ ಹೊಟ್ಟೆತುಂಬಿಕೊಳ್ಳುವುದಕ್ಕಾಗಿ ಏನೆಲ್ಲಾ ಮಾಡುವಿರಿ ನೀವು !"

"ಹೊಟ್ಟೆ ತುಂಬುವುದಕ್ಕಾಗಿ ಅಲ್ಲ. ನಿಮ್ಮಂತ ಸಂಸ್ಕಾರಹೀನರನ್ನು ಮೇಲೆತ್ತುವುದಕ್ಕಾಗಿ ಬ್ರಿಟಿಷರ ಸಹವಾಸದಿಂದ ನಿಮ್ಮ ಜ್ಞಾನ ಭಂಡಾರ ವೃದ್ಧಿಯಾಗಲಿಲ್ಲವೇ ? ಎಲ್ಲೋ ಅಂಧಕಾರಕೂಪದಲ್ಲಿ ಮುಳುಗಿದ್ದ ನೀವು ಈಗ ಬೆಳಕಿಗೆ ಬಂದಿದ್ದೀರಿ ! ಗುರುವಿಗೆ ತಿರುಮಂತ್ರ ಹೇಳುವ ವ್ಯವಧಾನವನ್ನು ಬದಿಗಿಟ್ಟು ಯೋಚಿಸಿ ಮಾತಾಡಿರಿ ! ಇದು ಆಟದ ಬಯಲು ಮಾತ್ರವಲ್ಲ ಯೋಚಿಸುವ ನೆಲೆಯೂ ಹೌದು !"

"ಹಾಂ....!"

"ಕೇಳಿ, ಕೇಳಿ !"

"ಓ ! ನಮ್ಮನ್ನು ಬೆಳಕಿಗೆ ತರುವ ಮಾತಿರಲಿ. ಹೆಡೆಮುರಿ ಕಟ್ಟಿ ಕತ್ತಲೆಯಲ್ಲಿ ಅದುಮಿಟ್ಟವರು ನೀವು ! ನಿಮಗೆ ಧರ್ಮಾಧರ್ಮಗಳ ಪರಿಭೇದವಿಲ್ಲ. ನಿಮ್ಮ ಆತ್ಮಶ್ರೀಯನ್ನು ಕೊಚ್ಚೆಯಲ್ಲಿ ಅದ್ದುವ ಪಟಿಂಗರು ಶ್ವಪಚರು ! ನಿಮಗೆ ನಾಗರಿಕತೆ ಎಂಬುದು ಇನ್ನೊಂದು ಜನ್ಮಕ್ಕೂ ಬಾರದು ! ನಿಮ್ಮ ರಾಷ್ಟ್ರೀಯ ಸ್ಥಾನಮಾನಗಳೆಂದರೆ ಪರಂಗಿ ಹಣ್ಣು !"

ಕೆಪನು ಕಣ್ಣುಗಳನ್ನರಳಿಸಿ ಬಾಯಿ ಕಿಸಿದು ತಿರಸ್ಕಾರ ಪೂರ್ವಕವಾಗಿ ಮಾತಾಡುತಿದ್ದರೆ ಸುತ್ತುವರಿದು ನಿಂತು ಶ್ರೋತೃಗಳು ಪೆದ್ದುಪೆದ್ದಾಗಿ ನಗುತಿದ್ದರು.

ಬಿಳಿಮೊಗದ ಮಂದಿ ಕೆಂಪು ತಳೆಯುವ ತನಕ ಭಾಷಣ ಮಾಲೆಗಳು ನಡೆದುವು.

ಜನಗಳ ಗುಂಪಿನಿಂದ ಹೊರಬಿದ್ದು ಕೊಸಾಂಬಿ ಸನಿಹಕ್ಕೈತಂದ. ಕಾಳ ಮೇಘದಲ್ಲಿ ಸೆಳೆಮಿಂಚು ಸುಳಿಯುವಂತೆ ಕಾಳವರ್ಣದ ಮುಖಮಂಡಲದಲ್ಲಿ ಬಿಳಿಯ ಹಲ್ಲುಗಳು ಮೈದೋರಿದುವು. ಹರೀಶ ಹೃತ್ಪೂರ್ವಕವಾಗಿ ಕೈಕುಲುಕಿ ಅಭಿನಂದಿಸಿದ.

"ನಿಜವಾಗಿಯೂ ನಿನ್ನ ಭಾಷಣ ಚೆನ್ನಾಗಿತ್ತು."

ಕೆನ್ನೆ ತುಟಿಗಳಲ್ಲಿ ಹಸನಾದ ತಿಳಿನಗೆ ಹರಿಸಿದ ಕೊಸಾಂಬಿ.

"ನಿಜವಾಗಿಯೂ ಚೆನ್ನಾಗಿತ್ತೆ ?"

"ಖಂಡಿತವಾಗಿಯೂ....ಅದರಲ್ಲಿ ಅನುಮಾನವೇ ಇಲ್ಲ."

"ಒಂದೇ ಬಾಣಕ್ಕೆ ನಾಲ್ಕಾರು ಹಕ್ಕಿ !" ಗೆಳೆಯನ ಕೈಯನ್ನು ಬಿಗಿಯಾಗಿ ಅದುಮಿ ಹಿಡಿದುಕೊಂಡು ಕೊಸಾಂಬಿ ಆನಂದೋನ್ಮತ್ತನಾಗಿ ಮುಂದುವರಿದ "ಇದರಿಂದ ಮುಖ್ಯವಾಗಿ ಕೊಳಕು ಮನಸ್ಸಿನ ಬ್ರಿಟಿಷರಿಗೆ ಒಂದು 'ಪ್ರಿಕ್' ಕೊಟ್ಟದ್ದಷ್ಟೇ ಅಲ್ಲ, ಶ್ರೋತೃಗಳಿಗೆ ಮನರಂಜನೆಯುಂಟುಮಾಡುವುದರೊಂದಿಗೆ ನಮ್ಮ ಸಂಕಷ್ಟಗಳನ್ನು ತಿಳಿಯಹೇಳಿದಂತಾಯಿತು. ಮೇಲಾಗಿ ಭಾಷಣ ಮಾಡುವುದನ್ನು ಪ್ರಾಕ್ಟೀಸ್ ಮಾಡಿದಹಾಗೂ ಆಯಿತು. ಮನಸ್ಸಿಗೆ ನೆಮ್ಮದಿಯನ್ನು ಪಡೆದುಕೊಂಡ ಹಾಗೂ ಆಯಿತು."

"ಭಲೆ !"

ಕೊಸಾಂಬಿ ವಿಜಯೋತ್ಸಾಹದಿಂದ ಉಬ್ಬಿದ.

"ಈ ದೇಶದಲ್ಲೇ ಇದ್ದು ಇವರ ಮೇಲೆಯೇ ಹುಚ್ಚಾಪಟ್ಟೆ ಮಾತಾಡಲು ಅವಕಾಶವಿರುವುದೂ ಸಹ ಒಂದು ಮೋಜು !"

ಇಬ್ಬರೂ ಕೈಕೈಹಿಡಿದುಕೊಂಡು ಹೆಜ್ಜೆ ತೆಗೆದರು.

"ಬ್ರಿಟನ್ನಿನ ವೈಶಿಷ್ಟ್ಯಗಳಲ್ಲಿ ಹೈಡ್‌ಪಾರ್ಕಿನ ಸ್ಪೀಕರ್ಸ್ ಕಾರ್ನರ್ ಒಂದು. ಇದು ಜಗತ್ತಿನ ಗಮನವನ್ನು ಸುಲಭವಾಗಿ ಸೆಳೆಯುತ್ತದೆ. ಸರಕಾರಕ್ಕೂ ಸಹ ಪ್ರಜಾಸತ್ತೆಯಲ್ಲಿ ವಾಗ್ಝರಿಗೆ ಏನಾದರೂ 'ಇತಿಮಿತಿ' ಇದೆಯೆ ಎಂಬುದನ್ನು ಪರಿಶೀಲಿಸಲು ಒಳ್ಳೆಯ ಅವಕಾಶ."

"ನಿಜ.....ನಿಜ."

"ಹೊರ ವಲಯದಲ್ಲಿ ಇಷ್ಟೆಲ್ಲ ವಿಷಯಗಳನ್ನು ಹೊರಕಕ್ಕಲು ಯಾರಿಗೆ ಹಕ್ಕುಂಟು ? ಹುದುಗಿದ ವಿಷಯವನ್ನು ಹೊರತರಲು ಪ್ರಜಾಸತ್ತೆಗೂ ಇದು ಒಳ್ಳೆಯ ಅವಕಾಶ."

"ಅಂದರೆ ಇದಕ್ಕೆ ಯಾರಾದರೂ ಬೆಲೆ ಕೊಟ್ಟರಷ್ಟೆ ?"

"ಇಂದು ಬೆಲೆ ಬಾರದಿದ್ದರೆ ಹೋಗಲಿ, ಎಂದಾದರೂ ಬಂದೇ ಬರುತ್ತೆ. ಮುಖ್ಯವಾಗಿ ವಿಷಯ ಜನಜನಿತವಾಗಲೇ ಬೇಕು."

"ಅದೇನೋ.....ನಿಜ."

ಬಹಳ ಮಟ್ಟಿಗೆ ಬ್ರಿಟನ್ನಿನ ಮಹಾ ವಾಗ್ಮಿಗಳೆಲ್ಲರೂ ಇಲ್ಲಿ ಭಾಷಣ ಮಾಡಿ ಪ್ರಸಿದ್ಧರಾಗಿ ಪ್ರಬುದ್ಧರಾದವರು !"

ಇಬ್ಬರ ಮುಖದಲ್ಲೂ ಎಳೆನಗು ಅರಳಿತು.

ಕೊಸಾಂಬಿ ಉತ್ಸಾಹದಿಂದ ಮುಂದುವರಿದ ಪ್ರತಿ "ಭಾನುವಾರಕ್ಕೊಂದು ಖಳೆ. ಕಾಸು ಖರ್ಚಿಲ್ಲದೆ ಅಭ್ಯಾಸ. ವಿದೇಶೀ ಪ್ರವಾಸಿಗಳಿಗೆ ನಾನಾ ವಿಚಾರಗಳಲ್ಲಿ ತಿಳಿವಳಿಕೆ ಕೊಡಬಹುದಾದ ಪ್ರಧಾನ ಲಕ್ಷ್ಯ. ಒಟ್ಟಿನಲ್ಲಿ ಈ Speakers' Corner ಎಲ್ಲರಿಗೊಂದು 'Must'"

"ನಿಜ, ಉದ್ದೇಶ ಒಳ್ಳೆಯದು."

ಹಾದಿ ಸಾಗುತಿತ್ತು.

ದಿಗಂತದಿಂದ ದಿಗಂತದವರೆಗೆ ಕಾಳಿಕೆಯ ಹೆದ್ದೆರೆ ತುಂಬಿ ಹರಡಿತು. ಮೆಲ್ಲಮೆಲ್ಲನೆ ಹೈಡ್‌ಪಾರ್ಕಿನ ಜನಸಂದಣಿಯೂ ಕರಗ ಹತ್ತಿತು. ಪೂರ್ವ ದಿಗಂತದಲ್ಲಿ ಉದಯಿಸಾದ ಚಂದ್ರ ಮಾಂಗಲ್ಯದ ಮಳೆಗರೆಯುತ್ತಾ ಮೇಲೇರುತ್ತಿದ್ದ.

ಹರೀಶನ ಕೈ ಹಸ್ತವನ್ನು ಇನ್ನಷ್ಟು ಅದುಮಿ ಹಿಡಿದು ಕೊಸಾಂಬಿಯೆಂದ,

"ಮುಂದಿನ ಭಾನುವಾರ ನಿನ್ನ ಭಾಷಣ ಹರೀಶ್ !"

"ವಿಷಯ.....Aparthied !"

ಇಬ್ಬರ ಮುಖದಲ್ಲೂ ಹೂನಗೆ ಅರಳಿತು.

— o —

# ಮಾ-ಶೋಯಿ

ಅದೊಂದು ಸುಂದರ ಶೀತಲ ಸಂಧ್ಯೆ.

ತಂಗಾಳಿ ತಣ್ಣಗೆ ತೀಡುತಿತ್ತು.

ಶಾಲೆ ಮುಚ್ಚಿ ಒಂದು ತಾಸು ಉರುಳಿದರೂ ಮಾ-ಶೋಯಿ ಮನೆಗೆ ಹೊರಡಲಾಗಲಿಲ್ಲ. ಆಫೀಸಿನಲ್ಲಿ ಹಿರಿಯ ಉಪಾಧ್ಯಾಯಿನಿ ವಾರದ ವ್ಯವಹಾರವನ್ನೆಲ್ಲ ಹಚ್ಚಿಕೊಂಡು ಕುಳಿತುದುದರಿಂದ ಅವಳಿಗೆ ನೆರವು ನೀಡಲು ಅಲ್ಲೇ ಉಳಿದಳು ಶ್ರೀಮತಿ ಚಾಲೂ-ಲಿನ್ ಕೆಲಸ ಮಾಡುತ್ತ ಕಸಿಕರ ತುಂಬಿದ ವಾಣಿಯಲ್ಲಿ "ನಿನಗೆ ತೊಂದರೆಯಾಯಿತೇನೋ" ಎಂದಳು.

"ಪರವಾಯಿಲ್ಲ" ವಿಶ್ವಸ್ತಭಾವದಿಂದ ಮೆಲುನಗೆ ಬೀರಿದಳು ಮಾ-ಶೋಯಿ.

ತೊಟ್ಟ ಉಡುಪು ಚಿತ್ರಖಚಿತ ವಾಸಂತೀ ದುಕೂಲದಂತೆ ವರ್ಣರಂಜಿತವಾಗಿದ್ದುದರಿಂದ ವನಸುಂದರಿಯಂತೆ ಕಂಗೊಳಿಸುತಿದ್ದಳು.

ಹೊತ್ತು ಉರುಳಿತು. ಸೂರ್ಯ ತಂಗಿದ. ಜನ ಜೀವನ ಉಲ್ಲಾಸಗೊಳ್ಳುತ್ತಿದೆ. ಹುಡುಗರು-ಮಕ್ಕಳು ಅಲ್ಲಲ್ಲಿ ಆಟವಾಡುತ್ತಿರುವುದು ಗೋಚರಿಸುತಿತ್ತು. ಮನೆಯಲ್ಲಿ ತಾಯಿ ಕಾದಿರುತ್ತಾಳೆಂಬ ಯೋಚನೆಯಿಂದ ನಡಿಗೆಯನ್ನು ಚುರುಕುಗೊಳಿಸಿದಳು ಮಾ-ಶೋಯಿ.

ದಿನವೂ ಶಾಲೆ ಮುಚ್ಚುವುದು ನಾಲ್ಕು ಗಂಟೆಗೆ; ನಾಲ್ಕೂವರೆಗಾಗಲೇ ಮನೆ ಮುಟ್ಟಿಯಾಗಿರುತಿತ್ತು. ಇಂದು ಸಹಜವಾಗಿ ತಾಯಿ ಆತಂಕಗೊಳ್ಳುವಳೆಂಬುದು ಗೊತ್ತಿತ್ತು. ಅಂತಲೇ ಅವಳ ಪ್ರಶಸ್ತ ಹೆಜ್ಜೆಗಳು ವೇಗಗಾಮಿನಿಯಾದುವು. ಹತ್ತು ಮಾರು ನಡೆಯುವುದರೊಳಗಾಗಿ ಹಿಂದಿನಿಂದ ಹರ್ಷಪೂರ್ಣವಾದ ಉದ್ಗಾರ ಕೇಳಿ ಬಂತು.

"ಹಾಯ್ !"

ಮಾ-ಶೋಯಿ ಚಕಿತಳಾಗಿ ದನಿ ಬಂದೆಡೆಗೆ ನೋಟ ಹೊರಳಿಸಿದಳು. ನೋಡೆ ಚಂಗ್-ಚಾಂಗ್ ಹರ್ಷೋನ್ಮತ್ತನಾಗಿ ನಿಂತಿದ್ದ.

"ಓ....ಯಾವಾಗ ಬಂದೆ ?" ನಗು ಮುಖದಿಂದ ಕೇಳಿದಳು ಮಾ-ಶೋಯೆ. ಹೃದಯ ಆನಂದದ ಆಗರವಾಯಿತು.

"ಮಧ್ಯಾಹ್ನ ಬಂದೆ. ಶಾಲೆಯ ಬಳಿ ನಿನಗಾಗಿ ಕಾದು ಕಾದು ಸಾಕಾಯ್ತು. ನಾನು ಮರದಡಿಯಿಂದ ಎದ್ದು ಬರುವುದರೊಳಗಾಗಿ ಎಷ್ಟು ದೂರ ಬಂದಿದ್ದಿ ? ಏನಷ್ಟು ಓಡುತ್ತಿ ?"

"ಹೊತ್ತಾಗಿ ಬಿಟ್ಟಿದೆ."

"ಅದೇಕೆ ಇಷ್ಟು ಹೊತ್ತು ?"

"ವಾರದ ಕೆಲಸವನ್ನೆಲ್ಲಾ ಮಾಡಿದ್ದಾಯ್ತು. ಶ್ರೀಮತಿ ಚಾಲೂ-ಲಿನ್‌ಳಿಗೆ ಶಾಲೆಯಲ್ಲಿ ಸಹಾಯಮಾಡುವುದಿತ್ತು."

"ಅಂತೂ-ಇಂತೂ ಒಂದು ಕೆಲಸ ಹಿಡಿದೇ ಬಿಟ್ಟೆ. ನಾನೇ ಇನ್ನೂ ಹುಡುಕಿಕೊಳ್ಳುವುದರಲ್ಲಿರುವೆ.....ತುಂಬಾ ಜಾಣೆ ನೀನು."

"ಇದು ನಾನು ಓದಿದ ಶಾಲೆ. ನನ್ನ ಸ್ವಭಾವವನ್ನು ಶ್ರೀಮತಿ ಚಾಲೂ-ಲಿನ್ ಮೊದಲಿಂದ ಮೆಚ್ಚಿಕೊಂಡಿರುವುದರಿಂದ ತಕ್ಷಣ ಕೆಲಸ ಸಿಕ್ಕಿತು."

ಇಬ್ಬರೂ ಪರಸ್ಪರ ರಾಗಾನುರಾಗದಿಂದ ವೀಕ್ಷಿಸಿದರು. ಕಣ್ಣುಗಳಲ್ಲಿ ಮಿಂಚಿದ ದಿವ್ಯ ಪ್ರಭೆ ಆತ್ಮಾನಂದವನ್ನು ಹೊರ ತಂದಿತು. ಚಂಗ್-ಚಾಂಗ್ ನಗುನಗುತ್ತ ಅಂದ,

"ಬಾ, ಒಂದಿಷ್ಟು ಬಾರ್ ಕಡೆ ಹೋಗಿ ಬರೋಣ."

"ಇಂದು ಆಗುವುದಿಲ್ಲ. ಈಗಲೇ ಹೊತ್ತಾಗಿದೆ. ಮನೆಯಲ್ಲಿ ತಾಯಿ ಕಾದಿರುತ್ತಾಳೆ. ಅವಳಿಗೆ ಹೇಳಿ ಬಂದಿಲ್ಲ.

"ಅನಂತರ ಹೇಳಿದರಾಯಿತು."

"ನೀನೇ ಮನೆಗೆ ಬಂದರಾಗದೇ ?"

"ಬರಬಹುದಾಗಿತ್ತು. ಚಂಗ್‌ಕಿಂಗ್‌ನಲ್ಲೆ ತೊಟ್ಟು ಬಟ್ಟೆ; ಪಯಣ ದಿಂದ ಕೊಳೆಯಾಗಿವೆ."

"ಆದರಾಯಿತು, ಬಾ."

ಜತೆಗೂಡಿ ನಡೆಯುತ್ತ ಚಂಗ್-ಚಾಂಗ್ ಹೇಳಿದ "ನನ್ನನ್ನು ಹಾಂಗ್ ಚಾವ್ಗೆ ಬರಬೇಕೆಂದು ನನ್ನ ಅಕ್ಕನ ಒತ್ತಾಯ. ಆದರೆ, ನನಗಿರುವುದು ನಾಲ್ಕೇ ದಿನ ರಜೆ. ಅಲ್ಲಿಗೆ ಹೋದರೆ ನಿನ್ನನ್ನು ನೋಡ ಲಾಗುವುದಿಲ್ಲವೆಂದು ಆ ಯೋಚನೆ ಬಿಟ್ಟುಬಿಟ್ಟೆ."

"ಆದರೆ, ಆಕೆ ಸಿಟ್ಟುಗೊಳ್ಳುವರೇನೋ."

"ಇಲ್ಲ; ಇನ್ನೊಮ್ಮೆ ಬರುವುದಾಗಿ ಹೇಳಿದ್ದೇನೆ."

"ಈ ಸಲ ಶಾಲೆ ಬಿಟ್ಟನಂತರ ಏನು ಮಾಡುತ್ತಿ ?"

"ನನಗದೇ ಯೋಚನೆಯಾಗಿದೆ, ಹಣದ ಕೊರತೆಯಿಲ್ಲದಿದ್ದರೆ ವಿಶ್ವವಿದ್ಯಾಲಯ ಸೇರಬಹುದಾಗಿತ್ತು."

"ಹೇಗಾದರೂ ಹಣದ ಏರ್ಪಾಟು ಮಾಡಿಕೋ...."

"ಅದೇ.....ಕಷ್ಟ."

"ನಿನ್ನ ಚಿಕ್ಕಪ್ಪ ಆಸ್ತಿ ವಿಭಾಗ ಮಾಡುತ್ತಾನೆ, ಎಂದೆಯಲ್ಲಾ ?"

"ಆಸ್ತಿ ಬಿಟ್ಟುಕೊಡುವುದೇನೋ ಸರಿ. ಆದರೆ ಅಲ್ಲೇ ಬಂದಿರು ಎನ್ನುತ್ತಾನೆ."

"ಇದಿರುವುದೆಲ್ಲಿ ?"

"ವೇಂತ್‌ಸಿನ್‌ನಲ್ಲಿ."

"ಓ....ಹೋ !"

* * *

ಮನೆ ಹತ್ತಿರ ಬರುತ್ತಲೂ ಇನ್ನೊಮ್ಮೆ ಬರುವುದಾಗಿ ಹೇಳಿ ಚಂಗ್–ಚಾಂಗ್ ಹೊರಟುಹೋದ. ಮಾ–ಶೋಯೆ ಮನೆ ಮುಟ್ಟಿದಾಗ ತಾಯಿ ಕುಪಿತಳಾಗಿದ್ದಳು. ಒಳ ಬರುತ್ತಲೇ ಶಾಲೆಯಲ್ಲಿ ಮುಖ್ಯೋಪಾಧ್ಯಾಯಿನಿಗೆ ಸಹಾಯ ಮಾಡಿದುದರಿಂದ ಬರುವುದು ತಡವಾಯಿತೆಂದು ಹೇಳಿಕೊಂಡರೂ ಆಕೆ ನಂಬಲಿಲ್ಲ. ಬೆಳಗಿನಿಂದ ಬಿಡುವಿಲ್ಲದೆ ಕೆಲಸ ಮಾಡಿ ಮನಸ್ಸು ವ್ಯಗ್ರವಾದುದರಿಂದ ಹಿಂದು ಮುಂದು ನೋಡದೆ ಬೈಗುಳದ ಸುರಿಮಳೆಯನ್ನು ಕರೆದಳು. ಇನ್ನು ಹೆಚ್ಚು ಮಾತುಕತೆ ಬೆಳೆಸಲು ಇಷ್ಟವಾಗದುದರಿಂದ ಮನೆಗೆಲಸದಲ್ಲಿ ನಿಮಗ್ನಳಾದಳು ಮಾ–ಶೋಯೆ.

ಮರುದಿನ ಶಾಲೆಯ ಕಡೆ ಅವಸರವಸರವಾಗಿ ನಡೆಯುತ್ತಿದ್ದಾಗ ಕಮನೀಯ ಕರೆ ಕಲ ಹಂಸಗಳ ಕ್ರೇಂಕಾರದಂತೆ ಕಿವಿಯನ್ನು ತಾಗಿತು..... "ಮಾ–ಶೋಯೆ !"

ಮಾ–ಶೋಯೆ ಆಶ್ಚರ್ಯಚಕಿತಳಾಗಿ ತಟ್ಟನೆ ಹಿಂತಿರುಗಿ ನೋಡಿದಳು. ಅನತಿದೂರದಲ್ಲಿ ಬರುತ್ತಿದ್ದ ಲೂ–ವಿ಼ಾ ನಡಿಗೆಯನ್ನು ಚುರುಕು

ಗೊಳಿಸಿದಳು ಮೈಯೆಲ್ಲಾ ಮನಸ್ಸಾಗಿ. ಗೆಳತಿಯನ್ನು ನೋಡಿ ಮಾ-ಶೋಯೆ ನಗು ಮುಖದಿಂದ ಅಲ್ಲೆ ನಿಂತಳು. ಅರಳು ಮೊಗ್ಗೆಯಂತೆ ಕಣ್ಣೆಸೆಯುತ್ತಿದ್ದ ಅವಳು ಓಡಿ ಬಂದು ಜೊತೆಗೂಡಿಕೊಂಡಳು. ಇಬ್ಬರೂ ಆತ್ಮೀಯತೆಯಿಂದ ಕೈ ಕೈ ಹಿಡಿದುಕೊಂಡು ಮುಂದುವರಿದರು.

ಲೂ-ವಿಾ ತನ್ನ ಎದೆಯ ಅಳಲನ್ನು ತೋಡಿಕೊಂಡಳು.

"ಶಾಲೆಯ ಕೆಲಸ ಹಿಡಿದು ನೀನು ಧನ್ಯಳಾದೆ. ಮುದ್ದು ಮಕ್ಕಳೊಡನೆ ಸುಖವಾಗಿ ಕಾಲ ಕಳೆಯುತ್ತಿ. ನನ್ನದು ಹಾಗಲ್ಲ, ಆಸ್ಪತ್ರೆಯಲ್ಲಿ ನರಳುವವರೊಂದಿಗೆ ದಿನವೂ ನರಳಬೇಕಾಗಿದೆ."

"ಅಷ್ಟು ಬೇಸರವೇ ?"

"ಅಲ್ಲದೆ ಏನು ? ಸದಾ ರೋಗ, ಸಾವು, ನೋವು, ನರಳುವಿಕೆ, ಗೋಳು ಇದೇ ಆಗಿದೆ. ಮನಸ್ಸಿಗೆ ಸ್ವಲ್ಪವೂ ನೆಮ್ಮದಿ ಸಿಕ್ಕುವುದಿಲ್ಲ."

ಮಾ-ಶೋಯೆ ಉತ್ಸಾಹದಿಂದ ಹೇಳಿದಳು "ಓ.....! ನನ್ನ ವೇಳೆ ನೀರು ಹರಿದು ಹೋದಂತೆ ಕಳೆಯುತ್ತದೆ."

"ನೀನು ಒಳ್ಳೆಯ ಮುಹೂರ್ತದಲ್ಲಿ ಜನ್ಮಧಾರಣೆಮಾಡಿದ್ದಿ. ನಾನು ಹುಟ್ಟಿದ್ದು ಯಾವ ವಿಷಘಳಿಗೆಯೋ...!"

"ನಿನಗೆ ಇದು ಹೊಸದು. ಮನಸ್ಸು ಹೊಂದಿಕೊಳ್ಳುವುದಿಲ್ಲವೆಂದು ತೋರುತ್ತೆ. ಕಾಲಾಂತರದಲ್ಲಿ ಹೊಂದಿಕೊಳ್ಳುವೆ ಯೋಚಿಸಬೇಡ."

"ಒಂದುವೇಳೆ ಮನಸ್ಸು ಹೊಂದಿಕೊಳ್ಳಬಹುದಾದರೂ ಸಾವು ನೋವು ಸುಧಾರಿಸುವುದಿಲ್ಲವಲ್ಲಾ ?"

"ನೀನನ್ನುವುದರಲ್ಲಿ ಖಂಡಿತ ತಥ್ಯವಿದೆ ಬೆಳಗಾದೊಡನೆ ಎಷ್ಟೊತ್ತಿಗೆ ಶಾಲೆಗೆ ಹೋಗುವೆನೋ ಎಂದು ನನ್ನ ಮನಸ್ಸು ಹಾತೊರೆಯುತ್ತಿರುತ್ತದೆ. ಅಲ್ಲಿ ಪಡೆದ ಸುಖ ಮನೆಯಲ್ಲಿ ದೊರೆಯುವುದಿಲ್ಲ" ಮಾ-ಶೋಯೆ ಮಹದಾನಂದದಿಂದ ಮುಗುಳು ನಕ್ಕಳು. ಮುಖ ಅಷ್ಟಮಿಾ ಚಂದ್ರನಂತೆ ಬೆಳಗಿತು.

ಲೂ-ವಿಾ ಅದೇ ಧಾಟಿಯಲ್ಲಿ ಮುಂದುವರಿದಳು "ನನ್ನ ಮದುವೆಯ ಬಗ್ಗೆಯೂ ಮಾತುಕತೆ ನಡೆದಿದೆ. ಅವನೊಬ್ಬ ಮುದಿಯ ; ಅವನೊಡನೆ ಸಂಸಾರ ಹೂಡುವುದು ನನಗಿಷ್ಟವೇ ಇಲ್ಲ, ವೃತ್ತಿಯೂ ದುಃಖ, ಮನೆಯಲ್ಲೂ ದುಃಖ, ಪರಿಸ್ಥಿತಿ ಹೇಗಿದ್ದೀತು. ನೀನೇ ಯೋಚಿಸಿ ನೋಡು ;

ನನ್ನ ಕಷ್ಟವನ್ನು ಹೇಳಿಕೊಂಡರೂ ಕೇಳದೆ ನನ್ನನ್ನು ಮದುವೆಗೆ ಒತ್ತಾಯಿಸುತ್ತಿದ್ದಾರೆ. ಏನು ಮಾಡಲಿ ಹೇಳು ?"

"ಆಗುವುದಿಲ್ಲವೆಂದು ಹೇಳಿ ಬಿಡು."

"ಹೇಳುತ್ತಲೇ ಇರುವೆ. ಆದರೆ, ಕೇಳಬೇಕಲ್ಲ ?"

"ನಿನಗಿಷ್ಟವಿಲ್ಲದಿದ್ದರೆ ಯಾರೇ ಒತ್ತಾಯಿಸಲೀ ಒಪ್ಪಿಕೊಳ್ಳಬೇಡ."

"ನನ್ನದೂ ಸಹ ಅದೇ ನಿಲುವು. ಆದರೆ, ಇವರೆಲ್ಲಾ ಏನು ಮಾಡಿ ಬಿಡುತ್ತಾರೋ ನನಗದೇ ಭಯ. ರಾತ್ರಿ ಮಲಗಿದರೆ ನಿದ್ದೆ ಬರುವುದಿಲ್ಲ."

"ಭಯ ಪಟ್ಟುಕೊಳ್ಳುವುದೇಕೆ ದೃಢವಾಗಿ ನಿಲ್ಲು."

ಲೂ-ವಿಸ್ ನೀಳವಾದ ನಿಟ್ಟುಸಿರು ಬಿಟ್ಟಳು, ಮುಖ ರಾಹುಗ್ರಸ್ತ ಚಂದ್ರನಂತಾಯಿತು.

*  *  *  *

ಮಾ-ಶೋಯೆ ಮತ್ತು ಲೂ-ವಿಸ್ ಶಾಲಾದಿನಗಳಿಂದಲೂ ಜೊತೆಗಾತಿಯರು. ಅಂದಿಂದಿಗೂ ಸ್ನೇಹಲತೆ ಹಚ್ಚ ಹಸುರಾಗಿ ಕೊನರಿತ್ತು. ಶಾಲಾ ದಿನಗಳನ್ನು ಕಳೆದು ಹೊರ ಬಂದ ಮೇಲೆ ಇಬ್ಬರ ಹಾದಿಯೂ ಕವಲೊಡೆಯಿತು. ಆಕೆ ನರ್ಸಾದಳು. ಇವಳು ಶಾಲಾ ಉಪಾಧ್ಯಾಯಿನಿಯಾದಳು. ಎಂದಾದರೂ ಬಿಡುವು ದೊರೆತಾಗ ಇಬ್ಬರೂ ಕೂಡುತಿದ್ದುದುಂಟು. ಆದರೆ, ಹಾಗೆ ಬಿಡುವು ದೊರೆಯುತಿದ್ದುದು ಸಹ ಅಪರೂಪವೇ.

ಈಚೆಗೆ ಜಪಾನ್ ಪರ್ಲ್‌ಹಾರ್ಬರ್ ಮೇಲೆ ಧಾಳಿ ನಡೆಸಿದಾಗ ಚುಂಗ್‌ಕಿಂಗ್‌ನಲ್ಲಿದ್ದ ಅಣ್ಣಂದಿರಿಬ್ಬರೂ ಸೇನಾ ತುಕಡಿಯಲ್ಲಿ ಮುನ್ನುಗ್ಗಿ ಹೋರಾಟಕ್ಕಿಳಿದುದು ತಿಳಿದುಬಂದಾಗ ಮಾ-ಶೋಯೆ ಅತ್ಯಂತ ದುಃಖಿಯಾದಳು. ಈ ಜೀವಮಾನದಲ್ಲಿ ಆಕೆ ಅನುಭವಿಸಿದ ಪ್ರಥಮ ದುಃಖ ಅದು. ಇಬ್ಬರೂ ಸಂಸಾರಸ್ಥರು. ಚಿಕ್ಕ ಚಿಕ್ಕ ಮಕ್ಕಳೂ ಇವೆ. ಹೋಗಿ ಬರೋಣವೆಂದರೂ ರಣರಂಗದಲ್ಲಿರುವ ಅವರ ದರ್ಶನ ದೊರೆಯುವಂತಿಲ್ಲ....

ಅದೇ ನೇರಕ್ಕೆ ವೇಂತ್‌ಸಿನ್‌ಗೆ ಹೋಗಿದ್ದ ಚಂಗ್-ಚಾಂಗ್ ಪೀಕಿಂಗಿಗೆ ಹಿಂದಿರುಗಿ ಬಂದು ಶಾಲೆಯೊಂದರಲ್ಲಿ ಕೆಲಸಕ್ಕೆ ಸೇರಿ, ವಿಶ್ವವಿದ್ಯಾಲಯದಲ್ಲಿ ಕಲಿಯುವ ಸನ್ನಾಹವನ್ನು ನಡೆಸಿದ್ದ. ಅದೊಂದು ಆಕೆಗೆ ಎಲ್ಲಿಲ್ಲದ ಸಮಾಧಾನ.

ಹತ್ತಿರ ಸಂಬಂಧಿಯಾದ ಅವನು ಕುನ್‌ಮಿಂಗ್‌ನಿಂದ ಬಂದು ನೆಲೆಸಿದ ಮೇಲೆ ಇಬ್ಬರಿಗೂ ಸ್ನೇಹದೊಂದಿಗೆ ಪ್ರೇಮವೂ ಮೊಳೆತು ಪರಸ್ಪರ ಅನುರಾಗಿಗಳಾದರು. ರಾಗಜ್ಯೋತಿ ಕುಡಿ ಕಟ್ಟಿದಂತೆ ಉರಿಯ ತೊಡಗಿತು. ಅನುಪಮ ಆನಂದಾಂಬುಧಿಯಲ್ಲಿ ಮುಳುಗಿದರು.

ಸುಖದುಃಖಗಳ ನೆಲೆಯಲ್ಲಿ ಕಮನೀಯ ಕಠೋರ ದಿನಗಳು ಎಂದಿನಂತೆಯೇ ಓಡಿದುವು

ಯುದ್ಧ ಮುಗಿದು ಅಣ್ಣಂದಿರು ಮನೆಗೆ ಮರಳಿದ ವರ್ತಮಾನ ಬಂದೊಡನೆಯೇ ಚುಂಗ್ ಕಿಂಗಿಗೆ ಅಣ್ಣಂದಿರನ್ನು ನೋಡಲು ಓಡಿದಳು ಮಾ-ಶೋಯೆ. ಒಬ್ಬ ಅಣ್ಣ ಒಂದು ಕಣ್ಣು ಕಳೆದುಕೊಂಡಿದ್ದ. ಇನ್ನೊಬ್ಬನಿಗೆ ಸಣ್ಣಪುಟ್ಟ ಗಾಯಗಳಾಗಿದ್ದುವು. ಅವರ ಶುಶ್ರೂಷೆಗಾಗಿ ಕೆಲವು ದಿನ ಅಲ್ಲೇ ನಿಂತಳು. ಅಣ್ಣಂದಿರ ಮಕ್ಕಳೊಡನೆ ದಿನಗಳು ನೀರಿನಂತೆ ಕಳೆದು ಹೋದುವು. ಅಲ್ಲಿದ್ದ ಒಂದು ತಿಂಗಳಲ್ಲಿ ಪೀಕಿಂಗಿನ ಸುದ್ದಿ ಹೆಚ್ಚೇನೂ ತಿಳಿದು ಬರಲಿಲ್ಲ. ತಿಳಿಯಬೇಕೆಂಬ ಕಾತರತೆಯೂ ಅವಳಿಗೆ ಇರಲಿಲ್ಲ.

ಹಾಂಗ್‌ಚಾವೂನಲ್ಲಿದ್ದ ಹಿರಿಯ ಅಕ್ಕ ತಮ್ಮಂದಿರನ್ನು ನೋಡಲು ಬಂದಾಗ ಕಿರಿಯ ತಂಗಿಯನ್ನು ತನ್ನೊಡನೆ ಹಾಂಗ್‌ಚಾವೂಗೆ ಎಳೆದೊಯ್ದಳು. ಅಲ್ಲೊಂದು ತಿಂಗಳಿದ್ದು ಪೀಕಿಂಗ್‌ಗೆ ಹಿಮ್ಮರಳಿದಾಗ ಆಕೆಗೆ ಮೊದಲು ತಿಳಿದು ಬಂದ ಸುದ್ದಿ ಚುಂಗ್-ಚಾಂಗ್ ಕಾಹಿಲೆ ಬಿದ್ದು ಆಸ್ಪತ್ರೆಗೆ ಸೇರಿದುದು. ವಿಷಯ ತಿಳಿದುಬಂದೊಡನೆ ಹೃದಯ ಒಡೆದು ಛಿದ್ರವಿಚ್ಛಿದ್ರವಾದಂತಾಯಿತು. ಆಗ ವೇಳೆಯು ಮೀರಿದ್ದುದರಿಂದ ಆಸ್ಪತ್ರೆಗೆ ಹೋಗಲಾಗಲಿಲ್ಲ. ಭಯ ಬೀತಿ ಕಳವಳಗಳಿಂದ ಆರ್ತಳಾಗಿ ಭಗವಂತನಿಗೆ ದೀರ್ಘ ಪ್ರಾರ್ಥನೆ ಸಲ್ಲಿಸಿದಳು, ಮಾ-ಶೋಯೆ.

* * * *

ರಾತ್ರಿ ದೀರ್ಘವಾಗಿ-ಬಲು ದೀರ್ಘವಾಗಿ ಉರುಳಿತು.

ಹೊತ್ತಿಗೆ ಮುಂಚೆ ಎದ್ದಿದ್ದರೂ ದಿನಚರಿ ಸಾಗದು.

ಕಳವಳದಿಂದಲೇ ಶಾಲೆಗೆ ಹೋಗಿ ರಿಪೋರ್ಟ್ ಮಾಡಿಕೊಂಡನಂತರ ಒರಗೆಯ ಉಪಾಧ್ಯಾಯಿನಿಗೆ ತನ್ನ ಕೆಲಸವನ್ನು ನೋಡಿಕೊಳ್ಳಲು ಕೇಳಿಕೊಂಡು ಆತುರಾತುರವಾಗಿ ಆಸ್ಪತ್ರೆಗೆ ಓಡಿದಳು, ತನುಮನಗಳು ಕಳವಳ

ಭರಿತವಾಗಿದ್ದರೂ ಕಾಲುಗಳು ವಿನೂತನ ಶಕ್ತಿಯಿಂದ ಪ್ರಭಾವಿತವಾಗಿವೆ. ತನ್ನ ಬಳಿಗೆ ಧಾವಿಸಿ ಬಂದ ಭಾವೀ ಮಡದಿಯನ್ನು ನೋಡಿ ಚಂಗ್-ಚಾಂಗ್ ಉತ್ಸಾಹಿತನಾದರೂ ತುಂಬ ನಿಶ್ಯಕ್ತನಾಗಿದ್ದ. ಕಣ್ಣುಗಳು ಗುಳಿಬಿದ್ದಿದ್ದುವು. ಮೈ ಸೊರಗಿ ಕ್ಷೀಣಿತವಾಗಿತ್ತು. ಅವನು ಅತ್ಯಂತ ಖಿನ್ನನಾಗಿ ನುಡಿದ,

"ನೀನಿಲ್ಲೇ ಇದ್ದು ಬಿಡು. ನನಗೆ ಮಲಗೀ ಮಲಗೀ ಬೇಸರವಾಗಿದೆ."

"ಈಗಾಗಲೇ ಎರಡು ತಿಂಗಳು ಕಳೆದು ಹೋಯಿತು, ನನ್ನ ಕೆಲಸದ ಗತಿ ?" ಮಾ-ಶೋಯಿ ಅತ್ಯಂತ ಆತಂಕದಿಂದ ನುಡಿದಳು.

"ಏನಾದರಾಗಲಿ."

"ಹಾಗೆಂದರೆ ಜೀವನ ಸಾಗಬೇಕಲ್ಲ ?" ನುಡಿ ಹೊರಬಿದ್ದೊಡನೆ ಚಂಗ್-ಚಾಂಗ್ ಅವಳ ಮೃದು ಹಸ್ತವನ್ನು ಅದುಮಿ ಹಿಡಿದು ವಿಜಾತೀಯವಾದ ದನಿಯಲ್ಲಿ ನುಡಿದ "ಓ.....ತಾಳಲಾರೆ. ನಾನಿಲ್ಲಿ ಒಬ್ಬನೇ ಸಾಯಬೇಕಾಗಿದೆ"

ಮಾ-ಶೋಯಿ ಮರವಟ್ಟು ನಿಂತಳು. ಏನು ಹೇಳಬೇಕೋ ಹೊಳೆಯಲಿಲ್ಲ. ಭವಿಷ್ಯದ ಚಿಂತೆ ಮನವನ್ನು ಕೊರೆಯುತಿತ್ತು. ಭಾವ ಬಂಧನ ಹೃದಯವನ್ನು ಗಾಣಕ್ಕೆ ಕೊಟ್ಟಂತೆ ಹಿಂಡುತಿತ್ತು. ಬಹುಶಃ ಆಕೆ ಎಂದೂ ಇಂತಹ ವಿಕ್ಷುಬ್ಧ ಪರಿಸ್ಥಿತಿಗೆ ಒಳಗಾಗಿರಲಿಲ್ಲವೇನೋ. ಇಂದು ಮೊಟ್ಟ ಮೊದಲಬಾರಿ ಎದುರಿಸಿದಾಗ ಬುದ್ಧಿಯೇ ಓಡಲಿಲ್ಲ. ಏನು ಮಾಡಬೇಕೋ ಹೊಳೆಯಲಿಲ್ಲ.

ಚಂಗ್-ಚಾಂಗ್ ಅತ್ಯಂತ ದೈನ್ಯತೆಯಿಂದ ಅವಳನ್ನು ನಿಟ್ಟಿಸಿದ. ಮುಖದ ಮೇಲೆ ಒಂದು ವಾರದ ಬೆಳೆ ಹೇರಳವಾಗಿ ಬೆಳೆದಿತ್ತು. ಕಣ್ಣು ಮುಖ ಹಳದಿ ವರ್ಣವನ್ನು ಮೆತ್ತಿದಂತಿವೆ. ಆತನ ಕರುಣಾಜನಕ ಸ್ಥಿತಿ ಫಳಕ್ಕನೆ ಕಣ್ಣುಗಳಲ್ಲಿ ಕಂಬನಿಯನ್ನು ಮೂಡಿಸಿತು. ಕರವಸ್ತ್ರದಿಂದ ನಿವಾರಿಸಿಕೊಳ್ಳುತ್ತ ನುಡಿದಳು ಮಾ-ಶೋಯಿ "ಮನದಲ್ಲಿ ಯಾವ ಕಳವಳವನ್ನೂ ಇಟ್ಟುಕೊಳ್ಳಬೇಡ. ಶಾಲೆ ಬಿಟ್ಟನಂತರ ದಿನವೂ ನೆಟ್ಟಗೆ ಇಲ್ಲಿಗೇ ಬಂದುಬಿಡುವೆ. ಹೇಗಾದರೂ ಕೆಲವು ದಿನ ಸುಧಾರಿಸಿಕೊ."

"ನಾನಿಲ್ಲಿ ಒಬ್ಬನೇ ಹೊತ್ತು ಕಳೆಯಲಾರೆ," ನರಳುತ್ತಲೇ ನುಡಿದ ಚಂಗ್-ಚಾಂಗ್.

ಮಾ-ಶೋಯೆ ಚಿಂತಾಕ್ರಾಂತಳಾದಳು. ಏನು ಹೇಳಬೇಕೋ ತಿಳಿಯಲಿಲ್ಲ. ಹೇಗೆ ಆತನನ್ನು ಸಂತೈಸುವುದೋ ಹೊಳೆಯಲಿಲ್ಲ.

"ಇನ್ನೊಂದು ತಿಂಗಳು ರಜೆ ತೆಗೆದುಕೊ."

"ಇನ್ನು ರಜೆ ಸಿಗುವುದು ಕನಸಿನ ಮಾತು. ಆಗಲೇ ಎರಡು ತಿಂಗಳು ತೆಗೆದುಕೊಂಡಾಗಿದೆ."

"ಹಾಗಿದ್ದರೆ ನನ್ನನ್ನು ಹೀಗೆಯೇ ಸಾಯಗೊಡಿಸುತ್ತೀಯೇನು ?"

ಆ ಮಾತು ಮನವನ್ನು ಈಟಿಯಂತೆ ಇರಿಯಿತು. ಹೃದಯ ಸಮುದ್ರ ದುಃಖದ ಹೆದ್ದೆರೆಗಳಿಂದ ತುಂಬಿ ತುಯ್ಯಲಾಡುತಿತ್ತು. ಮಾ-ಶೋಯೆ ತತ್ತರಿಸಿದಳು. ಚೆಂಗ್-ಚಾಂಗ್ ಜ್ವರದ ತಾಪದಿಂದ ಅತ್ತಿತ್ತ ಹೊರಳಾಡುತ್ತ ನುಡಿದ "ಏನಾದರಾಗಲೀ ಕೆಲವು ದಿನ ಶಾಲೆಯಲ್ಲಿ ರಜೆ ಕೇಳಿನೋಡು."

ಅದೇ ಸೂಕ್ತವೆಂದು ಶಾಲೆಯ ಕಡೆ ಹೊರಟಳು ಮಾ-ಶೋಯೆ.

* * * *

ಶ್ರೀಮತಿ ಚಾಲೂ-ಲಿನ್ ಇಂದು ಪ್ರಸನ್ನಮುಖಿಯಾಗಿರಲಿಲ್ಲ. ಕಾರ್ಯ ಭಾರದ ನಾನಾ ಒತ್ತಡಗಳಿಂದ ಶಿರೋದೇಶವು ಭಾರಾಕ್ರಾಂತವಾಗಿತ್ತು. ಮೃಣಾಲತಂತು ಸಮನ್ವಿತ ಬಾಹುಲತೆಗಳನ್ನು ವಕ್ಷಸ್ಥಲದ ಮೇಲೆ ಕಟ್ಟಿ ಯೋಚನಾಕ್ರಾಂತಳಾಗಿ ಕುಳಿತ ಆಕೆಯ ಮನಃಸ್ಥಿತಿಯನ್ನು ಹೊಸ್ತಿಲ ಬಳಿ ಯಿಂದಲೇ ಗಮನಿಸಿದಳು, ಮಾ-ಶೋಯೆ. ಕೇಳಲೋ ಬೇಡವೋ ಎಂಬ ಯೋಚನೆಯಲ್ಲಿರುವಾಗಲೇ ಆಕೆಯೇ ಕೇಳಿದಳು "ಏನು ವಿಶೇಷ....ಮಾ-ಶೋಯೆ ?"

ಆ ಕ್ಷಣ ಅವಳಾಗಿಯೇ ಕೇಳಿದಮೇಲೆ ಹೇಳಬೇಕಾಯಿತು ...ಸುಮ್ಮನೆ ಹಿಂದಿರುಗುವಂತೆಯೂ ಇಲ್ಲದೆ ಒಂದು ಘಳಿಗೆ ಯೋಚಿಸಿ ವಿಷಯವನ್ನು ಮುಂದಿಟ್ಟಳು. ಅದೇ ಸಮಯದಲ್ಲಿ ಇನ್ನಿಬ್ಬರು ಉಪಾಧ್ಯಾಯಿನಿಯರು ರಜೆ ಹೋಗಿದ್ದುದರಿಂದ ಮಾ-ಶೋಯೆಯ ಬೇಡಿಕೆ ಈಡೇರಲಿಲ್ಲ, ಆಕೆಯ ಕೋಪಾನ್ವಿತ ಮುಖಭಾವ ತನ್ನ ಕಷ್ಟದ ಪರಿಸ್ಥಿತಿಯನ್ನು ಮುಂದಿಡಲೂ ಅವಕಾಶ ಕೊಡಲಿಲ್ಲ. ತುಂಬಿ ಬಂದ ಕಣ್ಣುಗಳನ್ನು ಕರವಸ್ತ್ರದಿಂದ ತೀಡಿ ಕೊಂಡು ಮಾ-ಶೋಯೆ ಸಪ್ಪೆ ಮೋರೆಯಿಂದ ಹೊರವಂಟಳು.

ಆಸ್ಪತ್ರೆಯನ್ನು ಮುಟ್ಟಿದಾಗ ಚೆಂಗ್-ಚಾಂಗ್ ನರಳುತ್ತ ಮಲಗಿದ್ದ;

ಜ್ವರ ಇನ್ನೂ ಇಳಿದಿರಲಿಲ್ಲ. ಮೇಜಿನ ಮೇಲೆ ಯಾವುಯಾವುದೋ ಹೊಸ ಮದ್ದುಗಳ ಜೋಡಣೆಯಾಗಿತ್ತು. ಪ್ರಿಯತಮೆಯನ್ನು ನೋಡುತ್ತಲೂ ಮೃದು ಹಸ್ತಗಳನ್ನು ಅದುಮಿ ಹಿಡಿದು ಕೇಳಿದ "ರಜೆ ದೊರೆಯಿತೇ ?"

"ಇಲ್ಲ." ಬಲು ಕಷ್ಟದಿಂದ ನುಡಿ ಹೊರ ಹಾಕಿದಳು ಮಾ-ಶೋಯೆ.

ಆ ಮಾತು ಹೊರಬಿದ್ದೊಡನೆಯೇ ಮುಖ ಗಂಭೀರವಾಯಿತು. ಪ್ರಯತ್ನಿಸಿದರೂ ತುಟಿಗಳು ಬಿರಿಯಲಿಲ್ಲ. ಶೀರ್ಣಿತ ಮುಖ ಬಾಡಿ ಇನ್ನಷ್ಟು ಹಿಪ್ಪೆಯಾಯಿತು. ಸ್ವಲ್ಪ ಹೊತ್ತಿನ ತಂತರ ಕೇಳಲಾರದೆ ಕೇಳಿದ ಚಂಗ್-ಚಾಂಗ್ "ಈಗೇನು ಮಾಡುತ್ತಿ ?"

ಆ ಪ್ರಶ್ನೆ ಅವಳನ್ನು ಹಿಂಸ್ರ ಪಶುವಿನಂತೆ ಎಡೆಬಿಡದೆ ಕಾಡುತ್ತಿರುವಾಗ ಹೇಳುವುದಾದರೂ ಏನು ? ಒಂದೆರಡು ಘಳಿಗೆ ಯೋಚಿಸುತ್ತಿದ್ದಂತೆಯೇ ಲೂ-ಮೀ ನೆನಪಿಗೆ ಬಂದಳು. ಒಡನೆ ಸಮಾಧಾನದಿಂದ ನುಡಿದಳು "ಇಲ್ಲಿ ನನ್ನ ಗೆಳತಿಯೊಬ್ಬಳು ಕೆಲಸ ಮಾಡುತಿದ್ದಾಳೆ. ಅವಳ ಪರಿಚಯ ಮಾಡಿಕೊಡುವೆ. ಅವಳು ನಿನ್ನನ್ನು ಹಗಲು ಹೊತ್ತು ನೋಡಿಕೊಂಡರೆ ಆಗಬಹುದಷ್ಟೆ ? ಶಾಲೆ ಮುಗಿದ ನಂತರ ನಾನು ಬರುವೆ."

ಸ್ವಲ್ಪ ಹೊತ್ತು ಯೋಚಿಸಿ "ಆಗಬಹುದು" ಎಂದ ಚಂಗ್-ಚಾಂಗ್.

ಮಾ-ಶೋಯೆ ಆ ಕೂಡಲೇ ಲೂ-ಮೀಯನ್ನು ಹುಡುಕಿಕೊಂಡು ಹೊರಟಳು. ಅವಳಿದ್ದ ಯೂನಿಟ್ಟನ್ನು ತಲ್ಪಿದಾಗ ಆಕೆ ಕೆಲಸ ಮುಗಿಸಿ ಮನೆಗೆಹೊರಡುವ ಸಿದ್ಧತೆಯಲ್ಲಿದ್ದಳು. ದೂರದಿಂದ ನೋಡುತ್ತಲೂ ಉಚ್ಚಸ್ವರದಲ್ಲಿ ಕೂಗಿದಳು "ಲೂ-ಮೀ!" ನವಿಲಿನ ಕ್ರೇಂಕಾರದಂತೆ ಹೊರಬಿತ್ತು ಕಂಠಸ್ವನ.

"ಓ ! ಮಾ-ಶೋಯೆ!" ಅಷ್ಟೇ ಉತ್ಸಾಹ ತೋರಿದಳು ಲೂ-ಮೀ.

"ನಿನ್ನನ್ನು ಹುಡುಕಲು ಆಸ್ಪತ್ರೆಯನ್ನೆಲ್ಲಾ ಒಂದು ಸುತ್ತು ಹಾಕಿದ್ದಾಯ್ತು."

"ಏಕೆ ? ಏನು ಸಮಾಚಾರ ?"

"ನನ್ನ ಗೆಳೆಯ ಆಸ್ಪತ್ರೆಯಲ್ಲಿದ್ದಾನೆ. ನಿನ್ನಿಂದ ನನಗಿಷ್ಟು ಉಪಕಾರವಾಗಬೇಕಾಗಿದೆ. ಅಂತಲೇ ನಿನ್ನನ್ನು ಹುಡುಕಿಕೊಂಡು ಬಂದೆ."

"ಯಾರು ಹೇಳು ?"

"ನನ್ನೊಡನೆ ಬಾ. ನಿನಗೆಲ್ಲವನ್ನೂ ಹೇಳುವೆ."

ಲೂ-ಮಿಾ ಅವಳೊಂದಿಗೆ ಹೊರಟಳು. ಇಬ್ಬರೂ ಕೈ ಕೈ ಹಿಡಿದು ಹೆಜ್ಜೆ ಹಾಕುವಾಗ ತನ್ನ ಒಡಲ ಸಂಕಟವನ್ನೆಲ್ಲ ಒಂದೇ ಬಾರಿಗೆ ತೋಡಿಕೊಂಡಳು, ಮಾ-ಶೋಯೆ.

"ಆಸ್ಪತ್ರೆಗೆ ಸೇರಿ ಏಳೆಂಟು ದಿನಗಳಾಗಿವೆ. ಇನ್ನೂ ಜ್ವರ ಬಿಡದಿರುವುದೇ ಮನಸ್ಸಿಗೆ ತುಂಬ ಆತಂಕ. ಬಹಳ ಸುಸ್ತಾಗಿದ್ದಾನೆ."

"ಓ.....ಹೋ !"

"ಅವನೂ ನಾನೂ ಸಧ್ಯದಲ್ಲಿಯೇ ದಂಪತಿಗಳಾಗುವ ಯೋಚನೆಯಿತ್ತು. ಅಷ್ಟರೊಳಗಾಗಿಯೇ ಅವನ ಆರೋಗ್ಯ ಕೆಟ್ಟದುದು ದುರದೃಷ್ಟಕರ."

"ಎಲ್ಲಾ ಸರಿ ಹೋಗುತ್ತೆ. ಯೋಚಿಸಬೇಡ."

"ಅಷ್ಟಾದರೆ ಸಾಕಾಗಿದೆ."

* * * *

ಇಬ್ಬರೂ ವಾರ್ಡ್ ಮುಟ್ಟಿದಾಗ ಚಂಗ್-ಚಾಂಗ್ ಇವರನ್ನೇ ಕಾಯುತಿದ್ದ. ಮಾ-ಶೋಯೆ ಆತನಿಗೆ ಲೂ-ಮಿಾಯನ್ನು ಪರಿಚಯ ಮಾಡಿಕೊಟ್ಟು ಹೇಳಿದಳು "ಇವಳು ಹಗಲು ನಿನ್ನನ್ನು ನೋಡಿಕೊಳ್ಳಲು ಒಪ್ಪಿದ್ದಾಳೆ. ಸಾಯಂಕಾಲ ನಾನು ನೋಡಿಕೊಳ್ಳುವೆ. ಆದೀತೇ ? ಹೇಗಾದರೂ ಸ್ವಲ್ಪದಿನ ಸುಧಾರಿಸಿಕೋ. ನೀನು ಅಷ್ಟು ಉಪಕಾರ ಮಾಡಿದರೆ ನನ್ನ ಕೆಲಸ ಉಳಿಯುತ್ತದೆ."

ಚಂಗ್-ಚಾಂಗ್ ಸಮಾಧಾನದಿಂದ ಒಪ್ಪಿಗೆ ಕೊಟ್ಟ.

ಲೂ-ಮಿಾಯೂ ಸಂತಸದಿಂದ ಅದನ್ನು ಒಪ್ಪಿಕೊಂಡಳು. ಹಿರಿಯ ಸಮಸ್ಯೆ ಹೀಗೊಂದು ರೀತಿಯಿಂದ ಬಗೆ ಹರಿದುದು ಮನಸ್ಸಿನ ದೊಡ್ಡ ಭಾರವನ್ನು ಇಳುಹಿತು. ಮಾ-ಶೋಯೆ ಕತ್ತಲಾಗುವವರೆಗೂ ಅಲ್ಲೆ ಹೊತ್ತು ಕಳೆದು ಆತನ ಮನಸ್ಸಿಗೆ ಹರ್ಷವೂಡಿಸಿ ಮನೆಗೆ ಹೊರಟಳು. ಅವನು ಭಾವೀ ಮಡದಿಯನ್ನು ಬೀಳ್ಕೊಡುತ್ತ ಅಂದ,

"ನನಗೀಗ ಹಣದ ಕೊರತೆಯು ಬಹಳವಿದೆ. ಆಸ್ಪತ್ರೆಯ ಖರ್ಚನ್ನು ಪೂರೈಸುವುದೂ ಸಹ ಕಷ್ಟವೇ."

"ಇಂತಹ ಪರಿಸ್ಥಿತಿಯಲ್ಲಿ ನನ್ನ ಕೆಲಸವು ಹೋದರೆ ನಮ್ಮ ಗತಿ ಏನಾಗಬೇಡ ?"

"ನಿಜ.....ನೀನು ಶಾಲೆಯ ಕೆಲಸ ಮುಗಿಸಿದನಂತರವೇ ಬಾ. ನನ್ನ ಬಗ್ಗೆ ಅಷ್ಟಾಗಿ ಹಚ್ಚಿಕೊಳ್ಳಬೇಡ, ನನಗೇನೂ ಆಗುವುದಿಲ್ಲ."

"ಶಾಲೆಯಿಂದ ಬರುವಾಗ ನಿನಗೆ ಏನೆಲ್ಲಾ ಬೇಕೋ ತರುವೆ. ಏನು ಬೇಕು ಹೇಳು ? ಹಣ್ಣು....ರೊಟ್ಟಿ ?"

"ರೊಟ್ಟಿ ಇದೆ. ಹಣ್ಣು ಬೇಕು "

"ತರುವೆ." ಒಂದು ಘಳಿಗೆ ಯೋಚಿಸಿ ಹೇಳಿದಳು ಮಾ-ಶೋಯೆ ಜ್ವರ ಎಲ್ಲರಿಗೂ ಬರುತ್ತದೆ....ಆದರೆ, ನೀನು ಇಷ್ಟೊಂದು ಸೊರಗಿ ಸುಣ್ಣ ವಾದುದು ನನಗೆ ತುಂಬ ಚಿಂತೆಯಾಗಿದೆ. ಶಾಲೆಯಲ್ಲಿ ಸರಿಯಾಗಿ ಕೆಲಸ ಮಾಡುವುದಕ್ಕೂ ಆಗುವುದಿಲ್ಲ. ಬಹಳ ಬೇಸರ."

"ಯೋಚಿಸಬೇಡ ; ದೇವರು ಕಾಪಾಡುತ್ತಾನೆ."

"ದೇವರು ದೊಡ್ಡವನು.....ಆದರೂ, ಚೇತರಿಸಿಕೊಳ್ಳಲು ಇನ್ನೆಷ್ಟು ಕಾಲ ಬೇಕೋ. ಈ ಡಿಂಗೂ ಜ್ವರ ಬಹಳ ಕಾಲ ಸತಾಯಿಸುತ್ತದೆ. ನನಗೆ ಅದೇ ಭಯ."

"ಹೌದು, ಅಲ್ಲವೇ ?....ನೀನೆಂದಂತೆ ಚೇತರಿಸಿಕೊಳ್ಳಲು ಇನ್ನೆಷ್ಟು ದಿನ ಬೇಕೋ. ಇಲ್ಲಿ ಹೊತ್ತು ಕಳೆಯುವುದೇ ಕಷ್ಟ. ಮಲಗೀಮಲಗೀ ಮೈ ಕೈ ನೋವು."

"ಸ್ವಲ್ಪಕಾಲ ಹೇಗಾದರೂ ಸುಧಾರಿಸಿಕೊ."

"ಇನ್ನೇನು ಮಾಡುವುದು ಸುಧಾರಿಸಕೊಳ್ಳಲೇಬೇಕಲ್ಲ ?"

ಇಬ್ಬರ ಮುಖದಲ್ಲೂ ಕಿರುನಗೆ ಅರಳಿತು.

ಲೂ-ವೀ ಮೇಜಿನ ಮೇಲಿನ ಔಷಧಿಯನ್ನು ತೆಗೆದು ಒಂದೊಂದಾಗಿ ನೋಡುತ್ತಾ ನುಡಿದಳು "ನೀನೇನೂ ಯೋಚಿಸಬೇಡ ಮಾ-ಶೋಯೆ. ಅವ ನಿಗೆ ಏನೆಲ್ಲಾ ಬೇಕೋ ಅದನ್ನು ನಾನು ನೋಡಿಕೊಳ್ಳುವೆ. ಸಂಜೆಯಲ್ಲಿ ನೀನು ಶಾಲೆಯಿಂದ ಬಂದನಂತರವೇ ನಾನು ಮನೆಗೆ ಹೋಗುವೆ. ಆಯಿತೇ?"

ಅವಳ ಉತ್ಸಾಹ ಪೂರ್ಣ ಧ್ವನಿಯನ್ನು ಸಾನಂದದಿಂದ ಸ್ವಾಗತಿಸಿ ದಳು ಮಾ-ಶೋಯೆ. "ನೀನು ನೋಡಿಕೊಳ್ಳುವೆ ಎಂದಮೇಲೆ ತುಂಬ ಸಮಾ

ಥಾನ. ಇಲ್ಲದಿದ್ದಲ್ಲಿ ನನ್ನ ಕೆಲಸವನ್ನು ಉಳಿಸಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ."

ನಿಜವೆಂಬಂತೆ ಚೆಂಗ್-ಚಾಂಗ್ ಗೋಣು ಅಲ್ಲಾಡಿಸಿದ.

ಲೂ-ವೀ ಸಮಾಧಾನ ಪೂರ್ಣವಾದ ತಿಳಿ ನಗೆ ಬೀರಿದಳು.

* * * *

ಆ ಒಂದು ತಿಂಗಳು ಹೇಗೆ ಬಂದಿತೋ ಮತ್ತು ಹೇಗೆ ಕಳೆದು ಹೋಯಿತೋ ಎಂಬುದನ್ನು ಊಹಿಸುವುದೂ ಕಷ್ಟ. ಚೆಂಗ್-ಚಾಂಗ್ ಗುಣ ಹೊಂದಿ ಆಸ್ಪತ್ರೆಯಿಂದ ಬಿಡುಗಡೆ ಹೊಂದಿದಂದು ಮಾ-ಶೋಯೆ ಅತ್ಯಂತ ಆನಂದಭರಿತಳಾದಳು. ಚೆಂಗ್-ಚಾಂಗ್ ಕೆಲವು ದಿನ ಸುಧಾರಿಸಿಕೊಂಡು ಬರುವುದಾಗಿ ತನ್ನ ಸ್ಥಳವಾದ ಚುಂಗ್‌ಕಿಂಗ್‌ಗೆ ಹೊರಟ. ಮಾ-ಶೋಯೆ ಅವನನ್ನು ಬೀಳ್ಕೊಡಲೆಂದು ಬಸ್ಸಿನ ನಿಲ್ದಾಣಕ್ಕೆ ಹೋದಾಗ ಅಲ್ಲಿ ಲೂ-ವೀಯೂ ಸಹ ಕಾದಿದ್ದಳು. ಇಬ್ಬರೂ ಆತನನ್ನು ಸ್ನೇಹಾದರದಿಂದ ಬೀಳ್ಕೊಟ್ಟು ಹಿಂತಿರುಗಿದರು. ಚೆಂಗ್-ಚಾಂಗ್ ಕೆಲವು ದಿನಗಳು ಚುಂಗ್‌ಕಿಂಗ್‌ನಲ್ಲೂ ನಂತರ ಇನ್ನು ಕೆಲವು ದಿನಗಳು ವೇಂತ್‌ಸಿನ್‌ನಲ್ಲೂ ಕಳೆದು ಪೀಕಿಂಗಿಗೆ ಬಂದಾಗ ಆರೋಗ್ಯ ತುಂಬಿ ಬಂದಿತ್ತು. ಅವನು ಶಾಲೆಯಲ್ಲಿ ಉಪಾಧ್ಯಾಯ ವೃತ್ತಿಯನ್ನು ಕೈಕೊಂಡು ದಿನಚರಿಯನ್ನು ನೂಕತೊಡಗಿದರೂ ಮಾ-ಶೋಯೆ ಮೊದಲಿನಂತೆ ಆತನ ದರ್ಶನಾಕಾಂಕ್ಷಿಯಾಗಿರದೆ ಏನೋ ಒಂದು ರೀತಿಯ ಉಪೇಕ್ಷೆಯನ್ನು ತೋರಿದಳು. ಚೆಂಗ್-ಚಾಂಗ್ ತನ್ನ ಕಾತರವನ್ನೆಲ್ಲಾ ಒಂದೇ ನುಡಿಯಲ್ಲಿ ಹೊರಹಾಕಿದ.

"ನಾವೀತಿಂಗಳಲ್ಲೇ ಮದುವೆಯಾಗಿ ಬಿಡೋಣ, ಮಾ-ಶೋಯೆ !"

ಅದಕ್ಕವಳು ಅತ್ಯಂತ ಮೊಟಕಾಗಿ ಉತ್ತರ ನೀಡಿದಳು "ನನಗೀಗ ಬಿಡುವಿಲ್ಲ."

"ನಿನಗೆ ಬಿಡುವು ಆಗುವುದೆಂದಿಗೆ ?"

"ಗೊತ್ತಿಲ್ಲ."

"ನೀನೇನೋ ಒಂದು ಬಗೆಯಾಗಿದ್ದಿ. ಏಕೆ ?"

ಅದಾದನಂತರವೂ ಅವಳ ಭೇಟಿಗಾಗಿ ಚೆಂಗ್-ಚಾಂಗ್ ಎಷ್ಟು ಕಾತರತೆ ತೋರುತಿದ್ದನೋ ಅಷ್ಟೇ ಆಕೆಯಲ್ಲಿ ಉದಾಸೀನ ಬೆಟ್ಟದಂತೆ ಬೆಳೆಯುತಿತ್ತು. ಅದರ ಮೂಲಕಾರಣವನ್ನು ಕಂಡುಕೊಳ್ಳುವುದು ದುಸ್ತರ

ವಾದಾಗ ಅತೀವ ಮಾನಸಿಕ ಹಿಂಸೆಗೆ ಒಳಗಾಗಿ ಅನುಭವಿಸಲಾಗದೆ ಕರುಣ ಕಾತರ ಸ್ವರದಿಂದ ಭಯಭೀತನಾಗಿ ಕೇಳಿದ,

"ಏನೆಂಬುದನ್ನಾದರೂ ವಿವರವಾಗಿ ಹೇಳು ಮಾ-ಶೋಯೆ. ಸುಮ್ಮ ಸುಮ್ಮನೆ ನನ್ನನ್ನು ಕೊಲ್ಲಬೇಡ."

"ಏನೆಂಬುದು ನಿನಗೆ ತಿಳಿದೇ ಇದೆ. ಮತ್ತೇಕೆ ಪ್ರಶ್ನೆ ?"

"ಸ್ವತಃ ನಿನ್ನ ಮುಖದಿಂದಲೇ ಕೇಳಬೇಕೆಂಬುದು ನನ್ನಿಷ್ಟ."

"ಪೀಕಿಂಗ್‌ನಲ್ಲಿ ಲೂ-ಮಿಾ ಇರುವವರೆಗೆ ನಾನು ನಿನ್ನನ್ನು ನಂಬಲಾರೆ."

"ಹೇಗೆ ನಿನಗೆ ಈ ಅನುಮಾನ ಬಂತು ?"

"ಸಕಾರಣಗಳಿಂದ."

* * * *

ನಾಲ್ಕು ದಿನಗಳಿಂದ ಒಂದೇ ಸಮನೆ ಮಳೆ.

ತುಂತುರು....ತುಂತುರು....ತುಂತುರು....

ಅದು ನಿಲ್ಲುವುದೂ ಇಲ್ಲ ; ಭೋರನೆ ಸುರಿಯುವುದೂ ಇಲ್ಲ.

ಕಿನಿಸಿಗೆ....ಕಿನಿಸಿಗೆ....ಕಿನಿಸಿಗೆ....

ಯೋಜನ ಯೋಜನ ಯೋಜನ ಪರ್ಯಂತ ಸುರಿಯುವ ತುಂತುರು ತುಂತುರು ತುಂತುರು ಮಳೆ ಮನಸ್ಸಿಗೆ ಕಿನಿಸಿಗೆ ಊಡಿಸುತಿತ್ತು.

ಕೊಡೆ ಹೊಂದಿರದ ಅನೇಕ ಮಕ್ಕಳು ತುಂತುರು ಮಳೆಯಲ್ಲಿ ತೊಯ್ದುಕೊಂಡೇ ಶಾಲೆಗೆ ಬಂದಿದ್ದರು. ಅವರು ಸಣ್ಣ ಚಳಿಯಲ್ಲಿ ನಡುಗುವಾಗ ಟವಲ್ಲಿನಿಂದ ಒರಸಿ ಎಲ್ಲರಿಗೂ ಸಹಾಯ ಮಾಡಿ ಕಿಟಕಿಯ ಕದ ಮುಚ್ಚಿ ತಂಗಾಳಿಗೆ ತಡೆ ಹಾಕಿದಳು ಮಾ-ಶೋಯೆ. ಆಗ ಇನ್ನೂ ಒಂಭತ್ತರ ಸಮಯ. ಹಕ್ಕಿಗಳು ಗಿಡ ಮರಗಳ ಮೇಲೆ ಚಿಲಿಪಿಲಿಗುಟ್ಟು ತಿದ್ದುವು. ತಂಡಿಯ ಹವೆ ಮೈ ಕೊರೆಯುವಂತಿತ್ತು. ಪಾಠ ನಡೆಯು ತಿದ್ದಂತೆಯೇ ಕಾಗದವೊಂದು ಮೇಜಿನ ಮೇಲೆ ಇದ್ದಕ್ಕಿದ್ದಂತೆ ಹಾಜ ರಾಯಿತು. ಅದರಲ್ಲಿದ್ದುದು ಮೂರೇ ಪಂಕ್ತಿ. ಬರೆದವನು ಚಂಗ್-ಚಾಂಗ್.

....ಈ ಕಾಗದ ತಂದ ಚಿಯಾಂಗ್-ಚಿಂಗ್ ಅತ್ಯಂತ ದಯಾವಂತ. ಆತನಿಗೆ ನಿಷ್ಠೆಯುಳ್ಳ ಹೆಣ್ಣು ಬೇಕಾಗಿದೆಯಂತೆ. ನೀನು ನಿನ್ನ ಗೆಳತಿ

ಲೂ-ವಿಾಯನ್ನು ಪರಿಚಯ ಮಾಡಿಸಬಹುದು. ಈತನಿಗೆ ಒಳ್ಳೆಯ ಭವಿಷ್ಯವಿದೆ. ಅವಳು ದೇವರ ದಯದಿಂದ ಈತನ ಸಂಗಾತಿಯಾಗಲು ಒಪ್ಪಿಕೊಂಡರೆ ನೀನು ನಿರ್ಭಯದಿಂದ ನಮ್ಮ ಮದುವೆಗೆ ಒಪ್ಪಿಕೊಳ್ಳಬಹುದಷ್ಟೆ.... ?

ಒಂದು ಘಳಿಗೆ ತಬ್ಬಿಬ್ಬಾದಳು ಮಾ-ಶೋಯೆ. ಏನು ಹೇಳಬೇಕೋ ಹೊಳೆಯಲಿಲ್ಲ. ಯೋಚನಾ ಜಗತ್ತು ಹಲವು ಚಿಂತನೆಗಳಿಂದ ತುಂಬಿತು. ಸ್ವಲ್ಪ ಹೊತ್ತು ಹಾಗೇ ಯೋಚಿಸಿ ಚಿಯಾಂಗ್-ಚಿಂಗನಿಗೆ ಲೂ-ವಿಾಯನ್ನು ಪರಿಚಯ ಮಾಡಿಸುವುದರಲ್ಲಿ ತೊಂದರೆಯೇನೂ ಇಲ್ಲ. ಎಂದುಕೊಂಡು ಹೊರ ಹೋಗಿ ತನ್ನ ಕೆಲಸ ಮುಗಿಯುವವರೆಗೆ ಅಲ್ಲಿ ಕಾದಿರಲು ಅವನಿಗೆ ಹೇಳಿ ಬಂದಳು.

ಆದರೆ, ಚಂಗ್-ಚಾಂಗನ ರೀತಿ ಮನವನ್ನು ಕೊರೆಯುತಿತ್ತು. ಎಷ್ಟೇ ಯೋಚಿಸಿದರೂ ಆತನ ಆಳವನ್ನು ಕಂಡುಕೊಳ್ಳಲಾಗಲಿಲ್ಲ.

ಶಾಲೆ ಮುಚ್ಚಿ ಹೊರಟಾಗ ಚಿಯಾಂಗ್–ಚಿಂಗ್ ಅಲ್ಲೇ ಕಾದಿದ್ದ. ಅಲ್ಲಿಂದ ಇಬ್ಬರೂ ಕೊಡೆ ಹಚ್ಚಿ ತುಂತುರು ಮಳೆಯಲ್ಲೇ ಹೊರಟರು. ಕೊಡೆ ಹೊಂದಿರದ ಮಕ್ಕಳು ತುಂತುರು ಮಳೆಯಲ್ಲಿ ಓಡುತ್ತಲೇ ಹೋಗುವುದನ್ನು ನೋಡಿದಾಗ 'ಪಾಪ' ಎನಿಸಿತು.

ಆಸ್ಪತ್ರೆ ಮುಟ್ಟಿದಾಗಲೂ ಮಳೆ ನಿಂತಿರಲಿಲ್ಲ

ಲೂ-ವಿಾಗಾಗಿ ಆಸ್ಪತ್ರೆಯ ಒಳಾಂತರವನ್ನೆಲ್ಲ ಶೋಧಿಸಿದರೂ ಕಾಣ ಸಿಗಲಿಲ್ಲ.

ಮಾ-ಶೋಯೆ ಹಿರಿಯ ನರ್ಸ್ ಇದ್ದಲ್ಲಿಗೆ ಹೋಗಿ ಕೇಳಿದಾಗ ಅವಳು ಡಿಂಗೂ ಜ್ವರದಿಂದ ಮಲಗಿದ್ದಾಳೆಂದು ತಿಳಿಯಿತು. ಅವಳ ವಾರ್ಡನ್ನು ತಿಳಿದುಕೊಂಡು ಅಲ್ಲಿಗೆ ಹೋದಳು. ನೋಡಿದರೆ ಸೊರಗಿ ಎಲುಬು ಚರ್ಮವಾಗಿ ಮಲಗಿದ್ದಾಳೆ. ಪರಿಚಯಸ್ಥರಿಗೂ ಸಹ ಪರಿಚಯ ಹತ್ತದಷ್ಟು ಶೀರ್ಣತಳಾದ ಅವಳನ್ನು ನೋಡಿ ಭಯ-ಆಶ್ಚರ್ಯ-ಕಾತರ-ಕಳವಳಗಳು ತುಂಬಿದ ಅರಳುಗಂಗಳಿಂದ ನಿಟ್ಟಿಸುತ್ತ "ಅಯ್ಯೋ, ಇದೇನು ಲೂ-ವಿಾ?" ಎಂದಳು ಮಾ-ಶೋಯೆ ಕರುಣಾನ್ವಿತ ಕಂಠಸ್ವರದಲ್ಲಿ. ಅಂದಿಂದಿಗೂ ಒಡಲು ತುಂಬಿದ್ದ ಈರ್ಷೆ ಎಲ್ಲೋ ಮಾಯವಾಯಿತು. ಕರುಣ ಕಾತರ ತುಂಬಿದ ಹೃದಯ ಗೆಳತಿಗಾಗಿ ತುಡಿದುಕೊಳ್ಳಹತ್ತಿತು.

"ಏಷ್ಟೋ ಬಾರಿ ನಿನ್ನನ್ನು ನೆನೆದುಕೊಂಡೆ. ನನಗಿಲ್ಲಿ ಸಹಾಯಕರಾರೂ ಇಲ್ಲವಾಗಿದೆ. ನನ್ನ ಹಣವೆಲ್ಲ ಔಷಧಿಗಾಗಿಯೇ ಖರ್ಚಾಗಿ ಹೋಗಿದೆ. ಈಗ ಐನೂರು ಸಿ. ಸಿ. ರಕ್ತ ಕೊಡಬೇಕು ಎನ್ನುತ್ತಾರೆ ಡಾಕ್ಟರು. ಅಷ್ಟು ಹಣ ನಾನೆಲ್ಲಿಂದ ತರಲಿ?" ಎನ್ನುತ್ತ ಕಂಬನಿ ಮಿಡಿದಳು ಲೂ–ವಿಾ.

"ಈಗೇನು ಮಾಡುತ್ತಿ ?"

"ಮಾಡುವುದೇನು ? ಸಾಯುವುದಷ್ಟೆ." ಧ್ವನಿ ಅತ್ಯಂತ ನಿರಾಸೆಯಿಂದ ಕೂಡಿತ್ತು.

"ನಾನು ಹೇಗಾದರೂ ಹಣ ಕೂಡಿಸಿಕೊಡುವೆ. ಈಗಲೇ ಅಷ್ಟೊಂದು ನಿರಾಶಳಾಗಬೇಡ." ಎಂದು ಅತ್ಯಂತ ದಯಾಪೂರ್ಣವಾಣಿಯಲ್ಲಿ ನುಡಿದು ಚಿಯಾಂಗ್-ಚಿಂಗನೆಡೆಗೆ ತಿರುಗಿ "ನೀನೇನಾದರೂ ಸಹಾಯ ಮಾಡಬಲ್ಲೆಯಾ ?" ಎಂದಳು. ಅವನು ಸ್ವಲ್ಪ ಹೊತ್ತು ಸುಮ್ಮನಿದ್ದು ನಂತರ ನುಡಿದ "ಈಗ ನನ್ನಿಂದೇನೂ ಸಾಧ್ಯವಿಲ್ಲ."

ಕೆಲವು ಕ್ಷಣ ನಿರಾಶಾಯುಕ್ತ ದೃಷ್ಟಿಯಿಂದ ನೋಡುತ್ತ ಯೋಚನಾಕ್ರಾಂತಳಾಗಿ ಮಯಣದ ಬೊಂಬೆಯಂತೆ ನಿಂತಳು ಮಾ-ಶೋಯೆ. ಹೃದಯದಾಳದಲ್ಲಿ ದುಗುಡದ ಝರಿ ಹರಿದಾದಿತು.

"ಹೋಗಲಿ ಬಿಡು, ನಿನಗಾದರೂ ಏಕೆ ಈ ತೊಂದರೆ ?" ಎಂದಳು ಲೂ-ವಿಾ. ಒಡಲ ಸಂಕಟವೆಲ್ಲ ದನಿಯಲ್ಲಿ ಹರಿದು ಬಂದಿತು. ಕಣ್ಣುಗಳಂಚಿನಲ್ಲಿ ಹನಿಗಳು ಫಳಫಳನೆ ಮಿಂಚಿದುವು.

"ಈಗ ಹೊತ್ತಾಯಿತು. ನಾಳೆ ಶಾಲೆ ಮುಗಿಸಿ ಹೀಗೆಯೇ ಬರುವೆ. ನನ್ನಿಂದ ಏನು ಮಾಡಲು ಸಾಧ್ಯವೋ ಅದನ್ನು ಖಂಡಿತ ಮಾಡುವೆ ಯೋಚಿಸಬೇಡ ಲೂ-ವಿಾ."

"ನನಗಾಗಿ ಇಷ್ಟೆಲ್ಲ ಏಕೆ ತೊಂದರೆ ತೆಗೆದುಕೊಳ್ಳುತ್ತಿ ?"

"ಸ್ನೇಹ ಅಂದಮೇಲೆ ಅಷ್ಟೂ ಇರಬೇಡವೇ ?"

* * * *

ಆಸ್ಪತ್ರೆಯಿಂದ ಹೊರಡುತ್ತ ನುಡಿದಳು ಮಾ-ಶೋಯೆ, "ನಿನಗೆ ನಿಷ್ಠೆಯುಳ್ಳ ಹೆಣ್ಣು ಬೇಕು ಎನ್ನುತ್ತಿ. ಆದರೆ, ಅದೇ ಅವಳ ಬಗೆಗೆ ಸ್ವಲ್ಪವಾದರೂ ಕರುಣೆಯಿಲ್ಲವಲ್ಲಾ ?"

"ಅವಳ ಸ್ಥಿತಿಯನ್ನು ನೋಡಿದರೆ ದಷ್ಟ ಪುಷ್ಟವಾದ ಹೆಣ್ಣು ಹುಡುಕಿ ಕೊಳ್ಳುವುದು ಲೇಸು ಎನಿಸುತ್ತದೆ. ವೃಥಾ ಇವಳಿಗಾಗಿ ನಾನಾದರೂ ಏಕೆ ಹಣ ಹಾಳು ಮಾಡಲಿ?"

"ಹಣ ಹಾಳುಮಾಡುವುದೇನಿದೆ? ಅನಂತರ ಅವಳು ನಿನ್ನವಳೇ ಆಗುತ್ತಾಳಷ್ಟೆ? ಆ ವಿಚಾರ ಮಾತುಕತೆಯಾಡಿಯೇ ಹಣ ಕೊಡಬಹುದಲ್ಲ?"

"ನಾನಷ್ಟು ದಿನ ಕಾಯಲಾರೆ."

"ಅದೇನೂ ಹೆಚ್ಚುಕಾಲ ಹಿಡಿಯದು."

"ಇಲ್ಲಮ್ಮಾ, ನನಗೆ ಈಗಿಂದೀಗಲೇ ಹೆಣ್ಣು ಬೇಕು."

"ಸರಿ ; ನಾನೇ ಆಕೆಗೆ ಏನಾದರೂ ಬೇರೆ ಏರ್ಪಾಡು ಮಾಡುವೆ."

ಚಿಯಾಂಗ್-ಚಿಂಗ್ ಮಾತಾಡಲಿಲ್ಲ.

ಇಬ್ಬರ ಹಾದಿಯೂ ಕವಲೊಡೆಯಿತು.

ಮರುದಿನ ಶಾಲೆ ಆರಂಭವಾಗುವುದಕ್ಕೆ ಸ್ವಲ್ಪ ಮುಂಚಿತವಾಗಿಯೇ ಹೊರಟು ಚುಂಗ್-ಚಾಂಗನನ್ನು ನೋಡಿ ಲೂ-ವಿಾಯ ಪರಿಸ್ಥಿತಿಯನ್ನು ಮುಂದಿಟ್ಟು "ನಿನ್ನಿಂದ ಏನಾದರೂ ಸಹಾಯ ಮಾಡಲಾದೀತೇ?" ಎಂದಳು ಮಾ-ಶೋಯೆ.

"ಅಷ್ಟು ಹಣವನ್ನಾದರೂ ಎಲ್ಲಿಂದ ತರಲಿ?"

"ಏನಾದರೂ ಮಾಡಿ ಆಕೆಗೊಂದಿಷ್ಟು ಸಹಾಯ ಮಾಡು."

"ಅದೇನು ಸಾಮಾನ್ಯ ಮೊತ್ತವೇ?"

"ಆಕೆ ಬದುಕಿಕೊಂಡಲ್ಲಿ ಅದನ್ನೆಂದಾದರೂ ತೀರಿಸಿಯಾಳು. ಅದೂ ಅಲ್ಲದೆ ನೀನವಳ ಪ್ರೇಮಿ. ಅವಳಿಂದ ಕೈತುಂಬ ಸೇವೆ ಮಾಡಿಸಿಕೊಂಡಿದ್ದಿ. ಈ ಕಾರಣಗಳಿಗಾದರೂ ಆಕೆಗೆ ಸಹಾಯ ಮಾಡು."

"ಅದೆಲ್ಲಾ ಹುಡುಗಾಟ ; ವಯೋಧರ್ಮ. ಏನೇ ಇದ್ದರೂ, ನೀನು ಆಶಿಸುವಷ್ಟು ಹಣ ಕೊಡಿಸುವ ಶಕ್ತಿ ನನ್ನಲ್ಲಿಲ್ಲ."

"ಮನದಲ್ಲಿ ನೀನೇನೂ ಖಂಡಿತ ಆತಂಕ ಇಟ್ಟುಕೊಳ್ಳಬೇಡ. ರಕ್ತ ಪೂರೈಕೆಯಾದರೆ ಅವಳು ಬದುಕಿಕೊಳ್ಳುತ್ತಾಳೆ. ನಿನ್ನ ಹಣ ಖಂಡಿತ ಕೈ ಬಿಟ್ಟು ಹೋಗುವುದಿಲ್ಲ."

"ಆದರೂ, ಸಹ ನನ್ನಲ್ಲಿ ಈಗ ಆ ಶಕ್ತಿಯಿಲ್ಲ."

"ಈ ಪ್ರಪಂಚ ಇಷ್ಟೆ." ಸಿಟ್ಟಿನಿಂದ ಹೇಳಿದಳು ಮಾ-ಶೋಯೆ.

* * * *

ಮಾ-ಶೋಯೆ ಮರವಟ್ಟಂತೆ ನಿಂತಳು. ಹೃದಯ ಬೆಂಗಾಡಾಯಿತು. ಚಂಗ್-ಚಾಂಗ್ ಇಷ್ಟು ಉದಾಸೀನನಾದಾನೆಂದು ಆಕೆ ಭಾವಿಸಿರಲಿಲ್ಲ. ಆತ ಇಷ್ಟು ನಿರ್ದಯಿ ಎಂಬುದರ ಅರಿವಾದುದೂ ಸಹ ಇಂದೇ. ಒಂದು ಘಳಿಗೆ ಯೋಚನೆ-ಚಿಂತನೆಗಳಿಂದ ಕಿಂಕರ್ತವ್ಯ ವಿಮೂಢಳಾಗಿ ನಿಂತುಬಿಟ್ಟಳು. ಹೃದಯ ಡಿಂಡಿಮ ದಡದಡನೆ ಮಿಡಿಯಿತು.

"ಈಗ ಏನು ಮಾಡಲಾಗುತ್ತೆ ? ನೀನಾದರೂ ಏಕೆ ಅಷ್ಟು ಹಚ್ಚಿಕೊಳ್ಳಬೇಕು ?"

ಮಾ-ಶೋಯೆ ಪರಿತಾಪದಿಂದ ಹೇಳಿದಳು "ಒಂದು ಕಾಲಕ್ಕೆ ಆಕೆ ನಿನಗೆ ಬೇಕಾಗಿದ್ದಳು. ಅವಳಿಂದ ನಿನ್ನ ತನುಮನಗಳು ತುಂಬಿವೆ."

"ಹೌದು. ನಮ್ಮ ಶಕ್ತಿ ಮೀರಿ ನಾವು ಸಹಾಯ ಮಾಡುವುದು ಸಾಧ್ಯವೇ ?"

"ಶಕ್ತಿ ಮೀರಿ ಮಾಡೆಂದು ಯಾರೂ ಹೇಳಲಿಲ್ಲ. ನಿನ್ನ ಶಕ್ತಿ ಇದ್ದಷ್ಟೇ ಮಾಡು ಅಂತ. ಆದರೆ, ನಿನಗೆ ಮನಸ್ಸಿಲ್ಲವೆಂದಮೇಲೆ ಹೇಳಿಯೂ ಪ್ರಯೋಜನವಿಲ್ಲ, ಬಿಡು."

"ನಿನ್ನ ರೀತಿಯೇ ನನಗೆ ಅರ್ಥವಾಗುವುದಿಲ್ಲ. ಅವಳಿಂದಾಗಿಯೇ ಮದುವೆ ಯಾಗುವುದಿಲ್ಲವೆಂದೆ. ಈಗ ಅವಳಿಗೇನೇ ಸಹಾಯ ಮಾಡಲು ಹೊರಟಿದ್ದಿ."

"ಅದಕ್ಕೂ ಇದಕ್ಕೂ ಸಂಬಂಧವಿಲ್ಲ."

"ಈಗೇನು ಹೇಳುತ್ತಿ ? ನಮ್ಮ ಮದುವೆಯ ವಿಚಾರ ಏನಾದರೂ ಯೋಚಿಸಿರುವೆಯಾ ?"

"ತಾಳಪ್ಪಾ, ಮೊದಲು ನನ್ನ ಮುಂದಿರುವ ತೊಡಕೊಂದನ್ನು ತೊಡೆದುಕೊಳ್ಳುವೆ."

ನೀನು ಯಾವುದಾದರೊಂದು ನೆವ ಹೇಳುತ್ತಲೇ ಇದ್ದಿ ಬಹುಶಃ...."

ಆ ಮುಂದಿನ ತುಣುಕು ಹೊರಬೀಳುವುದರೊಳಗಾಗಿ ಅಲ್ಲಿಂದ ಹೆಜ್ಜೆ ತೆಗೆದು ಹೇಳಿದಳು,

"ಇನ್ನೊಮ್ಮೆ ಮಾತಾಡೋಣ."

ಆಗಲೇ ಹತ್ತು ಹೆಜ್ಜೆ ಹೋಗಿದ್ದ ಅವಳಿಗೆ ಕೇಳಿಸುವಂತೆ ಗಟ್ಟಿಯಾಗಿ ಕೂಗಿ ಹೇಳಿದ ಚುಂಗ್-ಚಾಂಗ್ "ನನ್ನಿಂದಂತೂ ಇನ್ನು ಕಾಯುವುದಕ್ಕಾಗುವುದಿಲ್ಲ."

ಕೇಳಿಸಿದರೂ ಕೇಳಿಸದಂತೆ ಅವಳು ಹೊರಟಳು. ಲೂ-ವಿಗೀಯ ಅಸಹಾಯಕ ಸ್ಥಿತಿ ಮನವನ್ನು ಕೀಟದಂತೆ ಕೊರೆಯುತಿತ್ತು. ಏನು ಮಾಡಲಿ, ಎಂಬ ಯೋಚನೆಯಲ್ಲೇ ಸಾಗಿತು ಹಾದಿ.

* * * *

"ಲೂ-ವಿಗಾ.....!"

"..........."

"ಲೂ-ವಿಗೀ ! !"

ಅರೆನಿದ್ದೆಯಲ್ಲಿದ್ದ ಲೂ-ವಿಗೀ ಕಣ್ತೆರೆದು ನೋಡಿದಳು. ಬಳಿಯಲ್ಲಿ ನಿಂತಿದ್ದ ಮಾ-ಶೋಯೆ ಶೀತಲ ಹಸ್ತವನ್ನು ಹಣೆಯ ಮೇಲೆ ಒತ್ತಿ ಹಿಡಿದು ಜಿನ್ನಳಾಗಿ ನುಡಿದಳು "ನಿನಗಾಗಿ ಹಣ ಕೂಡಿಸಲು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಆದರ ಬದಲಾಗಿ...." ಮುಂದೆ ಮಾತಾಡಗೊಡಿಸದೆ ಲೂ-ವಿಗೀ ನಡುವೆ ಬಾಯಿಹಾಕಿದಳು. "ಆಗದಿದ್ದರೆ ಹೋಗಲಿ, ಅದನ್ನಿಷ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಡ."

"ನಾನಷ್ಟು ಅಬಲೆಯಲ್ಲ, ಏನಾದರೂ ಮಾಡುವೆ."

"ನಿನ್ನ ಮನಸ್ಥಿತಿ ಎಲ್ಲವನ್ನೂ ಸಾರಿ ಹೇಳುತ್ತಿದೆ. ಅಷ್ಟೇಕೆ ಮನಸ್ಸಿಗೆ ಹಚ್ಚಿಕೊಳ್ಳುತ್ತಿ ? ಮುಖ್ಯವಾಗಿ ನಾನೇ ನಿನ್ನಷ್ಟು ಗಾಬರಿಯಾಗಿಲ್ಲ."

ಮಾ-ಶೋಯೆ ಮುಗುಳು ನಕ್ಕಳು.

"ಹಣ ಕೂಡಿಸಲಾಗಲಿಲ್ಲವಾದರೂ ನಾನು ಸೋಲಲಿಲ್ಲ. ನಿನಗೆ ಬೇಕಾದ ಐನೂರು ಸಿ.ಸಿ. ರಕ್ತವನ್ನು ನಾನೇ ಕೊಡುವೆ."

ಗಾಬರಿಯಿಂದ ನುಡಿದಳು ಲೂ-ವಿಗೀ "ಅಯ್ಯೋ, ನಿನ್ನ ಗತಿ ಏನಾಗಬೇಡ ?"

"ಪರವಾಯಿಲ್ಲ ಕೆಲವು ದಿನಗಳಲ್ಲಿ ಚೇತರಿಸಿಕೊಳ್ಳುವೆ."

"ಬೇಡ ; ಅಷ್ಟೊಂದು ತೊಂದರೆ ತೆಗೆದುಕೊಳ್ಳಬೇಡ. ದೇವರು ಮಾಡಿಸಿದಂತಾಗುತ್ತೆ," ಒತ್ತಾಯಪೂರ್ವಕವಾಗಿ ನುಡಿದಳು ಲೂ-ವೀ.

ಆದರೂ, ಕೇಳದೆ ಅವಳಿಗೆ ಅಗತ್ಯವಾಗಿದ್ದ ರಕ್ತವನ್ನು ತಾನೇ ದಾನ ವಾಗಿ ನೀಡಿದಳು ಮಾ-ಶೋಯೆ. ಇಬ್ಬರದೂ 'ಬಿ' ವರ್ಗವಾಗಿದ್ದುದರಿಂದ ರಕ್ತವು ಹೊಂದಿಕೊಂಡಿತು.

ಇಬ್ಬರೂ ಒಂದೇ ಕೊಠಡಿಯ ಎರಡು ಅಕ್ಕಪಕ್ಕದ ಮಂಚಗಳಲ್ಲಿ ಮಲಗಿ ತುಂಬ ನಿಶ್ಶಕ್ತಿಯಿಂದ ಉಸಿರಾಡುತ್ತಿದ್ದರು. ಲೂ-ವೀ ಶೋಕ ವ್ಯಾಕುಲತೆಯಿಂದ ನುಡಿದಳು.

"ಹೇಗೆ ನಿನ್ನ ಋಣಭಾದೆಯನ್ನು ತೀರಿಸುವೆನೋ ತಿಳಿಯದು. ನನ್ನಿಂದಾಗಿ ನಿನಗೆ ಸಾಕಷ್ಟು ತೊಂದರೆಯೂ ಆಗಿದೆ. ಅದನ್ನೂ ಸಹ ಲಕ್ಷಿಸದೆ ನನಗೆ ಸಹಾಯ ಮಾಡಿದ್ದಿ."

"ದೇವರಿಗಾಗಿ."

ಅನಂತರ ಅವರಿಬ್ಬರೂ ಮನಬಿಚ್ಚಿ ಮಾತಾಡಿದರು. ಅಂತರಂಗದ ಅನುತಾಪವೆಲ್ಲಾ ಬಿಡಿಮುತ್ತುಗಳಾಗಿ ಹೊರಬಿದ್ದುವು. ಅಜ್ಞಾತ ವಿಚಾ ರಗಳೂ ಚರ್ವಣಚರ್ವಿತವಾದುವು. ಕೊನೆಯಲ್ಲಿ ಲೂ–ವೀ "ಆಗಿನ ಸಂದರ್ಭದಲ್ಲಿ ಚಂಗ್-ಚಾಂಗ್‌ನಲ್ಲಿ ತಾನು ಅನುರಕ್ತಳಾಗಿದ್ದುದು ನಿಜ ವಾದರೂ ಈಗಿನ ಪರಿಸ್ಥಿತಿಯಲ್ಲಿ ನಾನಾತನನ್ನು ವರಿಸಲಾರೆ. ಅಷ್ಟು ಮಾತ್ರವಲ್ಲ ; ಬಹುಶಃ ನಾನು ಈ ಜನ್ಮದಲ್ಲಿ ಮದುವೆಯಾಗಲಾರೆ." ಎಂದಳು.

* * * *

ಚಂಗ್-ಚಾಂಗ್ ಆಸ್ಪತ್ರೆಗೆ ಭೇಟಿ ಇತ್ತಾಗ ಆಕೆಯ ಪರಿಸ್ಥಿತಿಯು ಸ್ವಲ್ಪ ಸುಧಾರಿಸಿ ಮುಖದ ಮೇಲೆ ಆರೋಗ್ಯದ ಕಳೆ ಕಟ್ಟುತ್ತಿತ್ತು. ನೋಡುತ್ತಲೂ ಒಂದು ವಿಚಿತ್ರ ಆನಂದ ಜ್ಯೋತಿ ಪ್ರದೀಪ್ತವಾದಂತೆ ಕಣ್ಣುಗಳು ಮಿಂಚಿದುವು. ಉತ್ಸಾಹದಿಂದ ನಿಂತ.

ಆದರೆ ಆಕೆ ಮುಂದುವರಿಯಗೊಡದಂತೆ ಅಲ್ಲಿಂದಲೇ ಕೂಗಿದಳು, "ಹೋಗು.........ಈಗಲೇ ಹೊರಟು ಹೋಗು !"

"ನಿನ್ನೊಡನೆ ಒಂದೆರಡು ಮಾತು ಹೇಳಿ ಹೋಗುವೆ."

"ಕೇಳುವುದಕ್ಕೆ ಸಮಯವಿಲ್ಲ."

"ಒಂದೆರಡು ಘಳಿಗೆ.....!"

"ಆ ಒಂದೆರಡು ಘಳಿಗೆಯನ್ನೂ ಸಹ ಮಾ-ಶೋಯೆಗೆ ಮೀಸಲಿಡು."

ಅದೇ ಸಮಯದಲ್ಲಿ ಹಠಾತ್ತನೆ ಬಾಗಿಲ ಬಳಿ ಕಾಣಿಸಿಕೊಂಡಳು ಮಾ-ಶೋಯೆ.

— o —

# ಮಿಲನ

.....ಸುಯ್ ಯಿ ಯಿ ಯಿ ಯಿ ಇ ಇ ಇ ಇ....

ಕುಳಿಗಾಳಿ ಉನ್ಮತ್ತವೇಗದಲ್ಲಿ ಬೀಸಿತು.

ಅಬ್ಬಬ್ಬ! ನಿಶಾಚರ ದೇವತೆಯಾದರೂ ಈ ಚಳಿಗೆ ತತ್ತರಿಸಿ ಹೋಗುವುದೇ ಸೈ!

ಸುಯ್ ಯಿ ಯಿ ಯಿ ಯಿ ಇ ಇ ಇ ಇ.....

ಅಯ್! ಅಯ್‌ಯ್!

ಹಲ್ಲುಗಳ ನಡುಕವನ್ನು ಬಾಯಿ ಮುಚ್ಚಿ ತಡೆ ಹಾಕಿದರೂ ತಡೆದುಕೊಳ್ಳಲಾಗಲಿಲ್ಲ ಟೆಡ್ಡಿಗೆ. ಬಿಸಿ ಮೈ ನೆತ್ತರು ಚಳಿಯಲ್ಲಿ ಹೆಪ್ಪುಗಟ್ಟುತ್ತಿರುವಂತೆ ಭಾಸವಾಯಿತು. ಕೋಟಿನ ಓಪನ್ ಕಾಲರಿನ ಮಡಿಕೆಯನ್ನು ಬಿಚ್ಚಿ ಎದೆ ಕತ್ತು ಮುಚ್ಚಿಕೊಳ್ಳುವಂತೆ ಎಳೆದೆಳೆದು ಮುಚ್ಚಿಕೊಂಡ. ಮೊಣಕಾಲಿನಿಂದ ಕೆಳಗೆ ಎರಡಿಂಬಡಿಕೆಯಾಗಿ ಮಡಿಸಿದ ಕಾಲುಚೀಲದ ಮಡಿಕೆಯನ್ನು ಬಿಚ್ಚಿ ಮೊಣಕಾಲಿನವರೆಗೆ ಎಳೆದುಕೊಂಡು ಕಾಲ್ಗಂಟುಗಳಿಗೆ ಬೆಚ್ಚನ್ನ ತೊಡಿಗೆ ತೊಡಿಸಿ ಚಳಿಗೆ ತಡೆ ಹಾಕಿದ. ಆದರೂ ಕೀಲುಗಳು ಕಳಚಿ ಬೀಳುವಂತಹ ಚಳಿ.

ನಿಃಶಬ್ದ ಶಾಂತ ಮಹಾ ಸಾಮ್ರಾಜ್ಯದಲ್ಲಿ ಪಾದರಕ್ಷೆಗಳ ಲರಕ್ ಲರಕ್‌ನವನೆದ್ದು ಕರ್ಣಪಟಲಗಳಿಗೆ ಬಡಿಯುತಿತ್ತು. ಚಳಿಗಾಳಿಯನು ತಾಳಲಾರದೆ ಕೈಗಳನ್ನು ಕೋಟಿನ ಜೇಬಿನೊಳಗೆ ಇಳಿಬಿಟ್ಟು ರಕ್ಷಣೆ ನೀಡಿದ. ಇಕ್ಕೆಲಗಳ ಪ್ರಾಸಾದಗಳಮೇಲೆ ಕುತೂಹಲತೃಷಿತ ದೃಷ್ಟಿ ಮತ್ತೆ ಹರಿಯುತಿತ್ತು. ಎಷ್ಟೇ ನೋಡಿದರೂ ಸಹ ತಾನು ಬಯಸಿದ ಹಿರಿಯ ಕಟ್ಟಡ ದೃಷ್ಟಿಗೋಚರವಾಗಲಿಲ್ಲ ಮನೆ ಮನೆಯ ನಾಮಫಲಕಗಳನ್ನು ನೋಡುತ್ತಲೇ ಮುಂದುವರಿದ ಟೆಡ್ಡಿ. ಹಿಂದೆ ಮುಂದೆ ಎಷ್ಟು ಅಲೆದರೂ ಆ ಪ್ರಾಸಾದವಾಗಲೀ ಅದರ ನಾಮ ಫಲಕವಾಗಲೀ ಕಾಣಿಸಲಿಲ್ಲ.

ನಾನೇನಾದರೂ ದಾರಿ ತಪ್ಪಿದೆನೇ ಹೇಗೆ?

ಆ ಪ್ರಶ್ನೆ ಎದ್ದೊಡನೆಯೇ ಸ್ವಲ್ಪ ಹೊತ್ತು ಆಲೋಚನೆಗೊಳಗಾದ.

ಸಮಸ್ಯೆಯನ್ನು ಮರು ಕ್ಷಣದಲ್ಲೇ ನಿವಾರಣೆ ಮಾಡಿತು ಸ್ಮೃತಿ. ಈ ರಸ್ತೆಗೆ ತಿರುಗುವಾಗ ರೂಟ್ ನಂಬರ್ ನೋಡಿಕೊಂಡು ಬ್ರ್ಯಾ ಬಾರ್-ಅಟ್-ಲಾ ಮನೆಯ ಪಕ್ಕದಲ್ಲಿ ತಿರುಗಿದ್ದು ಹೌದು. ಇನ್ನು ತಪ್ಪುವ ಬಗೆ ಹೇಗೆ? ಆದರೆ "ಪ್ರಿಂರೋಜ್ ಲೇನ್" ಅಲ್ಲವೇನೋ ಎಂಬಷ್ಟು ಬದಲಾಗಿದೆ ಈ ಲೇನ್. ಕೇವಲ ಎಂಟು ವರ್ಷಗಳಲ್ಲಿ ಎಂತಹ ಅದ್ಭುತ ಬದಲಾವಣೆ? ಇದೊಂದು ಆಶ್ಚರ್ಯಕರ ಪ್ರಾಪರ್ಟೀ ಸರಿ. ಯಾವ ರಸ್ತೆ ಎಂಬುದನ್ನಂತೂ ಪತ್ತೆ ಹಚ್ಚುವಂತಿಲ್ಲ ಈಗ. ಕಳ್ಳದುಡ್ಡಿನಿಂದ ದಿನಕ್ಕೊಂದು ಮಹಲು ಏಳುತ್ತದೆ. ಮಹಲಿನ ಮೇಲೆ ಮಹಲು! ಮೇಲೆ....ಮೇಲೆ. ಇನ್ನೂ ಮೇಲೆ! ಗಗನ ಚುಂಬೀ ಮಹಲುಗಳು! ನಾವು ಮಾತ್ರ ಹೊಟ್ಟೆಗೆ ಹಿಟ್ಟಿಲ್ಲದೆ ಸಾಯಬೇಕು. ಎಲ್ಲೋ ಒಂದಿನ ಹೊಟ್ಟೆಗೆ ಹಿಟ್ಟಿಲ್ಲದೆ ಕಾಸು ಕೊಳ್ಳೆ ಹೊಡೆದರೆ ನೂರಿನ್ನೂರು ಜನ ನಮ್ಮನ್ನು ತೋಳಗಳಂತೆ ಬೆನ್ನು ಹತ್ತಿದರು! ಈ ಮಹಾನುಭಾವರು ದಿನವೂ ಹೊಡೆದರೂ ಕೇಳುವವರಿಲ್ಲ. ಇಷ್ಟೊಂದು ಮಹಲುಗಳು ಎಲ್ಲಿಂದ ಬಂದುವು? ಇವೆಲ್ಲ ಕಷ್ಟಪಟ್ಟು ದುಡಿದು ಕಟ್ಟಿದ ಮನೆಗಳೇ? ಹ ಹ್ಹ ಹ್ಹಾ!

ಕಾಳ ಸಂತೆಯಲ್ಲಿ, ಜೂಜು ಕಟ್ಟೆಗಳಲ್ಲಿ, ಪೇಯ ಸಮುದ್ರದಲ್ಲಿ, ಪಾಪ ಕೂಪದಲ್ಲಿ ಮುಳುಗಿ ಒಂದಕ್ಕೆ ಹತ್ತರಷ್ಟು ಇಪ್ಪತ್ತರಷ್ಟು ನೂರರಷ್ಟು ಸಂಪಾದಿಸಿದ ಹಣ! ಇವರನ್ನೆಲ್ಲಾ ಏಕೆ ಹಿಡಿಯಬಾರದು? ಪೋಲೀಸ್ ಖಾತೆ-ವಿಜಿಲೆನ್ಸ್ ಖಾತೆ ಹುಲ್ಲು ಮೇಯುತ್ತಿವೆಯೇ? ನಮ್ಮಂತಹ ದೀನ ದರಿದ್ರರ ಮೇಲೆ ನೂರು ಕಣ್ಣಿಡುತ್ತಾರೆ ಬೇಕಾದರೆ! ಈ ಜನ ಈ ವ್ಯವಹಾರ, ಈ ಕಾನೂನು ಕಟ್ಟಲೆಗಳು ಏನೆಂಬುದು ಅರ್ಥವೇ ಆಗುವುದಿಲ್ಲ....

ಬೀಸುಗಾಳಿಯಲ್ಲಿ ಬರ್ಫದ ತುಣುಕುಗಳು ರೊಯ್ಯನೆ ತೂರಿ ಬಂದು ಮೈಗೆ ಪಟಪಟನೆ ಸಣ್ಣ ಸಣ್ಣ ಕಲ್ಲುಗಳಂತೆ ಬಡಿದುವು.

ಅಬ್ಬ! ತಡೆಯಲಾರೆ. ಉಣ್ಣೆಯ ಬಟ್ಟೆಯನ್ನೂ ಕೊರೆದು ತೂರಿ ಬರುತ್ತೆ ಚಳಿ. ಒಂದರಮೇಲೊಂದು ಉಣ್ಣೆಯ ಬಟ್ಟೆ ತೊಡಲು ಕಾಳಸಂತೆ ಹಣ ಎಲ್ಲಿಂದ ಬರಬೇಕು ನನಗೆ? ಏಳೆಂಟು ವರ್ಷಗಳಿಂದ ಈ ಚಳಿಯು ಕೊರೆತ–ಇಂಗ್ಲೆಂಡಿನಿಂದ ದೂರವಾದುದರಿಂದ-ಸಂಪೂರ್ಣ ಮರೆತೇ ಹೋಗಿತ್ತು. ಮುಖ್ಯವಾಗಿ ನಾನೀಗ ಬಂದದ್ದೆ ತಪ್ಪು. ಇದ್ದ ಒಂದಂಗಿ

ತಗುಲಿಸಿಕೊಂಡು ಈ ಚಳಿಯು ಹೊಡೆತಕ್ಕೆ ಸಿಕ್ಕಿ ಇನ್ನೇನು ರೋಗವೊ? ಏನು ಕತೆಯೋ? ಕಾಹಿಲೆ ಬಿದ್ದರೆಯಾರಿದ್ದಾರೆ ನನ್ನ ನೋಡಿಕೊಳ್ಳಲಿಕ್ಕೆ? ಮಡದಿಯೆ? ಮನೆಯೆ? ಮಠವೇ?....

ಅಯ್ಯೊ, ದೇವರೇ!

ರೈಲು ದರೋಡೆಯಲ್ಲಿ ಭಾಗವಹಿಸಿದೆನೆಂದು ದೇಶವೆಲ್ಲಾ ನನ್ನ ಬೆನ್ನಟ್ಟಿ ಬಂತು! ಹೊಟ್ಟೆಗೊಂದಿಷ್ಟು ಹಿಟ್ಟು ತುಂಬಿ ಈ ಜೀವವನ್ನು ಬದುಕಿಸಿಕೊಳ್ಳುವುದಕ್ಕೆ ಏನೆಲ್ಲಾ ಕಷ್ಟಪಡಬೇಕು? ಏನು ಕತೆ? ಇಲ್ಲೇನು ನಮಗೆ ಕೆಲಸ ಹೊಂಚಿಟ್ಟಿದ್ದಾರೆಯೆ? ಅಥವಾ "ಬಡವಾಶ್ರಮ" ತೆರೆದಿದ್ದಾರೆಯೆ? ಅಂದಮೇಲೆ ನಾವೊಂದಿಷ್ಟು ಕೊಳ್ಳೆ ಹೊಡೆಯಲೂಬಾರದು? ನಾನೇನು ದಿನಾ ದಿನಾ ಕೊಳ್ಳೆ ಹೊಡೆಯುವ ಕೊಳ್ಳೆಗಾರನೇ? ಎಂದೋ ಒಂದಿನ ಹೊಟ್ಟೆಗಿಲ್ಲದೆ ಸಾಯುವ ಸ್ಥಿತಿಗೆ ಬಂದಾಗ ಹೊಡೆದದ್ದು ತಪ್ಪೆ? ಇಷ್ಟಕ್ಕೂ ರೈಲ್ವೆ ಹಣ ಯಾರದು? ರೂಪಾಯಿಗೆ ಹನ್ನೆರಡಾಣೆ ಟ್ಯಾಕ್ಸ್ ಕೊಡುವುದಿಲ್ಲವೇ ನಾವು? ಅದೆಲ್ಲಾ ಎಲ್ಲಿ ಹೋಯಿತು? ಅಷ್ಟೊಂದು ಟ್ಯಾಕ್ಸ್ ಕಟ್ಟಿ ನಮಗೆ ಬಂದ ಭಾಗ್ಯವೇನು? ಹೊಟ್ಟೆಗೆ ಹಿಟ್ಟಿಲ್ಲದೆ ಸಾಯುವುದೇ? ಹಾಗೆಂದು ಈ ಮನುಷ್ಯ ಜನ್ಮವನ್ನು ವ್ಯರ್ಥಗೊಳಿಸುವುದೇ? ಆದರೂ ದೇಶಬಿಟ್ಟು ಬದುಕಬೇಕಾಯ್ತು ಈ ಬಡ ಜೀವ.

ಲಾರೆನ್ಸ್!

ಶ್!...ಆ ಜಗಮೊಂಡನಿಗಾಗಿಯೇ ನಾನು ಓಡಿ ಬಂದದ್ದು. ಅವನಿಗೊಂದು ರೀತಿ ನೀತಿಗಳೂ ಇಲ್ಲ. ಪ್ರೀತಿ ವಿಶ್ವಾಸಗಳೂ ಇಲ್ಲ. ಕುರ್ಚಿ ಮೇಜುಗಳಂತೆ ಮರ ಮೈ ಹೊಂದಿದಾತ. ಓ...! ಅವಾದರೂ ಬಡಿದರೆ ಪಟ್ಟನೆ ಸದ್ದು ಮಾಡಿಯಾವು. ಇವನಲ್ಲಿ ಅದೂ ಇಲ್ಲ. ಉಹೂ, ಶುದ್ಧ ನಿರ್ಜೀವಿ! ಆದರೂ ಅವನಿಗಾಗಿ ಓಡಿ ಬಂದಿದ್ದೇನಲ್ಲಾ ನಾನೆಂತಹ ಅವಿವೇಕಿ?

ಹುಚ್ಚು ..ಮರುಳು....ಭ್ರಾಂತಿ!

ಈ ಲಾರೆನ್ಸ್ ನನ್ನ ನೆನಪಿಟ್ಟಿದ್ದಾನೆಯೋ ಇಲ್ಲವೋ ಅದೂ ಸಂದೇಹ, ನಾನಂತೂ, ಎದ್ದು ಬಿದ್ದು ಚಳಿ ಗಾಳಿಯನ್ನು ಲೆಕ್ಕಿಸದೆ ಅವನಿಗಾಗಿ ಅರೇಬಿಯಾದಿಂದ ಇಲ್ಲಿಗೆ ಬರಬೇಕಾದರೆ ಎಷ್ಟು ಪಾಡು ಪಟ್ಟಿರಲಿಕ್ಕಿಲ್ಲ?

ನನಗೆ ದುಡ್ಡೋ ದುಗ್ಗಾಣಿಯೋ ಸುಖ ಪ್ರಯಾಣ ಮಾಡಲಿಕ್ಕೆ? ಆ ಪುರ ಜೀವಿಗೆ ನನ್ನ ಮೇಲೆ ವಿಶ್ವಾಸವುಂಟೋ ಇಲ್ಲವೋ? ಅವನ ಬಗೆ ಏನೋ ಒಂದು ರೀತಿ. ಆಗೆಲ್ಲಾ ವಿಶ್ವಾಸದ ನಾಟಕ ಆಡುತ್ತಿದ್ದ. ಈಗ ಹೇಗಿದ್ದಾನೋ ದೇವರಿಗೇ ಗೊತ್ತು. ಆದರೂ ಅವನಿಗಾಗಿ ಓಡಿ ಬಂದಿದ್ದೇನೆ. ಈಗ ಯೋಚಿಸಿದರೆ ಬಹಳ ತಪ್ಪು ಮಾಡಿದೆ ಎನ್ನಿಸುತ್ತದೆ. ಆದರೆ, ಆದಿನ ನಾವು ಅತ್ಯಂತ ವಿಶ್ವಾಸಪೂರ್ವಕವಾಗಿ ಮಾಡಿಕೊಂಡ ಒಪ್ಪಂದವನ್ನು ಮುರಿಯಲು ಮನಸ್ಸಾಗಲಿಲ್ಲ. ಇನ್ನಾವ ತಪ್ಪು ಮಾಡಿದರೂ ನಾನು ಮಿತ್ರದ್ರೋಹ ಮಾಡಲಾರೆ. ಒಪ್ಪಂದವನ್ನು ಮುರಿದು ಸತ್ಯದ ಮುಖಕ್ಕೆ ಮಸಿ ಬಳಿಯು ವುದು ನನಗೆ ಇಷ್ಟವಿಲ್ಲ. ಅಂದು ಅವನಿಗೆ ಮಾತು ಕೊಟ್ಟಿದ್ದೆ. ಇಂದು ಈ ರಾತ್ರಿ ಒಂದು ಮೂವತ್ತಕ್ಕೆ ಬ್ರಾಡ್‌ವೇ ರೆಸ್ಟೋರೆಂಟಿನ ಬಳಿ ನಿನಗಾಗಿ ಕಾದಿರುವೆ ಎಂದು. ಏನೇ ಬರಲಿ, ಆ ಮಾತಿಗಂತೂ ತಪ್ಪಬಾರದಷ್ಟೆ?

ಅವನೋ....ನಿರ್ಜೀವಿ ಲಾರೆನ್ಸ್!

ಹೊತ್ತಿಗೆ ಸರಿಯಾಗಿ ಇಲ್ಲಿಗೆ ಬಂದರಂತೂ ಆಯಿತು. ಇಲ್ಲದಿದ್ದಲ್ಲಿ ನಾನು ಬಂದದ್ದು ವ್ಯರ್ಥ. ಓ....ಎಷ್ಟೆಲ್ಲ ಕಷ್ಟಪಟ್ಟು ಬಂದೆ! ಆ ಹಳೆಯ ಪ್ರೀತಿ ವಿಶ್ವಾಸಗಳನ್ನು ಕಳೆದುಕೊಳ್ಳಲು ನಿಜವಾಗಿಯೂ ನಾನು ತಯಾ ರಿಲ್ಲ. ಎಲ್ಲಾ ಗುಣಗಳಿಗಿಂತಲೂ ಪ್ರೀತಿ ವಿಶ್ವಾಸ ದೊಡ್ಡದು. ಅದನ್ನಿಷ್ಟು ಉಳಿಸಿಕೊಳ್ಳದ ಮೇಲೆ ಬದುಕುವುದಾದರೂ ಏಕೆ?

ದೇವರಿಗಾಗಿ ಪ್ರೀತಿಸುವೆ.

ಹೊತ್ತು ಒಂದರ ಅಂಚನ್ನು ದಾಟಿತು. ಈಗೀಗ ರಸ್ತೆಯಲ್ಲಿ ನಾಗರಿಕರು ಕಾಣಿಸುತ್ತಿಲ್ಲ. ರಾತ್ರಿಯ ಪೋಲೀಸರು ಅಲ್ಲಲ್ಲಿ ಗಸ್ತು ತಿರುಗುತಿದ್ದಾರೆ. ರಸ್ತೆಗಳು ನಿರ್ಮಾನುಷವಾಗಿ ರುದ್ರಶಾಂತಿಯನ್ನು ಪಡೆದು ವಿಶ್ರಮಿಸಿವೆ. ಸನಿಹದಲ್ಲಿ ಪೋಲೀಸ್ ವ್ಯಾನೊಂದು ಸರ್ರನೆ ಸಾಗಿ ಹೋಯಿತು. ಅವರ ಕಣ್ಣುಗಳು ತನ್ನ ಮೇಲೆ ಬಿದ್ದರೂ ಲೆಕ್ಕಿಸದೆ ಹೆಜ್ಜೆ ಹಾಕಿದ ಟೆಡ್ಡಿ. ರಸ್ತೆಯಂಚಿನ ದೀಪದ ನೆಲೆಯನ್ನು ದಾಟಿ ಮುಂದೆ ಹೋಗುತಿದ್ದಂತೆ ನೆರಳು ನೀಳವಾಗಿ ಮುಂದುಗಡೆ ಹರಿಯುತ್ತಾ ದಾರಿ ತೋರುವ ಅನುಗನಂತೆ ಮುನ್ನಡೆಯಿತು. ಉದ್ದಂಡವಾಗಿ ಬೆಳೆಯುತಿದ್ದ ನೆರಳನ್ನೇ ನಿಟ್ಟಿಸುತ್ತ ನಡೆದ ಟೆಡ್ಡಿ.

ಹಿಮಗಾಳಿ ಭರ್ರನೆ ಬೀಸಿ ಮೈ ನಡುಗಿಸಿತು.

ಅಹಹಹ ...!

ಇಲ್ಲೇ ಎಲ್ಲೊ ಅಂಕಲ್ ವ್ಹೀಲರ್ ಮನೆ ಇತ್ತು ಅದೂ ಸಹ ಕಾಣಿಸುತ್ತಿಲ್ಲ....ಅಥವಾ ಅವನೂ ಸಹ ಮನೆಯನ್ನು ಮಹಲಾಗಿ ಪರಿವರ್ತಿಸಿದನೋ ಹೇಗೊ! ಎಲ್ಲರಿಗೂ ಕಾಳಸಂತೆ ಹಣ ಬಂದಿರುವಾಗ ಈತನಿಗೇಕೆ ಬಂದಿರಬಾರದು ? ಅಂತೂ ಈ ಪ್ರಿಂರೋಜ್ ಲೇನ್ ನೋಡಿದರೆ ಚಿತ್ತ ಆನಂದಾತಿಶಯದಿಂದ ಪ್ರಫುಲ್ಲವಾಗುತ್ತದೆ. ಇಲ್ಲಿ ವಾಸಿಸುವವರು ಇನ್ನೆಷ್ಟು ಪುಣ್ಯವಂತರೋ....

ಚರ್ಚಿಲ್ ರೋಡನ್ನು ಹಾಯ್ದು ಕ್ವೀನ್ ವಿಕ್ಟೋರಿಯಾ ಟರ್ಮಿನಸ್ ಬಳಿಗೆ ಬಂದಾಗ ಚಳಿಯ ಹೊಡೆತಕ್ಕೆ ಕಾಲುಗಳ ಚರ್ಮ ಚಿಟ ಚಿಟ ಬಿರಿಯ ಹತ್ತಿತು. ಕೆನ್ನೆ ತುಟಿಗಳೂ ಬಿರಿಯುತ್ತಿವೆ. ಗೆಳೆಯ ಲಾರೆನ್ಸ್‌ಗೋಸ್ಕರ ಬಂದು ಇಷ್ಟೆಲ್ಲಾ ಗೋಳು. ಅವನೆಲ್ಲಿ ಕುಡಿದು ಬಿದ್ದಿದ್ದಾನೋ ಜಗವೊಂಡ ....ಒಂದು ವೇಳೆ ಅವನು ಬಾರದೇ ಹೋದರೆ....ತನ್ನ ನೀತಿಯಲ್ಲಿ ಮುಳುಗಿ ನನ್ನನ್ನು ಸಂಪೂರ್ಣ ಮರೆತಿದ್ದರೆ.....ಆಯಿತು. ದೇವರೆ ಗತಿ.....ನನ್ನ ಪಯಣ ವ್ಯರ್ಥ. ಪ್ರಾಯಶಃ ಅವನು ಹೊಟ್ಟೆ ಬಟ್ಟೆಗೆ ಸಾಕಷ್ಟು ಗಳಿಸಿರಬಹುದು. ಆದರೇನು? ಶುದ್ಧ ಮರಜೀವಿ ! ಆತನಿಗೆ ಆತ್ಮವೂ ಇಲ್ಲ ; ಹೃದಯವೂ ಇಲ್ಲ.

ಈ ವ್ಯರ್ಥ ಸಾಹಸವೂ ಸಹ ಒಂದು ಮಹಾ ಸಾಹಸವೇ ! ನಾನಲ್ಲದೆ ಬೇರೆ ಇನ್ನಾರೇ ಆಗಿದ್ದರೂ ಈ ಜಗವೊಂಡನಿಗಾಗಿ ಓಡಿ ಬರುವ ಸಾಹಸ ಮಾಡುತ್ತಿರಲಿಲ್ಲ. ಅದರಲ್ಲೂ ಈ ಚಳಿ ದಿನಗಳಲ್ಲಿ ಕೈಯಲ್ಲಿ ಕಾಸಿಲ್ಲದ ದುರ್ದಿನಗಳಲ್ಲಿ ಪಯಣಿಸುವ ಭಂಗವಾದರೂ ಯಾರಿಗೆ ಬೇಕು ? ಅಂದು ಅವನಿಗೆ ಕೊಟ್ಟ ಮಾತಿಗಾಗಿ ; ಆದ ಒಪ್ಪಂದಕ್ಕಾಗಿ. ಇಂದು ಹಣೆ ಮಣಿಯುವುದು ನನ್ನ ಧರ್ಮವಾಗಿತ್ತು ಮಣಿದೆ....ಅಂತಲೇ.....

ಇಂದಿಗೆ ಎಂಟು ವರ್ಷಗಳ ಹಿಂದೆ ಒಂದು ಸುಂದರ ಸಂಜೆ ಬ್ರಾಡ್‌ವೇ ರೆಸ್ಟೋರೆಂಟಿನಲ್ಲಿ ಬಾಲ್‌ಡ್ಯಾನ್ಸ್ ಇತ್ತು. ಅಲ್ಲಿ ಆಮೋದ-ಪ್ರಮೋದಗಳನ್ನು ಮುಗಿಸಿ ಹೊರಬಿದ್ದಾಗ ಮಧ್ಯರಾತ್ರಿ. ಲಾರೆನ್ಸ್ ಟಿಡ್ಡಿಯುವರು

ಕೈ ಕೈ ಹಿಡಿದುಕೊಂಡೇ ಹೊರ ಬಂದರು. ಗೆಳೆಯನನ್ನು ಆತ್ಮೀಯತೆಯಿಂದ ಆಲಂಗಿಸಿಕೊಂಡು ಟೆಡ್ಡಿ ಕೇಳಿದ, "ಪುನರ್ಬೇಟಿಯೆಂದು ಲಾರೆನ್ಸ್?"

"ನಾನು ಫ್ರಾನ್ಸ್ ಕಡೆ ಹೋಗೋಣವೆಂದುಕೊಂಡಿದ್ದೇನೆ."

"ಅದೇಕೆ ?"

"ಎಲ್ಲಾದರೂ ಹೊಟ್ಟೆಗೆ ಬಟ್ಟೆಗೆ ಸರಿಯಾಗಿ ಹೊಂಚಿಕೊಳ್ಳದಿದ್ದಲ್ಲಿ ಬದುಕು ವ್ಯರ್ಥ. ಯಾವುದಾದರೊಂದು ಕೆಲಸ ಹುಡುಕಿಕೊಳ್ಳುವುದೊಳ್ಳೆಯದು."

"ವಾಸ್ತವ್ಯ...."

"ನಾನು ನಾಳೆಯೇ ಹೊರಟರೂ ಹೊರಟೆ."

"ಓ....ಮತ್ತೆ ಸಿಗುವುದೆಂದು ?"

"ಎಲ್ಲಾದರೂ ಒಂದು ಕೆಲಸ ಸಿಕ್ಕಿ ನೆಲೆ ನಿಲ್ಲುವವರೆಗೆ ಬರಲಾರೆನೆಂದು ತೋರುತ್ತೆ. ಒಂದು ವೇಳೆ ಇಲ್ಲೇ ಸಿಕ್ಕಿದರೆ ಇಲ್ಲೇ ಉಳಿಯುವೆ. ಇಲ್ಲದಿದ್ದಲ್ಲಿ ಎಲ್ಲಿ ಸಿಗುತ್ತೋ ಅಲ್ಲೇ ಉಳಿಯುವೆ. ನನ್ನ ನೆಲೆಯನ್ನಂತೂ ಈಗ ಹೇಳುವಂತೆಯೇ ಇಲ್ಲ." ಒಂದು ಘಳಿಗೆ ತಡೆದು ಲಾರೆನ್ಸ್ ಕೇಳಿದ ನೀನೇನು ಮಾಡುವೆ ? ನಿನ್ನ ಗುರಿಯೇನು ?"

"ಇಲ್ಲಿ ಕೆಲಸಕ್ಕಾಗಿ ಅಲೆದಲೆದು ಸಾಕಾಗಿದೆ. ನಾನು ಯಾವುದಾದರು ಫಾರಂ ಕಡೆ ಹೋದರೂ ಹೋದೆ. ಕೆಲವು ದಿನ ತಣ್ಣಗಿರಬೇಕೆಂದು ಮನಸ್ಸು."

"ಓಹೋ !"

"ಈ ಪಟ್ಟಣಗಳ ನೆಲೆಯಲ್ಲಿ ಎಷ್ಟು ಹಣವಿದ್ದರೂ ಸಾಲುವುದಿಲ್ಲ."

"ನಿಜ; ಅದು ಒಳ್ಳೆಯ ಯೋಚನೆ. ಫಾರಂ ಕಡೆ ಹೋದರೆ ಕೆಲಸಕ್ಕೇನೂ ಕೊರತೆಯಿಲ್ಲ. ನೆಮ್ಮದಿಯ ಜೀವನ....ಸಂತೋಷವಾಗಿರಬಹುದು."

"ಲ್ಯಾರೀ, ನಮ್ಮ ಸ್ಥಿತಿಗತಿ ಉತ್ತಮವಾಗಬೇಕಾದರೆ ಕನಿಷ್ಠಪಕ್ಷ ಏಳೆಂಟು ವರ್ಷಗಳಾಗುತ್ತವೆ. ಅನಂತರವೇ ನಮ್ಮ ಮುಂದಿನ ಭೇಟಿಯನ್ನು ಗೊತ್ತುಪಡಿಸಿಕೊಳ್ಳೋಣ. ಕೊನೆಯ ಅಂಕವಾಗಿ ನಾವು ಇಷ್ಟೆಲ್ಲಾ ಖರ್ಚುಮಾಡಿ ಧನಮಾನ್ಯರಂತೆ ಸಂತೋಷಪಟ್ಟಿದ್ದೇವೆ. ಇದರ ಸವಿ

ನೆನಪಿಗಾಗಿ ಮುಂದೆಂದಾದರೂ ಇದೇ ಹೊತ್ತಿನಲ್ಲಿ ಇದೇ ಘಳಿಗೆಯಲ್ಲಿ ಇಲ್ಲಿಯೇ ಪುನರ್ಭೇಟಿಯಾಗೋಣ. ಆಯಿತೇ ಲಾರೆನ್ಸ್ ?"

"ಓ....! ಆಗಬಹುದು."

"ಗಂಟೆ ನೋಡು ಎಷ್ಟು ? ನನ್ನ ಗಡಿಯಾರ ಸ್ವಲ್ಪ ಹಿಂದಾಗಿದೆ." ಗಡಿಯಾರವನ್ನು ನೋಡಿಕೊಳ್ಳುತ್ತಾ ನುಡಿದ ಟೆಡ್ಡಿ.

"ಒಂದು ಮೂವತ್ತು."

"ಹಾಗಾದರೆ ಇದೇ ಸಮಯಕ್ಕೆ ಇಲ್ಲಿ ಸೇರೋಣವೆ ?"

"ಸರಿ....ಯಾವ ಇಸವಿಯಲ್ಲಿ ?"

"ಇಂದಿಗೆ ಎಂಟುವರ್ಷಗಳಿಗೆ ಎಂದಿಟ್ಟುಕೊಳ್ಳೋಣವೇ ?"

"ಆಗಲಿ...." ಹುಬ್ಬೇರಿಸಿದ ಲಾರೆನ್ಸ್.

"ಅಂದರೆ, ಸಾವಿರದೊಂಭೈನೂರ ಅರವತ್ತರ ಅಕ್ಟೋಬರ್ ಇಪ್ಪತ್ತೇಳನೆಯ ತೇದಿ ; ರಾತ್ರಿ ಒಂದು ಮೂವತ್ತಕ್ಕೆ !....ಆಗಬಹುದೇ ?"

"ಓ ....ಆಗಲಿ."

"ಖಂಡಿತಾ ನೀನು ಬರುತ್ತೀಯಷ್ಟೇ ? ಒಬ್ಬರು ಬಂದು ಇನ್ನೊಬ್ಬರು ಬರದಿರುವುದು ಸರಿಯಲ್ಲ."

"ಛೆ ! ಛೆ ! ನನ್ನ ಆತ್ಮ ಸಾಕ್ಷಿಯಾಗಿ ಮಾತ್ರವಲ್ಲ ; ಭಗವಂತನ ಸಾಕ್ಷಿಯಾಗಿಯೂ....ಖಂಡಿತ ಬರುವೆ ?"

"ನಿನಗೆ ಆತ್ಮ.....ದೇವರು....ಮತ್ತೊಂದು.....ಮಗದೊಂದು ಇದ್ದರಲ್ಲವೇ ?"

ಇಬ್ಬರೂ ಕಿಲ ಕಿಲ ನಕ್ಕರು.

"ನೋಡುತ್ತಿರು ; ನೀನು ತಪ್ಪಿದರೂ ನಾನು ತಪ್ಪುವುದಿಲ್ಲ."

"ಪರವಾಯಿಲ್ಲ, ನಿನ್ನಲ್ಲಿ ಅಷ್ಟು ನೆಚ್ಚುಂಟಲ್ಲ ?"

"ನೆಚ್ಚು ಮಾತ್ರವೇನು ? ಕೆಚ್ಚೂ ಉಂಟು."

ಇಬ್ಬರ ಮುಖದಲ್ಲೂ ಮಂದಹಾಸ ಮೂಡಿ ಮಂಗಳಮಯವಾಯಿತು.

ಕೊನೆಯ ಪ್ರಕರಣವಾಗಿ ಇಬ್ಬರೂ ಸ್ನೇಹಾತಿರೇಖದಿಂದ ಗಾಢಾಲಿಂಗನ ಮಾಡಿಕೊಂಡು ಹೃದಯಕ್ಕೆ ಹೃದಯವನ್ನೊತ್ತಿ ಆನಂದದ ಸವಿ

ಯುಂಡು, ಕೆನ್ನೆಗಳಿಗೆ ಹೂ ಮುತ್ತನೊತ್ತಿದರು.....ಅನಂತರ ಒಬ್ಬರಿಗೊಬ್ಬರು ಬೀಳ್ಕೊಡುವಾಗ ಅಗಲಿಕೆಯ ವ್ಯಾಕುಲತೆ ದೇಹದ ಶಕ್ತಿಯ ಕಣಕಣವನ್ನು ಕುಂದಿಸುವಂತೆ ಭಾಸವಾಯಿತು. ಅಂತಿಮವಾಗಿ 'ಗುಡ್ ನೈಟ್' ಹೇಳುವಾಗ ಮುಖಮಂಡಲ ಕೆಂಪು ತಳೆಯಿತು. ಇಬ್ಬರೂ ಪ್ರಸಕ್ತ ಸನ್ನಿವೇಶಕ್ಕೆ ತಲೆಬಾಗಿ ಬಲವಂತದಿಂದ ಅಗಲುತ್ತ-'ನಿನಗೆ ಶುಭವಾಗಲಿ' ಎಂದು ಹಾರೈಸಿಕೊಂಡರು, ಅತ್ಯಂತ ನೈರಾಶ್ಯಪೂರ್ಣ ವಾಣಿಯಲ್ಲಿ.

ಅಂದಿನಿಂದ ಇಂದಿನವರೆಗೆ ಅದಾವ ಮಾಯಕತೆಯಿಂದಲೋ ಒಬ್ಬರ ಸುಳಿವು ಇನ್ನೊಬ್ಬರಿಗೆ ಹತ್ತದಷ್ಟು ದೂರವಾಗಿದ್ದರು. ಫ್ರಾನ್ಸ್ ಕಡೆ ಹೊರಟ ಲಾರೆನ್ಸ್ ಅಲ್ಲೇ ಉಳಿದಿದ್ದಾನೋ, ಅಥವಾ ಇಂಗ್ಲೆಂಡಿಗೆ ಹಿಂದಿರುಗಿದ್ದಾನೋ ಎಂಬುದೂ ಸಹ ತಿಳಿದು ಬಂದಿರಲಿಲ್ಲ. ಕಳೆದ ಎಂಟು ವರ್ಷಗಳ ಹಿಂದೆ ತಾಯ್ನಾಡನ್ನು ಬಿಟ್ಟಮೇಲೆ ಇದೇ ಸಂಜೆ ಇಲ್ಲಿಗೆ ಬಂದಿದ್ದ ಟೆಡ್ಡಿ. ಬರುವಾಗ ಬೀದಿಯಲ್ಲಿ ದೀಪಗಳು ಹತ್ತಿಯಾಗಿತ್ತು. ಗ್ರೇಟ್ ಗ್ರ್ಯಾಂಟ್ ಹೋಟೆಲ್ ಹತ್ತಿ ಯಾವ ಕಾಲವಾಗಿತ್ತೋ. ಅಲ್ಲಿ ಉಣ್ಣದಿದ್ದರೂ ಚಿಂತೆಯಿಲ್ಲ ಒಂದು ಚೂರು ರೊಟ್ಟಿಯನ್ನಾದರೂ ತಿನ್ನಬೇಕೆಂಬ ಅಭಿಲಾಷೆ ಮೂಡಿತು. ಹೋಗಿ ಕುಳಿತು ಎದ್ದುದಷ್ಟೆ. ಆರು ಪೌಂಡು ಕೈಬಿಟ್ಟುವು. ಆ ಒಂದು ಶೀಶೆಯನ್ನು ಮುಟ್ಟದಿದ್ದರೆ ಎಷ್ಟೋ ಚೆನ್ನಾಗಿತ್ತು ಎಂದುಕೊಂಡ. ಅಲ್ಲಿ ಕುಳಿತು ಸುಖ ಭೋಜನ ನಡೆಸುತ್ತಿದ್ದವರನ್ನೆಲ್ಲಾ ಒಮ್ಮೆ ನಿಟ್ಟಿಸಿ ನೋಡಿದ. ದೇವರ ದಯದಿಂದ ಅಲ್ಲಿ ಗುರ್ತಿನವರಾರೂ ಕಾಣ ಸಿಗಲಿಲ್ಲ. ತಾನೀಗ ಗಡ್ಡ ಬೆಳೆಸಿರುವುದರಿಂದ ಅಷ್ಟು ಸುಲಭವಾಗಿ ಗುರ್ತು ಹಿಡಿಯುವುದೂ ಸಹ ಕಷ್ಟವೇ. ಎಲ್ಲರನ್ನೂ ಮತ್ತೊಮ್ಮೆ ನೋಡುತ್ತಾ ಮೆಟ್ಟಲಿಳಿದ.

.....ಛೆಃ! ಏನೆಲ್ಲಾ ಯೋಚನೆ ಬರುತ್ತೆ ? ಗುರ್ತಿನವರು ಕಂಡರೂ ಸಹ ಏನು ? ನಾನಂತಹ ಮಾಡಬಾರದ ತಪ್ಪು ಮಾಡಿರುವುದೇನು ? ಆ ಫಾರಂನಲ್ಲಿದ್ದಾಗ ಗದ್ದೆ ಬಯಲಿನಲ್ಲಿ ರೈಲು ಕೆಟ್ಟು ನಿಂತಿತ್ತು. ಆಗ.... ಆಗ..... ಆ ಕತ್ತಲ ಸಮಯದಲ್ಲಿ ಸುಸುಳಿ ಹಣದ ಥೈಲಿ ಹೊತ್ತದ್ದು ಮಹಾ ತಪ್ಪೆ ? ಇಷ್ಟಕ್ಕೂ ನಾವು ರೈಲಿನ ಮೇಲೆ ಧಾಳಿ ಮಾಡಿ ದರೋಡೆ ಕೋರ

ರಂತೆ ಹಣವನ್ನು ದೋಚಲಿಲ್ಲ! ಅದೇನು ನನಗೊಬ್ಬನಿಗೆ ದೊರೆಯಿತೇ? ಅದರಲ್ಲಿ ಎಷ್ಟು ಜನರಿಗೆ ಹಂಚಿಕೆಯಾಗಲಿಲ್ಲ? ನನಗೆ ಸಿಕ್ಕಿದ್ದಾದರೂ ಎಷ್ಟು....? ಐವತ್ತರ ಒಂದಂಶ ಸಹ ದೊರೆಯಲಿಲ್ಲ. ಆದರೂ ನನ್ನ ಮೇಲೆ ಪಟ್ಲೆ ಹಾಕಿ ಏನೆಲ್ಲ ಮಾಡಿದರು ಈ ಜನ? ಹೆಸರು ಬದಲಾಯಿಸಿಕೊಂಡು, ತಲೆ ಮರೆಸಿಕೊಂಡು, ಗಡ್ಡ ಬೆಳೆಸಿಕೊಂಡು ತಿರುಗುವ ಸ್ಥಿತಿಗೆ ತಂದಿಟ್ಟಿತು ಹಾಳು ಸರಕಾರ! ಅದರ ಕೈಗೆ ಸಿಗದಂತೆ ದಿನಗಳೆಯಬೇಕಾದರೆ ಎಷ್ಟು ಪಾಡು ಪಟ್ಟಿದ್ದಾಯ್ತು? ಸದ್ಯ, ಕತೆ ಹಳೆಯದಾಯಿತು. ಈಗ ಯಾರಿಗೂ ಅದರ ನೆನಪು ಉಳಿದಿರಲಾರದು. ಅಷ್ಟಾದರೆ ಬದುಕಿತು ಬಡಜೀವ.

ಗ್ರೇಟ್ ಗ್ರ್ಯಾಂಟ್ ಹೋಟೆಲ್ ಬಿಟ್ಟು ಹೊರ ಬಂದಾಗ ಹೊತ್ತು ಹನ್ನೊಂದರ ಅಂಚನ್ನು ಸಮೀಪಿಸುವುದರಲ್ಲಿತ್ತು. ನಕ್ಷತ್ರ ಲೋಕದಂತೆ ಎಲ್ಲಿಂದ ಎಲ್ಲಿಯವರೆವಿಗೂ ವಿದ್ಯುಚ್ಛಕ್ತಿಯ ದೀಪಗಳು ಮಂಜಿನ ತೆರೆ ಯೊಳಗೆ ಜಗ ಜಗಿಸುತ್ತಿವೆ. ಅಲ್ಲಿಂದ ಏನಿಲ್ಲೆಂದರೂ ಗ್ರೀನ್ ವುಡ್ ಲೇನ್ ಏಳೆಂಟು ಮೈಲಿಗಳಾದರೂ ಇದ್ದಿರಬಹುದು. ಈಗಲೇ ಹೊರಟರೆ ಸರಿ ಹೋಗುತ್ತದೆಂದು ಬಸ್ಸಿನ ನಿಲ್ದಾಣಕ್ಕಭಿಮುಖವಾಗಿ ಹೊರಟ. ಹಾದಿ ಕಳೆದು ಬಸ್ಸಿನ ನಿಲ್ದಾಣ ಮುಟ್ಟುವಷ್ಟರಲ್ಲಿ ಬಸ್ಸು ಅಣಿಯಾಗಿ ನಿಂತಿತ್ತು. ಕೈಯಲ್ಲಿದ್ದ ಬ್ಯಾಗಿನ ಬೆಲ್ಟನು [illegible]ಂಡಿಗಳಚಿ ಉದ್ದಗೊಳಿಸಿ ಭುಜಕ್ಕೆ ನೇತು ಹಾಕಿಕೊಂಡು ಬಸ್ಸಿನಲ್ಲಿ ಮೈ ಮುದುಡಿ ಕುಳಿತ ಟೆಡ್ಡಿ. ನೋಟ ಸಾಲು ಮಹಲುಗಳ ವೈಭವವನ್ನು ಗಮನಿಸುತಿತ್ತು. ಕೇವಲ ಎಂಟು ವರ್ಷಗಳಲ್ಲಿ ಎಂಥ ಉದ್ದಂಡ ಬದಲಾವಣೆ? ಬೀದಿ ಬೀದಿಗಳೂ ಕೇರಿ ಕೇರಿ ಗಳೂ ಹೊಸಹೊಸ ರೂಪುರೇಷೆ ತಳೆದಿವೆ. ಇದೇನು ಸಾಮಾನ್ಯ ಪ್ರಗತಿ ಯಲ್ಲ. ಆದರೂ ಕಾಸು ಕಾಸಿಗೂ ಬೆನ್ನು ಹತ್ತುತ್ತೆ ಈ ಸರಕಾರ!

ಚಳಿ.... ಚಳಿ..... ಚಳಿ

ತಡೆಯಲಾಗದ ಚಳಿ. ಈ ಸಾಮಾನ್ಯ ಉಣ್ಣೆ ಬಟ್ಟೆಗಳು ಭಯಂಕರ ಚಳಿಗೊಂದು ಈಡೆ? ಕಾಸು ಕಾಸಿಗೂ ಕರುಬುವ ಸರಕಾರ ಚಳಿಗಾಳಿ ಯಲ್ಲಿ ಕೊರೆದು ಸಾಯುವಾಗ ಸುಖವಾಗಿ ನಿದ್ದೆ ಮಾಡುತ್ತದೆ....ಜಗತ್ತೇ ಹಾಗೆ! ಸ್ವಾರ್ಥ.....ಎಲ್ಲಿ ನೋಡಿದರೂ ಸ್ವಾರ್ಥ. ಸದ್ಯ, ಈದಿನದ ಗಡು

ಪೊಂದು ಕಳೆದರೆ ಸಾಕು. ಮತ್ತೆ ಅರಬ್ಬೀ ದೇಶಗಳ ಕಡೆ ಹೋಗಿಬಿಡುವೆ. ಇಲ್ಲಿಯೇ ಇದ್ದರೆ ಇಲ್ಲಿಗಾಗುವಷ್ಟು ಉಣ್ಣೆ ಬಟ್ಟೆಗಳನ್ನು ಎಲ್ಲಿಂದ ತರಲಿ ?

ಗೂ ಊ ಊ ಊ ! ಗೂ ಊ ಊ ಊ !

ಹಾಳು ಗೂಗೆಗಳೇಕೆ ಹೀಗೆ ಕೂಗುತ್ತಿವೆ ?

ಇವುಗಳ ಗಂಟಲೇಕೆ ಕಟ್ಟಿಹೋಗಬಾರದು ?

ಗೂ ಊ ಊ ಊ ಊ ! ಗೂ ಊ ಊ ಊ ಊ !

ಶ್ಯ !! ಯಾರ ಪತನಕ್ಕೆ ನಾಂದಿ ಹಾಡುತ್ತಿದೆಯೋ ! ಇದುವರೆವಿಗೆ ಇನ್ನೆಷ್ಟು ಮಂದಿಗೆ ನೀರುಕೊಟ್ಟು ಮಣ್ಣುಕೊಟ್ಟು ಆಗಿದೆಯೋ....ದೇವರೇ ಬಲ್ಲ.

ಬಸ್ಸು ನಿಂತಿತು. ಟೆಡ್ಡಿ ಇಳಿದ.

ನೋಟದ ಕಕ್ಷೆಯವರೆವಿಗೂ ಹಬ್ಬಿರುವ ಮಂಜಿನ ಮಂದಧಾರೆ ನಯನ ಯುಗ್ಮಗಳನ್ನು ಅತ್ಯಂತ ಅಪೂರ್ವ ಶಾಂತಿಪ್ರದ ಕಾಂತಿಯಿಂದ ಸ್ನಿಗ್ಧಗೊಳಿಸುತಿತ್ತು. ಸಹಿಸಲಾಗದ ಚಳಿಯು ಕೊರೆತವಿದ್ದರೂ ಚಿತ್ತ ಪರಿತೃಪ್ತಗೊಂಡಿತು. ಆ ಧವಳಿಮೆಯ ಪವಿತ್ರಧಾರೆಯ ಅತುಲ ಸೌಂದರ್ಯರಾಶಿಯನ್ನು ಹೀರುತ್ತ ನಡೆದ ಟೆಡ್ಡಿ.

ಕುಳಿರ್ಗಾಳಿ 'ರುಂ' ನೆ ಬೀಸಿತು.

ಅ ಹ ಹ ಹ ಹ !

ಮಧ್ಯರಾತ್ರಿ ಕಳೆದನಂತರ ಗಾಳಿಯು ವೇಗ ತೀವ್ರಗೊಳ್ಳುತ್ತಿರುವುದು ಮಾತ್ರವಲ್ಲ, ಕಲ್ಲುಗಳನ್ನು ಬೀಸಿ ಒಗೆದಷ್ಟು ವೇಗವಾಗಿ ಬರ್ಫದ ತುಣುಕುಗಳು ಗಾಳಿಯೊಂದಿಗೆ ಮೈಗೆ ಛಟ್ ಪಟ್ಟನೆ ತಾಗುತ್ತಿವೆ. ಮೂಳೆ ಮೂಳೆಯನ್ನೂ ನಿಟಿ ನಿಟಿ ಮುರಿಯುವಂತಹ ಚಳಿ. ನೆತ್ತರು ಹೆಪ್ಪುಗಟ್ಟುತ್ತಿದೆಯೋ ಎಂಬಷ್ಟು ನರ ನರಗಳು ಬಿಗಿದುಕೊಳ್ಳುತ್ತಿವೆ. ಅಯ್ಯ್ ! ಅಯ್ಯ್ ಯ್ಯ್ ! ಅಬ್ಬಬ್ಬಬ್ಬ ! ತಾಳಲಾರೆನೋ, ತಾಳಲಾರೆ !

ಓ....ಲಾರೆನ್ಸ್ !....ಅಪೂರ್ವ ಗೆಳೆಯ ಲಾರೆನ್ಸ್ ! ನಿನ್ನನ್ನೊಮ್ಮೆ ನೋಡಿದರೆ ಆಯಿತು. ಆಮೇಲೆ ಇಲ್ಲಿಂದ ಹೊರಟು ಬಿಡುವೆ. ಅನಂತರ ಇಂಗ್ಲೆಂಡಿಗೂ ನಮಸ್ಕಾರ ! ಈ ಚಳಿ ಗಾಳಿಗೂ ನಮಸ್ಕಾರ ! ಆತ್ಮೀಯ ಗೆಳೆಯ ಲಾರೆನ್ಸನಿಗೂ ದೀರ್ಘ ದಂಡವತ್ ಪ್ರಣಾಮ !

ಫ್ರಿಂರೋಜ್ ಲೇನಿನ ಬಸ್ಸು ನಿಲ್ದಾಣ ಗ್ರೀನ್‌ವುಡ್ ಲೇನಿಗೆ ಹತ್ತಿರ. ಒಂದೆರಡು ಫರ್ಲಾಂಗು ದಾಟಿದರಾಯಿತು. ಅನಂತರ ಗ್ರೀನ್ ವುಡ್ ಲೇನ್ ಭವ್ಯ ಪ್ರಾಸಾದಗಳ ಶ್ರೇಣಿಯಲ್ಲಿ ಕುಬೇರ ವೈಭವದಿಂದ ಮೆರೆದಿದೆ. ಹಿಂದೆ ಮುಂದೆ ಅಲೆದರೂ ಬ್ರಾಡ್‌ವೇ ರೆಸ್ಟೋರೆಂಟ್ ಎಲ್ಲಿದೆ ಎಂಬುದನ್ನು ಪತ್ತೆ ಹಚ್ಚುವುದು ಕಷ್ಟವಾಯಿತು. ಅಂಕಲ್ ಜಿಲ್ ಮನೆಯ ಪಕ್ಕದ ಮನೆ ಮಿಸ್ ಕ್ಯಾಥರೀನಳದು. ಅದರ ಪಕ್ಕದ ದೊಡ್ಡ ಭವನವೇ ಬ್ರಾಡ್‌ವೇ ರೆಸ್ಟೋರೆಂಟ್. ಆದರೆ, ಅದೆಲ್ಲಿದೆ ಈಗ? ಅದರ ಆ ಹಿರಿಯ ನಾಮ ಫಲಕವೂ ಸಹ ಕಾಣಿಸುತ್ತಿಲ್ಲ. ಇಕ್ಕೆಲಗಳ ಮನೆ ಮನೆಯನ್ನೂ ಬೋರ್ಡ್‌ಗಳಿವೆಯೋ ಹೇಗೆ ಎಂದು ತಲೆಯೆತ್ತಿ ನೋಡು ತ್ತಲೇ ಮುಂದುವರಿದ. ಅನೇಕ ವೇಳೆ ಜೇಬಿನಲ್ಲಿದ್ದ ಟಾರ್ಚು ಸಹಾಯ ಮಾಡಿತು. ಆದರೂ ಸಹ ಹೋಟೆಲಿನ ಸುಳಿವಿಲ್ಲ. ರಸ್ತೆಗಳು ನಿರ್ಮಾನುಷ ವಾಗಿರುವುದರಿಂದ ಕೇಳಿ ತಿಳಿಯುವಂತೆಯೂ ಇಲ್ಲ. ಗಡುಮುಟ್ಟಲು ಇನ್ನು ಹತ್ತು ನಿಮಿಷಗಳು ಮಾತ್ರ ಇವೆ. ಅಷ್ಟರೊಳಗಾಗಿ ಕಂಡುಕೊಳ್ಳ ದಿದ್ದರೆ ಬಂದುದೂ ಸಹ ವ್ಯರ್ಥ.

ದಪ್. ದಪ್. ದಪ್. ದಪ್.

ನಿಶ್ಶಬ್ದತೆಯ ಮೇಲೆ ಸುತ್ತಿಗೆಯ ಪೆಟ್ಟಿನಂತೆ ಬೀಳುತ್ತಿದೆ ದಿಟ್ಟ ಪದಾಘಾತ. ಆ ಸದ್ದು ಬಂದೆಡೆಗೆ ನೋಟ ಸಹಜವಾಗಿ ಹರಿಯಿತು. ಮೈ ತುಂಬ ದಪ್ಪ ಉಣ್ಣೆಯ ಬಟ್ಟೆಯನ್ನುಟ್ಟ ಪೋಲೀಸ್ ಇತ್ತಲೇ ಬರು ತ್ತಿದ್ದ. ನೋಡು ನೋಡುತ್ತಾ ಅಂದುಕೊಂಡ ಟೆಡ್ಡಿ.... ಅವನಿಗೇನು? ಹೊಟ್ಟೆತುಂಬ ಉಂಡು, ಮೈತುಂಬ ಉಟ್ಟು ಮಜವಾಗಿದ್ದಾನೆ. ದಿನಕ್ಕೆ ಎಷ್ಟು ಮಂದಿಯ ಕುತ್ತಿಗೆಗೆ ಉರುಳಾಗುತ್ತಾನೋ.....

ದಪ್. ದಪ್. ದಪ್. ದಪ್.

ಹೆಜ್ಜೆಗಳು ಸನಿಹಕ್ಕೈತಂದುವು. ಟೆಡ್ಡಿ ಅವನನ್ನೆ ಮಿಕಿಮಿಕಿ ನೋಡಿದ.

"ಯಾರಯ್ಯಾ, ನೀನು?" ದರ್ಪವಾಣಿಯಲ್ಲಿ ಕೇಳಿದ ಪೋಲೀಸ್.

"ನಾ....ನಾನು."

"ಯಾರು?"

"ಟೆಡ್ಡಿ."

"ಯಾವ ಟೆಡ್ಡಿ ?" ಅಭ್ಯಾಸಪೂರ್ಣ ಒಡಕು ದನಿ ಹೊರಬಿತ್ತು.

"ಟೆಡ್ಡಿ ವ್ಹೀಲರ್."

"ಏಕೆ ಇಲ್ಲಿ ನಿಂತಿದ್ದಿ ?"

"ನನ್ನ ಜೊತೆಗಾರನಿಗಾಗಿ ಕಾಯುತ್ತಿರುವೆ."

"ಈ ಹೊತ್ತಿನಲ್ಲಿ?" ಆಶ್ಚರ್ಯಪೂರಿತ ಧ್ವನಿ ಮತ್ತಷ್ಟು ಒರಟಾಯಿತು.

"ಹೌದು ; ಅವನು ಬರುವುದಾಗಿ ಹೇಳಿದ್ದಾನೆ."

ಆ ದನಿಯನ್ನು ಎಲ್ಲೋ ಕೇಳಿದ್ದಂತೆ ಭಾವಿಸಿ ಅಂತಃಪ್ರಜ್ಞೆ ಚಡಪಡಿಸಿತು. ಎಂದೋ ಗತಿಸಿ ಹೋದ ದಿನಗಳು ಸ್ಮರಣೆಯ ಹಾದಿಯಲ್ಲಿ ಸಾಗಿ ಹೋದುವು. ಆದರೆ, ಎಲ್ಲೆಂಬುದು ಸ್ಪಷ್ಟವಾಗಿ ಹೊಳೆಯದು. ಪೋಲೀಸ್ ಮನದಲ್ಲೇ ತರ್ಕಿಸಿದ.

"ಅಂದಹಾಗೆ, ಬ್ರಾಡ್‌ವೇ ರೆಸ್ಟೋರೆಂಟ್ ಇರುವುದೆಲ್ಲಿ ?" ಕೇಳಿದ ಟೆಡ್ಡಿ.

"ಬ್ರಾಡ್‌ವೇ ರೆಸ್ಟೋರೆಂಟ್.....?"

ಪೋಲೀಸ್ ಪೇದೆ ಒಂದು ಘಳಿಗೆ ಹೋಚಿಸುತ್ತಾ ನಿಂತ. ಹಳೆಯ ನೆನಹುಗಳನೇಕವು ಸ್ಮೃತಿ ಪಥದಲ್ಲಿ ಸುಳಿ ಸುಳಿದಳಿದುವು. ಆದರೆ, ಹೌದೋ ಅಲ್ಲವೋ ಅದೂ ಸಹ ಅನುಮಾನ. ಏನನ್ನೋ ಕೇಳುವ ಮನಸ್ಸಾಯಿತು. ಆದರೆ ಅನುಮಾನವೇ ಹೆಚ್ಚು ತೂಗಿತು... ಹಾಗೊಂದು ವೇಳೆ ಆಗಿದ್ದಲ್ಲಿ ಅವನೇ ನನ್ನನ್ನು ಗುರುತಿಸುತ್ತಿದ್ದ. ನನ್ನ ಅನುಮಾನ ಬುಡವಿಲ್ಲದ್ದು : ಎಂಬ ಯೋಚನೆಯೂ ಬಂತು. ಏನೋ ಒಂದು ಬಗೆಯಲ್ಲಿ ದಿಕ್ಕೆಟ್ಟಂತೆ ಸುಮ್ಮನೆ ನಿಂತ. ಕೆಲವು ಕ್ಷಣಗಳು ನಿಶ್ಶಂಕೆಯಿಂದ ಉರುಳಿದುವು.

"ಇಲ್ಲೇ ಎಲ್ಲೋ ಇತ್ತು. ನಾನು ಹಾದಿ ತಪ್ಪಿದೆನೇನೋ ಎಂಬ ಯೋಚನೆ ನನಗೆ." ಎಂದ ಟೆಡ್ಡಿ, ಅನುಮಾನಿಸುತ್ತ. ಕಣ್ಣುಗಳಲ್ಲಿ ಆಸಕ್ತಿ ಮಿನುಗಿತು.

"ಓ....ಅದೇ ? ಅದು 'ಪಾಪರ್' ಆಗಿ ನಾಲ್ಕು ವರ್ಷಗಳಾದುವು. ಇದರ ಹಿಂದಿನ ರಸ್ತೆಯಲ್ಲಿ ಬಿಗ್ ಜೋ ಬ್ರಾಡೀಸ್ ಹೋಟೆಲ್ ಇದೆ. ಅಲ್ಲಿಗೆ ಬೇಕಾದರೆ ಹೋಗಬಹುದು."

"ಓ ...ಹೋ ! ಹಾಗಾದರೆ ಬ್ರಾಡ್‌ವೇ ಇದ್ದ ಕಟ್ಟಡವಾವುದು?"

"ಇದೇ ಈ ಕೆಂಪು ಕಟ್ಟಡ."

ನಾಲ್ಕು ಮನೆಗಳಾಚೆ ಇದ್ದ ದೊಡ್ಡ ಪ್ರಾಸಾದದೆಡೆಗೆ ಬೆರಳು ತೋರಿದ ಪೋಲೀಸ್.

"ಅಲ್ಲ, ಅಲ್ಲ. ಅದು ಹಾಗಿರಲೇ ಇಲ್ಲ."

"ಅದರ ಮುಂಭಾಗವನ್ನು ಹೊಡೆದು ಹಾಕಿ ಹೊಸದಾಗಿ ಸೇರಿಸಿ ಕಟ್ಟಿದ್ದಾರೆ."

"ಓ....ಹೋ !"

"ಹೌದು."

"ಮೊದಲು ಬೂದಿ ಬಣ್ಣವಿತ್ತು."

"ಹೌದು....ಹೌದು. ಈಗ ಕೆಂಪು ಬಣ್ಣ ಬಳಿಯಲಾಗಿದೆ."

ಟೆಡ್ಡಿ ಭಾವಾವಿಷ್ಟನಾದ.

"ನಿನ್ನ ಸ್ಥಳವಾವುದು ?"

"ಇದೇ...."

"ಅಂದಮೇಲೆ ನಿನಗೆ ತಿಳಿಯದೇ ?"

"ನಾನು ಇಂಗ್ಲೆಂಡ್ ಬಿಟ್ಟು ಏಳೆಂಟು ವರ್ಷಗಳಾದುವು."

"ಇದುವರೆವಿಗೆ ಎಲ್ಲಿದ್ದೆ ?"

"ಅರೇಬಿಯಾದಲ್ಲಿ."

"ಇಲ್ಲಿಗೆ ಎಂದು ಬಂದೆ ?"

"ನಿನ್ನೆ ಸಾಯಂಕಾಲ." ಯೋಚನಾಮಗ್ನನಾಗಿ ಒಂದು ಘಳಿಗೆ ತಡೆದು ಗಡ್ಡದ ಮೇಲೆ ಕೈಯಾಡಿಸುತ್ತಾ ಮುಂದುವರಿದ ಟೆಡ್ಡಿ. "ನಾನು ನಿನ್ನೆ ಸಾಯಂಕಾಲವೇ ಈ ಕಡೆ ಬಂದು ಒಂದು ಸುತ್ತು ಹಾಕಿದ್ದಲ್ಲಿ ಈಗ ಹುಡುಕುವ ತಾಪತ್ರಯವಿರಲಿಲ್ಲ."

"ಏಕೆ ಅಂತಹ ಅಗತ್ಯವೇನಿತ್ತು ?"

"ಅದೇ ಆಗಲೇ ಹೇಳಿದೆನಲ್ಲಾ....!"

"ಏನು ?"

"ನನ್ನ ಗೆಳೆಯನ ನಿರೀಕ್ಷೆಯಲ್ಲಿದ್ದೇನೆ. ಬ್ರಾಡ್‌ವೇ ಹೋಟೆಲಿನ ಬಳಿ ಒಂದು ಮೂವತ್ತಕ್ಕೆ ಕಾದಿರುವೆ ಎಂದಿದ್ದೆ. ಅವನೂ...."

"ಪೋಲೀಸ್ ನಡುವೆ ಬಾಯಿ ಹಾಕಿದ "ಓ ...ಹಾಗೋ ?"

ಚಳಿಯಲ್ಲಿ ನಡುಗುತ್ತಾ ಟೆಡ್ಡಿ ಕಂಪಿತಸ್ವರದಲ್ಲಿ ನುಡಿದ "ಹೌದು. ನಮ್ಮ ಒಪ್ಪಂದವೇ ಹಾಗಿತ್ತು."

ಟೆಡ್ಡಿಯನ್ನು ಅಡಿಯಿಂದ ಮುಡಿಯವರೆಗೆ ನಿಟ್ಟಿಸಿದ. ಮಂಜಿನ ತೆರೆಯಲ್ಲಿದ್ದರೂ ಸ್ಪಷ್ಟವಾಗಿ ಕಾಣಿಸುತ್ತಿದ್ದ. ಕಡ್ಡಿ ದೇಹ, ಬಾಗು ಬೆನ್ನು. ದಟ್ಟವಾದ ಗಡ್ಡ ಮೀಸೆ, ಸಣ್ಣ ಹಣೆ....ಬಹುಶಃ ಸರಕಾರಕ್ಕೆ ಅಗತ್ಯವಾಗಿ ಬೇಕಾಗಿದ್ದ ಮಹಾನುಭಾವ ಇವನೇ ಇದ್ದರೂ ಇರಬಹುದು ಎಂದು ಯಾರೋ ಕಿವಿಯ ಸನಿಹದಲ್ಲಿಯೇ ಕೂಗಿ ಹೇಳಿದಂತಾಯಿತು. ಆದರೂ ಮರುಕ್ಷಣದಲ್ಲಿ ಅಲ್ಲವೇನೋ ಎಂಬ ಅನುಮಾನವೂ ತೋರುವುದು-ಭ್ರಮಿತ ಮನಸ್ಸಿಗೆ. ವಿಸ್ಮಯ ಮೂಕನಾಗಿ ನಿಂತ ಪೋಲೀಸ್. ಸಂವೇದನಾ ಶೂನ್ಯತೆ ನೆಲೆಸಿತು ಮನದಲ್ಲಿ.

"ನಾವಿಬ್ಬರೂ ಅತ್ಯಂತ ಆತ್ಮೀಯ ಗೆಳೆಯರು. ಇಂದು, ಇಲ್ಲಿ ಪುನರ್ಭೇಟಿಯಾಗುವ ಒಪ್ಪಂದದಮೇಲೆಯೇ ನಾವು ಅಂದು ಅಗಲಿದ್ದು."

"ಅವನೆಲ್ಲಿದ್ದಾನೆ ?"

"ಯಾರಿಗೆ ಗೊತ್ತು !"

"ಅರೆ ! ಆತ್ಮೀಯ ಗೆಳೆಯ ಎನ್ನುತ್ತಿ. ಅವನೆಲ್ಲಿದ್ದಾನೆಂಬುದು ನಿನಗೆ ತಿಳಿಯದೆ ?"

"ಏನು ಮಾಡೋಣ.....? ಸನ್ನಿವೇಶ ಹಾಗೆ ಬಂತು."

"ಕಾಗದ ಪತ್ರಗಳೂ ಇಲ್ಲವೇ ?"

"ಯಾವ ವ್ಯವಹಾರವೂ ನಮ್ಮೊಳಗಿಲ್ಲ."

"ಅದೇಕೆ ?"

ಪ್ರಶ್ನೆ ಹೊರಬಿದ್ದರೂ ಕಂಠಸ್ವರ ವಿಜಾತೀಯವಾಗಿತ್ತು. ಕಿವಿಮ್ಮ ದಂತೆ ಮಾಡಿ ಅಂತರಂಗದಲ್ಲಿ ತರಂಗಾಯಿತವಾಗುವ ಭಾವತರಂಗಿಣಿಯ ರುದ್ರನಾದವನ್ನು ಗಮನಿಸುತ್ತ ಒಂದು ಘಳಿಗೆ ನಿಂತ. ಯಾವುದೋ ಹಳೆಯ ನೆನಹು ಮನವನ್ನು ಹಿಂಡುತಿತ್ತು. ಆದರೂ. ಏನೋ ಒಂದು ಬಗೆಯ ಅನುಮಾನ.... ಇನ್ನೇನೋ ಒಂದು ರೀತಿಯ ಭಾವವಿಭಾವ .... ಯಾವುದು ಪ್ರಧಾನವೋ ಊಹಿಸಲಾಗದ ಭ್ರಮೆ.....

"ಬಹಳ ಮಟ್ಟಿಗೆ ಉದ್ಯೋಗಗಳ ಬಿಕ್ಕಟ್ಟಿನಿಂದ ಎನ್ನಬಹುದು" ಎಂದ ಟೆಡ್ಡಿ.

"ಆತನ ಹೆಸರೇನು?"

"ನೀನೇಕೆ ಎಲ್ಲದರಲ್ಲೂ ತಲೆ ಹಾಕುತ್ತಿ ? ನಿನಗೆ ಯಾರಾದರೊಬ್ಬ ಕಳ್ಳನ ಸುಳಿವು ಬೇಕಾಗಿದೆಯೆ ?"

"ಹಾಗೇನಿಲ್ಲ. ಆದರೂ, ಅನುಮಾನ ಬಂದಾಗ....."

"ನೀನು ಬೇಕಾದರೆ ನನ್ನನ್ನು ಜಪ್ತಿ ಮಾಡಿಕೊ. ನನ್ನ ಆತ್ಮರಕ್ಷಣೆಗಾಗಿ ಒಂದು ಪಿಸ್ತೂಲು ಮಾತ್ರ ಇಟ್ಟುಕೊಂಡಿದ್ದೇನೆ. ಅದು ವಿನಹ ನನ್ನ ಬಳಿ ಇನ್ನಾವ ಮಾಲೂ ಇಲ್ಲ."

"ಹಿ ಹ್ಹಿ ಹ್ಹೀ ! ನಿನ್ನ ಗೆಳೆಯ ಇದೇ ಊರಿನಲ್ಲಿದ್ದಾನೆಯೋ ?"

"ಬಹುಶಃ ಇಲ್ಲಿ ಇರಲಿಕ್ಕಿಲ್ಲ. ಫ್ರಾನ್ಸ್ ಕಡೆ ಹೋಗಿರಬಹುದೆಂದು ತೋರುತ್ತದೆ."

"ಓ...."

"ಇಲ್ಲಿಗೆ ಆಗಾಗ ಬಂದು ಹೋಗಿರಲಿಕ್ಕೂ ಸಾಕು."

"ಅವನ ಹೆಸರೇನು ?"

"ಲಾರೆನ್ಸ್ !"

ಪೇದೆ ತಣ್ಣೀರೆರೆಚಿದಂತೆ ಒಂದು ಘಳಿಗೆ ಸ್ತಬ್ಧನಾದ. ಮೈ ಮರಗಟ್ಟಿದಂತಾಯಿತು. ಎಂಟು ವರ್ಷಗಳ ಹಿಂದೆ ಸಂದು ಹೋದ ದಿನಗಳು ಸ್ಮೃತಿ ಪಥದಲ್ಲಿ ಫೇರಿ ನಡೆಸಿದುವು. ಆದರೆ, ಅವನ ಹೆಸರು ಸಿಡ್ನಿ ವಾಲ್ಟರ್. ಮೈ ಸೊರಗಿರಬಹುದೇನೋ ಹೇಳುವಂತಿಲ್ಲ. ಆದರೆ ಧ್ವನಿ.....? ವಯಸ್ಸು ಕಳೆದಂತೆಲ್ಲ ಧ್ವನಿ ಗೊಗ್ಗರವಾಗುವುದು ಸಾಧ್ಯವಿದೆ. ಆದರೂ ಸಹ ಇದೊಂದು ಸಮಸ್ಯೆಯೇ ಸೈ. ಒಂದು ವೇಳೆ ಇವನು ಸಿಡ್ನಿ ವಾಲ್ಟರ್ ಆಗಿದ್ದ ಪಕ್ಷದಲ್ಲಿ ಏನು ಮಾಡಲಿ? ಹಾ.....ಉಭಯ ಸಂಕಟಕ್ಕೆ ಸಿಕ್ಕಿದೆ..... ಏನು ಗತಿ ?

ಸಿಡ್ನಿ ವಾಲ್ಟರ್-ನನ್ನು ಹಿಡಿದುಕೊಟ್ಟವರಿಗೆ ಮೂರು ಸಾವಿರ ಪೌಂಡುಗಳನ್ನು ಕೊಡುವುದಾಗಿ ಸರಕಾರ ಪ್ರಕಟಿಸಿತ್ತು. ದೇಶದಾದ್ಯಂತ ಪರಿಶೋಧನೆ ನಡೆಸಿದರೂ ಆತನ ಸುಳಿವು ಸಿಕ್ಕಲಿಲ್ಲ. ಹಿಡಿದು ಕೊಟ್ಟರೆ

ಬಹುಮಾನವಷ್ಟೇ ಅಲ್ಲ, ಪೋಲೀಸ್ ಇಲಾಖೆಯಲ್ಲಿ ಬಡ್ತಿಯೂ ಸಹ ಸಿಗಲಿದೆ! ಆದರೆ....ಆದರೆ....ಅವನಿಗೆ ನನ್ನ ದನಿಯ ಗುರುತು ಹತ್ತದುದು ಆಶ್ಚರ್ಯ....ಓ! ಈಗ ಅರ್ಥವಾಯಿತು. ಪೋಲೀಸ್ ಇಲಾಖೆಗೆ ಸೇರಿದ ಮೇಲೆ ನನ್ನ ಧ್ವನಿ ಒಡಕು ಶೃತಿಯಂತಾಗಿದೆ....ಮೇಲಾಗಿ ತುಂಬ ಸ್ಥೂಲ....ಕಪ್ಪು ಬಣ್ಣ....ಉಬ್ಬು ಹಲ್ಲುಗಳನ್ನು ಕೀಳಿಸಿದ್ದಾಯ್ತು. ಇನ್ನೆಲ್ಲಿ ಗುರುತು ಹತ್ತೀತು? ಪಾಪ....ಸಿಡ್ನಿ.....

"ಅ ಹ ಹ ಹ ಹ! ಬಹಳ ಚಳಿ." ಗಡ ಗಡ ನಡುಗುತ್ತಾ ನುಡಿದ ಸಿಡ್ನಿ. "ಚಳಿ ತಡೆಯುವಂತಿಲ್ಲ. ನೀನೇನೋ ಮೈ ತುಂಬ ಉಣ್ಣೆ ಬಟ್ಟೆ ಯುಟ್ಟು ಮಜವಾಗಿದ್ದಿ. ನಾನು ಚಳಿಯಲ್ಲಿ ಕೊರೆತು ಸಾಯುತ್ತಿದ್ದೇನೆ."

"ಮತ್ತೇಕೆ ಇಲ್ಲಿ....ಈ ಚಳಿಯಲ್ಲಿ ಕಾಯುವ ಗೋಳು."

"ಆ ಜಗವೊಂಡ ಇಲ್ಲಿಗೆ ಬರುತ್ತಾನಷ್ಟೆ.....!"

"ಓ....ಹೋ!"

"ನಿನ್ನ ಗೆಳೆಯ ಬರಲು ಇನ್ನೂ ಇಪ್ಪತ್ತು ನಿಮಿಷಗಳಿವೆ. ಆರಾಮ ವಾಗಿ ಭೇಟಿ ಮಾಡು. ನಾನು ಹೋಗುವೆ."

"ಇಪ್ಪತ್ತು ನಿಮಿಷ?"

"ಹೌದು. ಒಂದು ಮೂವತ್ತಕ್ಕೆ ಅಂದೆಯಲ್ಲ?"

"ನನ್ನ ಗಡಿಯಾರ ಒಂದು ಇಪ್ಪತ್ತೈದು ತೋರುತ್ತಿದೆ."

"ಓ....! ಬಹಳ ಮುಂದೆ! ಗೆಳೆಯನ ಭೇಟಿಗಾಗಿಯೇ ಮುಂದಿಟ್ಟೆಯೋ ಹೇಗೆ?"

"ಹ ಹ್ಹ ಹ್ಹಾ!"

....ಓ.....! ಅದೇ ದನಿ! ನಿಜವಾಗಿಯೂ ಸಿಡ್ನಿ ವಾಲ್ಟರ್!.... ಕೂಗಿತು ಅಂತರ್ವಾಣಿ. ಮರುಕ್ಷಣದಲ್ಲಿ ಅದೇ ನುಡಿ ವಿದ್ಯುಲ್ಲಹರಿಯಂತೆ ನರನರಗಳಲ್ಲೂ ಮರು ಪ್ರಸಾರ ಹೊಂದಿತು. ಹಿಂದಿನಿಂದ ಕಾರೊಂದು ಭರ್‍ರನೆ ಹರಿದು ಬರುತಿತ್ತು. ಒಂದೆರಡು ಘಳಿಗೆ ನಿಂತರೆ ಅದರ ಬೆಳಕಿನಲ್ಲಿ ಪತ್ತೆ ಹಚ್ಚಬಹುದು. ನನ್ನ ಅದೃಷ್ಟ ಕೂಡಿ ಬಂದಂತಿದೆ. ಯಾರೆಂಬು ದನ್ನು ಪತ್ತೆ ಹಚ್ಚಿಯೇ ತೀರುವೆ. ಪೋಲೀಸ್ ಇಲಾಖೆಗೆ ಸೇರಿದಂದೇ ಬಂಧುತ್ವ ಮಿತ್ರತ್ವಗಳನ್ನು ಕಟ್ಟಿಟ್ಟಾಗಿದೆ. ಇನ್ನೇಕೆ ಯೋಚನೆ?

ಇಷ್ಟಕ್ಕೂ ದುಡಿದು ತಿನ್ನದೆ ದರೋಡೆ ಮಾಡುವುದಕ್ಕೆ ಇವನಿಗೇನು ಬಂದಿದೆ ದಾಡಿ? ಲೋಭದ ಪರಾಕಾಷ್ಠೆ ಇದು. ಪ್ರಾಪ್ಯಕ್ಕಿಂತಲೂ ಲಕ್ಷ ಪಟ್ಟು ಆಸೆ ಪಟ್ಟರೆ ತುರಂಗವಾಸವೇ ಗತಿ ಎಂಬುದನ್ನು ಯೋಚಿಸಲಾರದಷ್ಟು ಪರಮ ಮೂರ್ಖನೇ ಸಿಡ್ನಿ? ಇಂದು ಬುದ್ಧಿಗಲಿಸಿಯೇ ತೀರುವೆ. ಈ ಅಭಿನಯ ಇನ್ನೆಷ್ಟು ಕಾಲ?

ಅತ್ತಿತ್ತ ಸರಿದಿದ್ದ ಉಲ್ಲನ್ನಿನ ಮಂಕಿ ಟೋಪಿಯನ್ನು ಎಳೆದು ಕಪೋಲ ಪ್ರಾಂತ್ಯವನ್ನು ಮುಚ್ಚಿಕೊಂಡ ಪೋಲೀಸ್. ಮನಸ್ಸು ಯೋಚನೆಯ ಖಡ್ಗದಲುಗಿನ ಮೇಲೆ ಹರಿದಾಡುತಿತ್ತು. ಹ್ಯಾಟನ್ನು ಇನ್ನಷ್ಟು ಅದುಮಿ ಬಿಗಿಯಾಗಿ ತೊಟ್ಟು ಬರುತಿದ್ದ ಕಾರಿನ ದೀಪಕ್ಕೆ ಬೆನ್ನು ಮಾಡಿ–"ನೀನಾವ ಉದ್ಯೋಗ ಮಾಡುತಿದ್ದಿ?"

"ಆಗಲೇ ಹೇಳಿದೆನಲ್ಲ, ಯಾವುದೂ ಸ್ಥಿರವಿಲ್ಲವೆಂತ."

"ಅದು ಅಂದಿಗಾಯಿತು, ಈಗ?"

"ಈಗಲೂ."

"ನಿಜವಾಗಿ?"

"ಹೌದು ಸುಳ್ಳೇಕೆ?"

"ಒಬ್ಬನೇ ಗಸ್ತು ತಿರುಗಿ ಬೇಸರವಾಗಿತ್ತು. ಬಾರ್ ಕಡೆ ಹೋಗೋಣವೆಂದು ಯೋಚಿಸಿದ್ದೆ. ಹೋಗಲಿ, ನೀನು ಗೆಳೆಯನಿಗಾಗಿ ಕಾಯುತಿದ್ದಿ; ಮತ್ತೇಕೆ ನಿನ್ನ ನಂಬಿಕೆ ಕೆಡಿಸಲಿ?"

"ಹಾಂ! ನಾನು ಕಾದೇ ತೀರುವೆ."

ದೂರದಲ್ಲಿ ಬರುತಿದ್ದ ಕಾರು ಭರ್ರನೆ ಸಾಗಿಹೋಯಿತು. ಅದರ ಲೈಟಿನ ಬೆಳಕಿನಲ್ಲಿ ವ್ಯಕ್ತಿ ಸ್ಪಷ್ಟವಾಗಿ ಕಾಣಿಸಿದ. ಪೇದೆಯ ಮೈಯಲ್ಲಿ ನಸು ಕಂಪನದ ಅಲೆ ಹರಿದಾಡಿ ಹೋಯಿತು. ಉಸಿರಿಡಿದು ನಿಂತ.

.....ಹೌದು, ಇವನೇ ಇವನೇ! ಸಿಡ್ನಿ ವಾಲ್ಟರ್!

.....ಅಂದು ನನ್ನ ಗೆಳೆಯ ...ಇಂದು ಭಾರಿ ದರೋಡೆಗಾರ!

ಹಾ!

"ನಾನಿನ್ನು ಹೊರಡುವೆ." ಎಂದವನೇ ಆತ್ಮೀಯತೆಯಿಂದ ಕೈ ಕುಲುಕಿದ ಪೋಲೀಸ್. ಮನೋವೇಗದಿಂದ ಮೈ ನಸು ಕಂಪಿಸಿತು.

ಹಿಂತಿರುಗಿ ನೋಡಲಾಗಲೀ ಯೋಚಿಸಲಾಗಲೀ ಸಮಯವಿಲ್ಲದಂತೆ ಆ ಕ್ಷಣ ಅಲ್ಲಿಂದ ಕಾಲ್ತೆಗೆದ–ಬೆಂಕಿಯ ಕಿಡಿ ತಾಗಿದ ಬೆಕ್ಕಿನಂತೆ. ಹಾದಿ ಸರಸರ ಸಾಗಿದರೂ ಯೋಚನೆಯ ಸುಳಿಯಲ್ಲಿ ಸಿಕ್ಕಿದ ಮನಸ್ಸು ಮಿಲಿ ಮಿಲಿ ಗುಟ್ಟಿತು.

ಲಾರ್ಡ್ ವೆಲ್ಲಿಂಗ್ಟನ್ ಸರ್ಕಲ್ ಮುಟ್ಟುವುದರೊಳಗಾಗಿ ಪೋಲೀಸ್ ವ್ಯಾನು ಮೂರನೆಯ ಪಾಳಿಯ ಪೋಲೀಸರನ್ನು ಕರೆತಂದಿತು. ಹತ್ತಿರ ಹೋಗುತಿದ್ದಂತೆ ಹೇಳಲೋ ಬೇಡವೋ ಎಂಬ ಧರ್ಮ ಸಂಕಟವೂ ತಲೆ ಹಾಕಿತು. ಹೃದಯ ಬನದಲ್ಲಿ ಕಾಡ್ಗಿಚ್ಚು ಭುಗಿಲ್ಲನೆ ಹೊತ್ತಿಕೊಂಡಿತು.

ಲಾರೆನ್ಸ್ ಮತ್ತು ಸಿಡ್ನಿ ವಾಲ್ಟರ್ ಬಾಲ್ಯದಿಂದಲೂ ಆತ್ಮೀಯ ಗೆಳೆಯರು. ಶಾಲಾ ದಿನಗಳಿಂದ ಕೂಡಿ ಆಡಿ ನಕ್ಕು ನಲಿದು ಚಿಕ್ಕಂದವಾಡಿ ಆನಂದ ಸಾಮ್ರಾಜ್ಯದಲ್ಲಿ ಮುಳುಗಿ ಬೆಳೆದವರು. ಶಾಲಾ ದಿನಗಳೇನೋ ಸುಲಭವಾಗಿ ಕಳೆದುವು. ಅನಂತರ ಕಾಲೇಜಿನ ದುರ್ದಿನಗಳಲ್ಲಿ ಇಬ್ಬರೂ ಸೋತು ಸುಣ್ಣವಾಗಿ ಸಣ್ಣ ಸಣ್ಣ ವ್ಯಾಪಾರಗಳಲ್ಲಿ ತೊಡಗಿ ಜೀವನ ವೃತ್ತಿಯನ್ನು ಕೈಕೊಂಡು ಅಲ್ಲಿಯೂ ಜಯಶೀಲರಾಗದೆ ಮುಗ್ಗರಿಸಿ ಮೂಗು ಮುರಿದುಕೊಂಡು ದಿಕ್ಕಾಪಾಲಾದರು. ಲಾರೆನ್ಸ್ ಉದ್ಯೋಗದಿಂದ ಉದ್ಯೋಗಕ್ಕೆ, ಉದ್ಯೋಗದಿಂದ ಉದ್ಯೋಗಕ್ಕೆ ಚಲಿಸಿ ಪೋಲೀಸ್ ಖಾತೆಗೆ ಬಟ್ಟಿ ಇಳಿದವನು. ಜೀವನದ ಅಸಫಲತೆಯಿಂದ ಸಿಡ್ನಿ ವಾಲ್ಟರ್ ಒಂದೆರಡು ಬಾರಿ ದರೋಡೆಗಾರರ ಗುಂಪಿಗೆ ಸೇರಿಕೊಂಡಿದ್ದಾನೆಂದು ದೂರದ ವರ್ತಮಾನ ಬಂದಿತ್ತು. ದರೋಡೆಗಾರರೊಂದಿಗೆ ಚಿತ್ರಪಟಗಳಲ್ಲೂ ಒಮ್ಮೆ ಕಾಣಿಸಿಕೊಂಡಿದ್ದ. ಪತ್ರಿಕೆಗಳ ಮುಖ ಪತ್ರದಲ್ಲೇ ಚಿತ್ರ ಪ್ರಕಟವಾಗಿತ್ತು. ಆದರೆ, ಅದು ಸ್ಪಷ್ಟವಾಗಿ ತಿಳಿಯುವಂತಿರಲಿಲ್ಲವಾದುದರಿಂದ ಅವನೇ ಇವನೇ ಎಂಬುದನ್ನು ದೃಢಪಡಿಸಿಕೊಳ್ಳುವುದಂತೂ ಬಹಳ ಕಷ್ಟವಾಗಿತ್ತು......... ಅನುಮಾನ ಪರಿಹಾರಾರ್ಥವಾಗಿಯಾದರೂ ಹಿಡಿದು ವಿಚಾರಣೆ ನಡೆಸಬೇಕು. ಹಾಗೇ ಬಿಡುವುದು ಸರಿಯಲ್ಲ. ಈ ಒಂದು ಕಾರಣಕ್ಕಾಗಿಯಾದರೂ ಆತ್ಮಸಂತೋಷ ಹೊಂದಬಹುದು.... ಮತ್ತೇಕೆ ಯೋಚನೆ?

ಲಾರೆನ್ಸ್ ಯೋಚಿಸುತ್ತಲೇ ವ್ಯಾನಿನತ್ತ ಹೋದ.

ಆದರೆ ಅವನು ಸಿಡ್ನಿ ವಾಲ್ಟರ್ ಹೌದಾಗಿದ್ದ ಪಕ್ಷದಲ್ಲಿ ಒಂದು ವಿಷಯ ಖಂಡಿತವಾಗಿಯೂ ಮೆಚ್ಚುವುದಿದೆ. ನನಗೆ ಹಿಂದಿನ ಕತೆಯೆಲ್ಲ ಸಂಪೂರ್ಣ ಮರೆತೇ ಹೋಗಿದೆ. ಅವನು ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬಂದು ಕಾದಿದ್ದಾನೆ. ಹಾಂ! ನಾನು ಮರೆಯಲಿಕ್ಕೂ ಸಕಾರಣವಿದೆ. ಆತ ದರೋಡೆಕೋರರ ಗುಂಪಿಗೆ ಸೇರಿಕೊಂಡಿದ್ದಾನೆ ಎಂಬ ಗಾಳಿ ವರ್ತಮಾನ ಒಂದಾದರೆ ಬ್ರಾಡ್‌ವೇ ರೆಸ್ಟೋರೆಂಟ್ ಪರಭಾರೆಯಾಗಿ ಹೆಸರು ಅಳಿಸಿ ಹೋದುದು ಇನ್ನೊಂದು. ಮೇಲಾಗಿ ನನಗೆ ಬಿಡುವಾದರೂ ಎಲ್ಲಿ? ಹಾಂ.....! ಅದೇನೇ ಇರಲಿ, ಇದು ನನ್ನ ಪರಮ ಕರ್ತವ್ಯ....ಕರ್ತವ್ಯಕ್ಕೆಂದೂ ಚ್ಯುತಿ ತರಬಾರದು.

ವ್ಯಾನಿನತ್ತ ದುಪು ದುಪು ಹೆಜ್ಜೆ ಹಾಕುತ್ತ ಓಡಿ ಬರುವ ಲಾರೆನ್ಸನತ್ತ ಕುತೂಹಲಿಯಾಗಿ ನಿಟ್ಟಿಸಿದ ಪೋಲೀಸ್ ಇನ್ಸ್‌ಪೆಕ್ಟರ್. ವ್ಯಾನಿನಿಂದ ಪೋಲೀಸರು ಬುದು ಬುದು ಇಳಿದರು. ಮೊದಲನೆಯ ಪಾಳಿ ಮುಗಿಸಿದ ಪೋಲೀಸರು ಆಗಲೇ ಅಲ್ಲಿ ಕಲೆತಿದ್ದಾರೆ. ಇನ್ನು ವ್ಯಾನಿಗೆ ಹತ್ತುವುದೊಂದು ಬಾಕಿ. ಲಾರೆನ್ಸ್ ಇನ್ಸ್‌ಪೆಕ್ಟರನ ಬಳಿಗೈದು ಒಂದೇ ಉಸುರಿಗೆ ವಿಷಯವನ್ನು ಮುಂದಿಟ್ಟ "ಸರ್! ಸಿಡ್ನಿ ವಾಲ್ಟರ್!"

"ಎಲ್ಲಿ ಎಲ್ಲಿ?" ಇನ್ಸ್‌ಪೆಕ್ಟರ್ ಆಸಕ್ತಿಯಿಂದ ಕೇಳಿದ.

"ಇಲ್ಲೇ ಗ್ರೀನ್ ವುಡ್ ಲೇನಿನಲ್ಲಿ!"

"ನಿಜವಾಗಿ?"

"ಹೌದು ...ಹೌದು,"

"ನಡೆಯಿರಿ ಹೋಗೋಣ."

"ಬನ್ನಿ ಬನ್ನಿ ಎಲ್ಲರೂ ಬನ್ನಿ."

ಎಲ್ಲರೂ ವ್ಯಾನಿಗೆ ಬುದು ಬುದು ಹತ್ತಿದರು. ಆ ಕ್ಷಣವೇ ಅದು ಹೊರಟಿತು. ಗ್ರೀನ್‌ವುಡ್ ಲೇನ್ ಮುಟ್ಟುವವರೆಗೆ ಕುತೂಹಲಾವಿಷ್ಟನಾಗಿ ಮನೋ ವೇಗದಿಂದ ಕದವನ್ನೂ ಸಹ ಮುಚ್ಚಿಕೊಳ್ಳದೆ ಕೈಯಲ್ಲಿ ಹಿಡಿದುಕೊಂಡೇ ನಿಂತ ಲಾರೆನ್ಸ್. ನಸು ದೂರದಲ್ಲಿ ವ್ಯಾನನ್ನು ನಿಲ್ಲಿಸಿ ಆ ಸ್ಥಳವನ್ನು ಸೂಕ್ಷ್ಮವಾಗಿ ಮುತ್ತಿಗೆ ಹಾಕಿದರು ಪೋಲೀಸ್ ಮಂದಿ. ಟೆಡ್ಡಿ ತನ್ನ ಗೆಳೆಯನ ನಿರೀಕ್ಷಣೆಯಲ್ಲಿ ಕಾದಿದ್ದ. ಟೋಪಿಯನ್ನೂ ಮೇಲಂಗಿಯನ್ನೂ ಕಳಚಿ ವ್ಯಾನಿನಲ್ಲಿ ಇಟ್ಟುಬಂದಿದ್ದ ಲಾರೆನ್ಸ್ ಮುಂದಾದ, ಮಂಜಿನ ತೆಳು

ವಾದ ತೆರೆ ಆಗಿನಂತೆಯೇ ಇತ್ತು. ರೊಯ್ ರೊಯ್ಯನೆ ಬೀಸಿ ಬರುವ ತಂಗಾಳಿಯಲ್ಲಿ ಬರ್ಫದ ತುಣುಕುಗಳು ಆಗಾಗ ತೂರಿ ಬರುತ್ತಲೇ ಇವೆ. ಮೇಲಂಗಿಯನ್ನು ಕಳಚಿದ ಮೈ ಚಿಲ್ಲನೆ ನಡುಗಿತು. ಆದರೂ, ಲೆಕ್ಕಿಸದೆ ಲಾರೆನ್ಸ್ ಮುಂದೆ ನಡೆದ. ಯಾವುದೋ ಸಾರ್ಥಕತೆ ಯಾವುದೋ ಸಫಲತೆ ಹೆಜ್ಜೆ ಹೆಜ್ಜೆಗೂ ನಾಂದಿಯನ್ನು ಹಾಡುತ್ತಿರುವಂತೆ ಭಾಸವಾಯಿತು. ದಡದಡ ಮಿಡಿಯುವ ಹೃದಯವನ್ನು ಅದುಮಿ ಹಿಡಿದುಕೊಂಡು ಸನಿಹಕ್ಕೈದ.

"ಓ.....ಸಮಯಕ್ಕೆ ಸರಿಯಾಗಿ ಬಂದೆ ಸಿಡ್ನಿ!" ದನಿ ತಗ್ಗಿಸಿ ಮಧುರ ವಾಣಿಯಲ್ಲಿ ನುಡಿದ.

ಅದುರುವ ದನಿಯನ್ನು ಚಳಿಯ ಪ್ರಭಾವ ಎಂದು ಅವನು ಭಾವಿಸಿದ್ದರೆ ಅದೇನೂ ವಿಶೇಷವಲ್ಲ. ಒಮ್ಮೆಲೇ ಭಾವೋದ್ವೇಗದಿಂದ ಅವನೆಂದ "ಲಾರೆನ್ಸ್! ಬಂದೆಯಾ, ಬಾಪ್ಪಾ! ಬಾ!"

"ಸಿಡ್ನೀ.....!"

"ಓ.....ನಿನ್ನನ್ನು ನೋಡಿ ಎಷ್ಟು ಸಂತೋಷವೊ!"

ಇಬ್ಬರೂ ಅತ್ಯಂತ ಆತ್ಮೀಯತೆಯಿಂದ ಆಲಂಗಿಸಿಕೊಂಡರು. ತೋಳು ತೋಳುಗಳು ಬಿಗಿದುಕೊಂಡುವು. ಭಾವೋದ್ವೇಗದಿಂದ ಹೃದಯ ಆನಂದದ ಆಗರವಾಯಿತು.

"ನನ್ನ ಗಡಿಯಾರ ಮೋಸ ಮಾಡಿತು. ಆಗಿನಿಂದಲೂ ನಿನಗಾಗಿ ಚಳಿಯಲ್ಲಿ ನಡುಗುತ್ತಾ ಕಾಯುತ್ತಿರುವೆ."

"I feel sorry for you!"

"ನಿನ್ನ ಮುಖ ನೋಡೋಣವೆನಿಸುತ್ತಿದೆ. ತುಂಬ ಮಂಜು. ಕಾಣುವಂತಿಲ್ಲ ಲ್ಯಾರೀ!"

"ಇಗೋ ಇನ್ನೇನು ಬೆಳಕಿನ ನೆಲೆಗೆ ಹೋಗುತ್ತೇವೆ."

"ಅ ಹ ಹ ಹ್ಹಾ!"

"ವ್ಹಾರೆವಾ! ಒಳ್ಳೆ ನಗು!"

"ಬಹಳ ಚಳಿ ತಡೆಯುವಂತಿಲ್ಲ. ಅರಬ್ಬೀ ದೇಶಗಳಲ್ಲಿದ್ದು ಇಂಗ್ಲೆಂಡಿನ ಚಳಿ ಮರೆತೇ ಹೋದಂತಾಯ್ತು. ಈ ಹೊತ್ತಿನಲ್ಲಿ ತೆರೆದಿರುವ ಬಾರ್‌ಗಳು ಎಲ್ಲಾದರೂ ಇವೆಯೇ ?"

"ಇದೇನು ಹೀಗೆ ಕೇಳುತ್ತಿ ?"

"ಏಕೆ ?"

"ಈ ಹಿಂದೆ ನೀನೆಂದೂ ಇಲ್ಲಿಗೆ ಬಂದಿರಲಿಲ್ಲವೇ ಸಿಡ್ನಿ ?"

"ಇಲ್ಲವೇ ಇಲ್ಲ. ಬಂದಿದ್ದರೆ ನಿನ್ನನ್ನು ನೋಡದೇ ಹೋಗುವುದಿತ್ತೆ?"

"........."

ಲಾರೆನ್ಸ್ ಏನೋ ಹೇಳಬೇಕೆಂದು ಪ್ರಯತ್ನಪಟ್ಟ. ಆದರೆ ಮಾತುಗಳು ಹೊರಡಲಿಲ್ಲ. ಅದಕ್ಕೆ ಬದಲಾಗಿ ಕಣ್ಣುಗಳಲ್ಲಿ ಕಂಬನಿಗಳು ಮೂಡಿದುವು.

— o —

# ಪೂವಿ

ಹೋಟೆಲ್ ಶ್ರೀಬೃಂದಾವನ್.....

ದಿನಾಂತಕಾಲೀನ ಶ್ರೀಹೀನ ಸಂಧ್ಯೆ!

ಕರ್ತವ್ಯ-ದೀಕ್ಷೆ-ಪವಿತ್ರತೆ-ಮೋಕ್ಷ ಎಂಬ ಶಬ್ದಗಳಿಗೆ ಅರ್ಥವೇ ಇಲ್ಲವೋ ಅಥವಾ ಹೃದಯ ಸಿಘಂಟು ಅದನ್ನು ಭರಿಸಲಾರದೋ ಎಂಬುದನ್ನು ಊಹಿಸುವುದೂ ಸಹ ಕಷ್ಟ. ಖಂಡ ಖಂಡವೂ ತುಂಡಾದಂತೆ ಯಾವುದೋ ಅನಿರ್ವಚನೀಯವಾದ ಜಡಿಮೆ ಮೈಯ್ಯನ್ನೆಲ್ಲಾ ವ್ಯಾಪಿಸಿಬಿಟ್ಟಿದೆ. ವಾಸಂತೀ ಉತ್ತರೀಯದ ಸೆರಗು ಸರಿದಿದ್ದರೂ ಗಮನಿಸಲಾಗದಷ್ಟು ಮನಸ್ಸು ವಿವಶವಾಗಿತ್ತು. ಶ್ರಾಂತ ಮರ್ಮಭೇದೀ ದೃಷ್ಟಿ ಸನಿಹದಲ್ಲೇ ಇದ್ದರೂ ಏನನ್ನೂ ನೋಡದು. ಮೊಸ್ನಪ್ಪ ಸರಸಮಯ ಅಭಿನವ ಲೀಲಾವಿಲಾಸದಲ್ಲಿ ಮುಳುಗಿ, ಪ್ರೇಮಧಾರೆಯಲ್ಲಿ ಪ್ಲಾವಿತಗೊಂಡಂತೆ ರಾಗಭಾವದಿಂದ ಅಂದ "ಪೂವೀ....ಏನೋ ಒಂದು ಬಗೆಯಾದೆಯಲ್ಲ, ಅದೇಕೆ?"

ಆ ನುಡಿ ಎಲ್ಲೋ ಗತಕಾಲದಂಬರದಲ್ಲಿ ವಿಹರಿಸುತಿದ್ದ ಮನವನ್ನು ಅನನುಭೂತ ಜಗತ್ತಿಗೆ ಎಳೆಯಿತು. ತಕ್ಷಣ ಕರುಣ ಮನೋಹರ ಅಪಾಂಗ ಆತನೆಡೆಗೆ ಹರಿಯಿತು. ಹರಿದ್ರಾ ಕುಂಕುಮ ಸುಶೋಭಿತ ಪೂವಿ ಸರಿದ ಸೆರಗನ್ನು ಸರಿಪಡಿಸಿಕೊಂಡು–"ಏನೂ ಇಲ್ಲ."

ನೀಲವರ್ಣರಂಜಿತ ಅದ್ಭುರಿಯ ಕಾರು ಪ್ರಾಂಗಣವನ್ನು ಸರ್‍ರನೆ ದಾಟಿ ಹೆಬ್ಬಾಗಿಲಿನ ಮುಂದೆ ನಿಂತಿತು. ಬಿಳಿಯಂಗಿ ತೊಟ್ಟು, ಕೆಂಪು ದವಾಲಿ ಧರಿಸಿದ ಪರಿಚಾರಕ ಆಕ್ಷಣವೇ ಓಡಿಬಂದು ಕಾರಿನ ಕದ ತೆರೆದು ಕೈಮುಗಿದ. ಪೂವಿ ತನ್ನ ಬ್ಯಾಗನ್ನು ತೆಗೆದುಕೊಂಡು, ಹೊಂದಾವರೆಯಂತಹ ಜೋಡಿ ಹೆಜ್ಜೆಗಳನ್ನು ಮೊದಲು ಹೊರ ನೀಡಿ, ಸರಳವೂ ಸ್ವಚ್ಛವೂ ಆದ ಎಳೆನಗೆಯೊಡನೆ ಕೆಳಗಿಳಿದಳು. ಇದುವರೆವಿಗೂ ಕೊಡವ ಉಡುಗೆಯಲ್ಲೇ ಬರುತಿದ್ದ ಅವಳು ಇಂದು ಮೈಸೂರು ಸೀಮೆಯವರಂತೆ ಅಂದವಾಗಿ ಉಡುಪು ಧರಿಸಿದ್ದುದು ಪರಿಚಾರಕನ ಕಣ್ಮನಗಳನ್ನು ಸೆಳೆ

ಯಿತು. ಸುಮಾರು ಹತ್ತು ಹನ್ನೆರಡು ವರ್ಷಗಳ ಅವಧಿಯಲ್ಲಿ ಅವಳು ಲೆಕ್ಕವಿಲ್ಲದಷ್ಟು ಬಾರಿ ಇಲ್ಲಿ ತಂಗಿದ್ದು ಜನಪ್ರಿಯತೆ ಗಳಿಸಿಕೊಂಡಿದ್ದಳು. ಜವಾನ ಪೆಟ್ಟಿಗೆಯನ್ನು ತೆಗೆದುಕೊಂಡು ಅನುಮಾನಿಸುತ್ತ ಏನೋ ಒಂದು ಬಗೆಯಲ್ಲಿ ಕೇಳಿದ "ಡಬ್ಬಲ್ ರೂಮಿಗಿಡಲೇ ?"

"ಹೌದು...." ಉತ್ತರಿಸಿದ ಮೊನ್ನಪ್ಪ.

ಸೇವಕನ ತುಟಿಗಳಂಚಿನಲ್ಲಿ ಗ್ರಹಿಸಲಾಗದಂತಹ ಸಣ್ಣ ನಗೆ ಅರಳಿತು. ಸಾಮಾನಿನ ಸಹಿತ ಅವನು ಒಳಹೋದ. ಮುಖದ ಮೇಲೆ ಗಾಳಿಗೆ ಅಡರಿ ಬಂದಿದ್ದ ಅಲೆಗೂದಲನ್ನು ಹಿಂದಕ್ಕೆ ತಳ್ಳಿ ಮುಖವನ್ನು ಕರವಸ್ತ್ರದಿಂದ ತೀಡಿಕೊಂಡಳು ಪೂವಿ. ಸರಳವೂ ಸುಂದರವೂ ಆದ ಶುಭ್ರ ಉಡಿಗೆ, ಸುಶಿಕ್ಷಿತ ಸಮಾಜದಿಂದ ಪಡೆದ ಪ್ರೌಢ ವಿದ್ಯೆ, ಅಭಿಮಾನ ಪೂರ್ಣ ಸ್ಥಿರ ಭಾವ, ಕೇದಗೆಯ ಬನದಲ್ಲಿ ಹೊಮ್ಮುವಂತ ಶ್ರೀಗಂಧಯುಕ್ತ ಕಂಪು, ಒಂದೊಂದೂ ನವ್ಯ ಸಮಾಜದ ನಾಗರಿಕತೆಯನ್ನು ಸಾರಿ ಹೇಳುತ್ತಿವೆ.

"ಹವೆ ಚೆನ್ನಾಗಿದೆ. ಸ್ವಲ್ಪ ಹೊತ್ತು ಹೊರಗಡೆ ಕುಳಿತುಕೊಳ್ಳೋಣವೇ ?" ಮೊನ್ನಪ್ಪ ಕೇಳಿದ. ಕಣ್ಣುಗಳಲ್ಲಿ ಉತ್ಸುಕತೆ ನಲಿಯುತಿತ್ತು.

ಆ ಮುಹೂರ್ತದಲ್ಲಿ ತೀವ್ರ ಅನ್ಯಮನಸ್ಕಳಾಗಿದ್ದ ಅವಳು ಉತ್ತರಿಸಲಿಲ್ಲ. ದೇಹ ಭಾರವನ್ನು ಹೊತ್ತ ಅಭಿಶಸ್ತ ಹೆಜ್ಜೆಗಳಲ್ಲಿ ಯಾಕೋ ಅರಿಯಲಾಗದ ಕ್ಲಿಷ್ಟಯುಕ್ತ ಲಘು ಕಂಪನ ಮೂಡಿತು. ಅಂದಿನ ಅನುಷಂಗದ ಉದ್ದಂಡ ನೆನಹು ಚಿತ್ತಭಿತ್ತಿಯಲ್ಲಿ ಚಲನ ಚಿತ್ರದಂತೆ ಫಳಕ್ಕನೆ ಸುಳಿದಳಿಯಿತು. ಹಾಗೇ ಮೂರ್ತಿಮತ್ತಾಗಿ ನಿಂತು ಬಿಟ್ಟಳು.

"ಪೂವಿ....!"

ಧ್ವನಿ ಕಿವಿಯನ್ನು ತಾಗಿದಾಗ ಅಂದಿನ ದೈನಂದಿನ ಅಮಾಯಕ ಕರೆ ಕರ್ಣ ದೇಶಗಳಲ್ಲಿ ಮೊಳಗಿದಂತೆ ಭಾಸವಾಗಿ ನೋಟ ಉಯ್ಯಾಲೆಯ ಕಡೆ ನಿಟ್ಟಿಸಿತು. ಹಚ್ಚ ಹಸುರು ಸೂಸುವ ಹರವಾದ ನಳನಳಿಸುವ ಸುಂದರ ಲಾನಿನ ಮೇಲೆ ಪ್ರತಿಷ್ಟಿತವಾದ ಧವಳ ವರ್ಣರಂಜಿತ ಉಯ್ಯಾಲೆ ತನು ಮನಗಳನ್ನು ಸೆಳೆಯಿತು. ಅತ್ತಲೇ ನೋಡುತ್ತಿದ್ದ ಮಡದಿಯನ್ನು ಕುರಿತು ಮೊನ್ನಪ್ಪ ಅಂದ "ನಾವಲ್ಲೇ ಕುಳಿತುಕೊಳ್ಳೋಣವೇ ?"

ಅವನೇನೆಂದುದನ್ನು ಸರಿಯಾಗಿ ಗ್ರಹಿಸಿರಲಿಲ್ಲವಾದುದರಿಂದ, ಒಂದು ಕ್ಷಣ ಅವನನ್ನೇ ನಿಟ್ಟಿಸಿದಳು ಪೂವಿ, ಅವನು ಮುಗುಳು ನಗುತ್ತ ಕೇಳಿದ "ಏಕೆ. ಏನೋ ಒಂದು ರೀತಿಯಲ್ಲಿ ಮಂಕಾದೆಯಲ್ಲಾ ?"

"ಏನಿಲ್ಲ ಉದ್ಯಾನವನವನ್ನು ನೋಡುತಿದ್ದೆ ಅಷ್ಟೆ."

ಕಣ್ಣೆದುರಿನ ಆ ಸಜೀವ ಸಜಲ ಸೌಂದರ್ಯರಾಶಿಯೆದುರು ತೇಜ ರಹಿತ ಮರದ ಬೊಂಬೆಯಂತೆ ನಿಂತ ಅವನು ಅಚ್ಚರಿಯಿಂದ ಕೇಳಿದ "ನೀನು ಈವರೆಗೆ ಇಲ್ಲಿಗೆ ಬಂದೇ ಇರಲಿಲ್ಲವೇ ?"

"ಬರದೇ ಏನು ? ಯಾವಾಗಲೂ ಇಳಿಯುತಿದ್ದುದೇ ಇಲ್ಲಿ."

ಪರಿಚಾರಕ ಬಂದು ಕೇಳಿದ "ಏನಾದರೂ ಉಪಹಾರ ತರಲೆ?"

ಪೊನ್ನಪ್ಪ ಸಿಹಿ ಖಾರ ಮತ್ತು ಚಹಗಳಿಗೆ ಆರ್ಡರ್ ಕೊಟ್ಟು ಕೈಯಲ್ಲಿದ್ದ ಸಿಗಾರನ್ನು ಒಂದು ದಮ್ ಎಳೆದು ಹೊಗೆಯನ್ನು ಫುಫನೆ ಊದಿ, ಉಂಗುರುಂಗುರವಾಗಿ ಧೂಮಮಾಲೆಯು ಅಂಬರಕ್ಕೇರುವ ರೀತಿ ಯನ್ನು ಒಂದೆರಡು ಕ್ಷಣ ಗಮನಿಸಿ ಮಡದಿಗೆಂದ "ಲಾನಿನ ಮೇಲೆ ಕುಳಿತು ಕೊಳ್ಳೋಣವೇ ?"

ಪೂವಮ್ಮನ ಸಮ್ಮತಿ ಸದ್ದಿಲ್ಲದೆ ದೊರೆಯಿತು.

ಇಂದು ಅವಳ ರೀತಿಯಲ್ಲಿ ಹೊಸತನವನ್ನು ಕಂಡು ಅವನಿಗೆ ಏನೋ ಒಂದು ಬಗೆಯೆನಿಸಿತು. ಮನದಲ್ಲೇ ತರ್ಕಿಸುತ್ತ "ಏಕೆ ಪೂವಿ? ಏನೋ ಒಂದು ರೀತಿಯಾಗಿದ್ದಿ ?... ಏನು ಕತೆ ?"

"ಏನಿಲ್ಲ."

ಪೂವಿ ಪ್ರಯತ್ನಪೂರ್ವಕವಾಗಿ ನಗಲು ಪ್ರಯತ್ನಿಸಿದಳು. ಆದರೆ, ಸಫಲಳಾಗಲಿಲ್ಲ. ಹೃದಯದ ನೆಲೆಯಲ್ಲಿ ಯಾವುದೋ ಅನಿರ್ವಚನೀಯ ವಾದ ಪರಿತಾಪ ಇದ್ದಕ್ಕಿದ್ದಂತೆ ಸುಳಿ ಸುತ್ತುತ್ತಿದೆ. ಇನ್ನು ಅದರಲ್ಲಿ ತೊಡಗುವುದು ಸೂಕ್ತವಲ್ಲವೆಂದು ಅವಳಿಗೂ ಗೊತ್ತು. ಆದರೂ ಸಹ.....

ಪೊನ್ನಪ್ಪ ಆ ಮನೋರಮ ಮುಖದ ಮೇಲೆ ಸೂಸಿ ಬರುವ ಅಕಳಂಕ ಭಾವಧಾರೆಯನ್ನವಲೋಕಿಸಿದ.

ಅವಳ ನಡೆನುಡಿಗಳಲ್ಲಿ ಹಾವಭಾವಗಳಲ್ಲಿ ಉಡಿಗೆತೊಡಿಗೆಗಳಲ್ಲಿ ಒಂದೇ ತೆರನಾದ ಲೋಲುಪ್ತಿ. ಯಾವ ಅಳತೆಗೋಲಿನಿಂದ ಅಳೆದರೂ ಆಕೆಯಲ್ಲಿ

ಹೊಮ್ಮುವುದು ನಿಶ್ಚಲವೂ ನಿರ್ಮಲವೂ ಆದ ಸ್ತ್ರೀತ್ವ. ಆತ ಆಕೆಯನ್ನು ಬಹಳ ದಿನಗಳಿಂದ ಬಲ್ಲ; ಆದರೂ, ಇಂದಿನ ವಿಶೇಷ ಅರ್ಥವಾಗಲಿಲ್ಲ. ಸ್ವಿಚ್ ಕೀಯನ್ನು ತುದಿ ಬೆರಳಿನಿಂದ ತಿರುಗಿಸಿ ಟಿಂಟಿಣಿ ಸದ್ದು ಮಾಡುತ್ತಾ ಲಾನಿನೆಡೆಗೆ ಹೋದ. ಅವಳು ಹಿಂಬಾಲಿಸಿದಳು. ಅವಳ ಚಲನ ವಲನ ಗಳಲ್ಲಿ ಕೌಮಾರ್ಯತೆಯ ಸೆಳೆವಿರದೆ ಪ್ರೌಢಿಮೆಯ ಗಾಂಭೀರ್ಯ ತುಂಬಿ ತುಳುಕುತಿತ್ತು. ಇಬ್ಬರೂ ಹಸುರು ಹುಲ್ಲಿನ ಮೇಲೆ ಹೊಂದಿಸಿದ ಕುರ್ಚಿ ಗಳಲ್ಲಿ ಕುಳಿತುಕೊಂಡರು. ಪರಿಚಾರಕ ಲಘು ಉಪಹಾರವನ್ನೂ ಚಹ ವನ್ನೂ ಮೇಜಿನ ಮೇಲಿಟ್ಟು ಹೋದ. ಬಸಿಗಳಲ್ಲಿ ಚಹ ಹಬೆಯಾಡುತಿತ್ತು. ಬೂದಿ ಮುಚ್ಚಿದ ಸಿಗಾರನ್ನು ಬೂದಿಬಾನಿಯ ಮೇಲಿಟ್ಟು ಸಿಹಿ ಖಾರಗಳಿಗೆ ಕೈಹಚ್ಚಿದ ಪೊನ್ನಪ್ಪ. ಪೂವಿ ಸಿಹಿಯನ್ನು ಮೆಲ್ಲುತ್ತ ನೋಟವನ್ನು ಎದರಿ ರಿನ ಕೊಠಡಿಯ ಕಿಟಕಿಯ ಕಡೆಗೆ ಹರಿಸಿದಳು. ಕಿಟಕಿಗಳಿಗೆ ಹೊಂದಿಸಿದ ತಿಳಿನೀಲಿ ತೆರೆ ಎರಡೂ ಬದಿಗೆ ಸೇರಿಸಲ್ಪಟ್ಟು ಎರಡೂ ಕಡೆಗಳಲ್ಲಿ ನಿರಿನಿರಿ ಯಾಗಿ ಮುದ್ದೆಗಟ್ಟ ನಿಂತಿತ್ತು. ಅದರಲ್ಲಿ ಮುದ್ರಿತವಾದ ಹಸುರೆಲೆಗಳ ಸಹಿತ ಕೆಂಪು ಗುಲಾಬಿಗಳು ಅಚ್ಚಳಿಯದಿವೆ. ಕಳೆದ ವರ್ಷ ಬಂದಿದ್ದಾಗ ತಮ್ಮ ಮನೆಗೂ ಅಂತಹದೇ ಪರದೆಯು ಬೇಕೆಂಬ ಅಭಿಲಾಷೆಯಿಂದ ಕೊಂಡುಕೊಂಡು ತನ್ನ ಮನೆಯನ್ನು ಸಿಂಗರಿಸಿದ್ದಳು. ಚಂಗಪ್ಪ ಅವಳ ಶೃಂಗಾರವನ್ನು ಬಹಳವಾಗಿ ಮೆಚ್ಚಿಕೊಂಡಿದ್ದ.....ಮೆಲ್ಲನೆ ಎದೆಯಾಳದಿಂದ ನಿಟ್ಟುಸಿರೊಂದು ಹೊಮ್ಮಿತು. ಸಿಹಿಯನ್ನು ಕಹಿಯಂತೆ ನುಂಗಿ ಒಂದು ಗುಟುಕು ನೀರು ಕುಡಿದಳು ಪೂವಿ.

ಸ್ವಚ್ಛ ಉಡುಪಿನ ಪರಿಚಾರಕ ಬಳಿಗೆ ಬಂದು ಕೇಳಿದ "ಏನಾದರೂ ಬೇಕೆ ?"

"ಇನ್ನೇನೂ ಬೇಡ. ಇದೇ ಹೆಚ್ಚಾಯಿತು." ನುಡಿಯಿತು ಕೋಮಲ ದನಿ.

ಪರಿಚಾರಕ ವಿನಮ್ರತೆಯಿಂದ ನಿಷ್ಕ್ರಮಿಸಿದ.

ಆವಳ ನೋಟ ಆದೇ ಕೊಠಡಿಯ ಕಡೆ ಮತ್ತೆ ಹರಿದಾಗ ಕಿಟಕಿಯ ಪರದೆಗಳನ್ನು ಸರಿಸಿರುವುದರಿಂದ ಯಾರೋ ಇಳಿದುಕೊಂಡಿರಬಹುದು ಎನಿ ಸಿತು. ಕಿಟಕಿಯ ಹಿಂದೆ ಯಾರೋ ಅತ್ತಿಂದಿತ್ತ ಓಡಾಡಿದ ಛಾಯೆ ಸಹ

ಸುಳಿಯಿತು. ಚಂಗಪ್ಪ ವಿಶ್ರಾಂತಿಗಾಗಿ ಉಳಿದುಕೊಳ್ಳುತ್ತಿದ್ದುದು ಅದೇ ಕೊಠಡಿ, ಸದಾ ಕಿಟಕಿಯಲ್ಲಿ ಮೊಗವಿಟ್ಟು ಉದ್ಯಾನವನದ ಕಡೆ ನೋಡುತ್ತ ಹೊತ್ತು ಕಳೆಯುತಿದ್ದ. ಆ ಕರುಣಾಜನಕ ಸ್ಥಿತಿ ಸ್ಮರಣೆಯ ಹಾದಿಯಲ್ಲಿ ತೇಲಿಹೋದೊಡನೆ ಮುಖಮಂಡಲ ರಾಹುಗ್ರಸ್ತ ಚಂದ್ರಮಂಡಲದಂತಾಯಿತು.

"ಚಹ ತಣ್ಣಗಾಗುತ್ತಿದೆ." ಎಚ್ಚರಿಸಿದ ಮೊನ್ನಪ್ಪ.

ಕೈಗಳು ಯಾಂತ್ರಿಕವಾಗಿ ಚಹದ ಬಸಿಯನ್ನು ತೆಗೆದುಕೊಂಡುವು. ಮೊನ್ನಪ್ಪ ಚಹ ಮುಗಿಸಿದ್ದ. ಬಸಿ ಬಟ್ಟಲುಗಳು ಬರಿದಾಗಿದ್ದುವು. ಅವನ ಸಲುವಾಗಿಯಾದರೂ ತೆಗೆದುಕೊಳ್ಳುವ ಅಗತ್ಯ ತೋರಿದಾಗ ತಿಂಡಿಯ ಒಂದೆರಡು ತುಣುಕುಗಳನ್ನು ಬಾಯಿಯಲ್ಲಿಟ್ಟುಕೊಂಡಳು

ಮೊನ್ನಪ್ಪ ಶಂಖ ಬಾರಿಸಿದಂತೆ ಧ್ವನಿಯನ್ನು ಹರಿಹಾಯಿಸಿದ "ಇದೇನು ಪೂವಿ ?"

ಪೂವಿ ಸಾಧನಾ ಪೂರ್ವಕವಾಗಿ ಕೃತಕ ನಗೆಯನ್ನು ಬೀರಿ—"ಯಾಕೋ ಸೇರುತ್ತಿಲ್ಲ.....ಸಣ್ಣಗೆ ತಲೆ ನೋಯುತ್ತಿದೆ. ಬಹುಶಃ ಅದಕ್ಕೇ ಇರಬೇಕು."

"ಸಾರಿಡಾನ್ ಬೇಕೆ ?"

"ಏನೂ ಬೇಡ."

ಆಸ್ಪ್ರಿನ್....ಯಾವುದಾದರೂ ತೆಗೆದುಕೊಳ್ಳುವ ಅಭ್ಯಾಸವಿಲ್ಲವೆ ?"

"ಇಲ್ಲ. ವಿಶ್ರಾಂತಿ ತೆಗೆದುಕೊಂಡರೆ ಅದೇ ಆಸ್ಪ್ರಿನ್."

ಟೀಪಾಯಿಯ ಮೇಲಿದ್ದ ಮಾಸಿಕವೊಂದರಲ್ಲಿ ಕಣ್ಣಾಡಿಸುತ್ತ ನುಡಿದಳು ಅವಳು.

"ಒಳಗಡೆ ವಿಶ್ರಾಂತಿ ತೆಗೆದುಕೊಳ್ಳುತ್ತೀಯೇನು ?"

"ಇಲ್ಲ....ಇಲ್ಲಿ ಸ್ವಚ್ಛ ಹವೆ ಇದೆ. ಸ್ವಲ್ಪ ಹೊತ್ತು ಇಲ್ಲೇ ಕೂಡುವೆ."

ಮೊನ್ನಪ್ಪ ಸಿಗಾರಿನ ಸೇವನೆಯಲ್ಲಿ ಸ್ವಲ್ಪ ಹೊತ್ತು ತಲ್ಲೀನನಾದ. ಹೋಟೆಲಿನ ಕಿರಿಯ ಪರಿಚಾರಕ ಕಾರನ್ನು ಸ್ವಚ್ಛಗೊಳಿಸುತಿದ್ದ. ಕೊಡಗಿನಿಂದ ಮೈಸೂರಿನವರೆಗಿನ ಮಾರ್ಗಾನುಕ್ರಮಣದಲ್ಲಿ ಹಾದಿಯುದ್ದಕ್ಕೂ ಕೆಂಧೂಳನ್ನು ಪೂಸಿಕೊಂಡಿದ್ದ ಅದು ಸ್ವಚ್ಛವಾಗಿ ಥಳಥಳಿಸತೊಡಗಿತು. ಅವನಿಗೆ ಸ್ವಚ್ಛಗೊಳಿಸಲು ಹೇಳಲಿಲ್ಲವಾದರೂ ಅವನು ಮುಂದಾಗಿದ್ದ.

ಬಾಲಕನ ಉತ್ಸುಕತೆ ಮನಸ್ಸಿಗೆ ನೆಮ್ಮದಿ ನೀಡಿತು. ನೋಟವನ್ನು ಗಡಿಯಾರದ ಮೇಲೆ ಹೊರಳಿಸಿ ಮೊಣ್ಣಪ್ಪ ಅಂದ "ಮೀಟಿಂಗಿಗೆ ಹೊತ್ತಾಯಿತು. ನಾನಿನ್ನು ಹೊರಡಲೇ ?"

"ಹೂ .. ಹೊರಡಿ."

ಮೊಣ್ಣಪ್ಪ ಎದ್ದು ನಿಂತ. ಕೊನೆಯ ಪ್ರಕರಣವಾಗಿ ತುಟಿಗಳಲ್ಲಿ ತಿಳಿನಗೆ ಚಿಮ್ಮಿತು.

"ಹಿಂದಿರುಗುವುದು ಎಷ್ಟೊತ್ತಾದೀತು ?"

"ಆರೂವರೆಯೊಳಗಾಗಿ ಬರಬಹುದು."

ಪೂವಿಯ ಗಂಭೀರ ಮುಖಭಾವ ಸಮ್ಮತಿ ಸೂಸಿತು.

"ಸರಿ, ಮತ್ತೆ." ಎನ್ನುತ್ತ ಕಾರಿನೆಡೆಗೆ ಹೆಜ್ಜೆ ತೆಗೆದ. ಕೈ ಬೆರಳುಗಳಲ್ಲಿ ಸ್ವಿಚ್‌ಕೀ ಟಿಂಟಿಣಿನಾದ ಗೈಯ್ಯುತಿತ್ತು. ಕಾರು ಹತ್ತಿ ಇಂಜಿನ್ ಸ್ಟಾರ್ಟ್ ಮಾಡಿದ. ಥಳಥಳಿಸುವ ಕಾರು ಪ್ರಾಂಗಣವನ್ನು ಹಾಯ್ದು ಗೇಟು ದಾಟುವವರೆಗೂ ನಿಟ್ಟಿಸಿದಳು ಪೂವಿ. ಮೊಣ್ಣಪ್ಪ ಹಸನಾದ ನಗು ಅರಳಿಸಿ ಕೈಯೆತ್ತಿ "ಗುಡ್ ಬೈ" ಹೇಳಿದ.

ಪೂವಿ ಮುಗುಳು ನಕ್ಕಳು.

ಅಲ್ಲಿಂದ ಹಿಮ್ಮರಳಿದ ನೋಟ ಹರಿದುದು ಉಯ್ಯಾಲೆಯ ಕಡೆಗೆ, ಪ್ರಯತ್ನಿಸಿದರೂ ಅದರಿಂದ ಕಣ್ಣು ಕೀಳಲಾಗಲಿಲ್ಲ. "ಚಂಗೂ" ಅದರ ಮೇಲೆ ಕುಳಿತು ಸುಖಾನುಭವ ಪಡೆದುಕೊಳ್ಳುತ್ತಿದ್ದ ಮನೋರಮ ನೆನಹುಗಳು, ಆ ಅನನುಭೂತ ಜಗತ್ತಿನ ಭಾವಾತ್ಮಕ ರುದ್ರ ಮಧುರ ದಿನಗಳು ಸ್ಮೃತಿ ಪಥದಲ್ಲಿ ಮಿಂಚಿ ಹೃದಯಧರಿತ್ರಿಯಲ್ಲಿ ತರಂಗಿತವಾಗತೊಡಗಿದುವು. ಆ ಉತ್ಸಾಹೀ ತರುಣ ಮ್ಲಾನವದನ ವಿನಮ್ರನಾಗಿ ಭವಿಷ್ಯದ ನಾನಾ ವಿಚಾರಗಳನ್ನು ಕುರಿತು ಮಡದಿಯೊಡನೆ ಚರ್ಚಿಸುತ್ತ ಅದರ ಮೇಲೆ ಗಂಟೆಗಟ್ಟಲೆ ಹೊತ್ತು ಕಳೆಯುತ್ತಿದ್ದ. ಆತನ ಭಾವಶೀಲ ಸರಣಿ ಮನೋಮಂದಿರದಲ್ಲಿ ವೀಣಾರವದಂತೆ ಮೊಳಗಿ, ನರನಾಡಿಗಳಲ್ಲಿ ಮರುಪ್ರಸಾರ ಹೊಂದಿ, ಹೃದಯ ತಂತುಗಳು ಕಟ್ ಕಟ್ಟನೆ ತುಂಡುಗಡಿದಂತಾಯಿತು.

ಅಂದಿನ ಆ ಕೊಡವ ಸಂಪ್ರದಾಯಬದ್ಧ ಜೀವನ, ಅನಂತರ ಅನುಭವಿಸಿದ ಏಕಾಂತ ದುಃಖ, ಇಂದಿನ 'ನಾಗರಿಕತೆ' ಎನಿಸುವ ಈ ಆಡಂಬರಯುತ

ಜೀವನ .........ಅಂದಿಂದಿಗೂ ಸಂಭವಿಸಿದ ಕಮನೀಯ ಕಠೋರ ಘಟನೆಗಳು ....ಯೋಚಿಸುತ್ತಾ ಹೋದರೆ ಅವುಗಳಿಗೆ ಕೊನೆ ಮೊದಲೇ ಇಲ್ಲ. ಪ್ರಕೃತಿಯ ವೈಭವದಲ್ಲಿ ಅಲಕ್ಷಿತ ಅಲಸಿಕೆ ಮೆಲ್ಲ ಮೆಲ್ಲನೆ ಬಂದು ಹೃದಯ ಕುಂಡಲಿನಿಯನ್ನು ಪ್ರವೇಶಿಸಿ ದೇಹ ವ್ಯಾಪ್ತವಾಗತೊಡಗಿತು. ಎದ್ದು ಒಳ ಹೋಗೋಣವೆಂದರೂ ಏಳಲಾರೆನೆಂಬಷ್ಟು ಅಲಸಿಕೆ. ವಸಂತ ಋತುವಿನ ಶೋಭಾಸಾಗರದಲ್ಲಿ ಕ್ಷಾಮ ಭೀಕರ ತರಂಗವೆದ್ದು ಬಂದಂತೆ ಯಾವುದೋ ಅನಿರ್ವಚನೀಯವಾದ ಜಡಿಮೆಯಿಂದ ಆಲೋಚನಾಶಕ್ತಿಯೇ ಉಡುಗಿದಂತಾಯಿತು.

ಪರಿಚಾರಕ ಪಾದರಕ್ಷೆಗಳ ಪಟಪಟಾತ್ಕಾರದೊಡನೆ ಬಂದು ಬಸಿ ಬಟ್ಟಲುಗಳನ್ನು ಎತ್ತಿಕೊಂಡು ಹೋದ. ಬಸಿ ಬಟ್ಟಲುಗಳ ಚಿಣಿ ಜಿಣಿ ಸದ್ದು ಪಟಪಟಾತ್ಕಾರದೊಂದಿಗೆ ಸಮ್ಮಿಳನವಾಗಿ ತಾಳಲಯಬದ್ಧವಾದುವು.

ಹೃದಯ ಕಾಂತಾರದಲ್ಲಿ ರುದ್ರ ನರ್ತನಗೈಯುತಿದ್ದ ಭಾವತರಂಗಿಣಿಯ ನೂಪುರಗಳ ಟಿಂಟಿಣಿ ನಾದ ಸ್ಪಷ್ಟವಾಗಿ ಕೇಳಿಸುತ್ತದೆ. ಮನದಲ್ಲಿನ ಲಜ್ಜೆಯ ಗಂಟು ಇನ್ನೂ ಬಿಚ್ಚಿಲ್ಲವೆಂದೋ ಏನೋ.... ಶ್ರದ್ಧಾಗಮ್ಯವಾದ ಬುದ್ಧಿ ಅಂದಿಂದಿಗೂ ಜೀವನ ಧರ್ಮವನ್ನು ಬೋಧಿಸುತ್ತಲೇ ಇದೆ. ಮುಂದಡಿ ಇಟ್ಟ ಅಭಿಶಸ್ತ ಹೆಜ್ಜೆಗಳ ಕ್ರಮ ಸರಿಯೋ ತಪ್ಪೋ ಎಂಬ ತರ್ಕವಿಕರ್ತ ಸಹಜ ಅನುಭಾವದ ತರಂಗಗಳಿಗೆ ತಾಕಲಾಡುವಾಗ ಕುಸುಮ ಕೋಮಲ ಹೃದಯ ದಣಿದು ಭಕ್ತಿಭಾವ ಮೈದೋರುತ್ತದೆ.

ಹಾ...! ಇನ್ನೂ ತಾರುಣ್ಯದಂಚನ್ನು ದಾಟುವ ಮುನ್ನ ಬಾಳಿನ ಹೊಸ್ತಿಲನ್ನೇ ದಾಟಿದ ಮಹಾನುಭಾವ ಚಂಗೂ. ಇಂದು ಎಲ್ಲಿರಬಹುದೋ..... ಮಡದಿಯ ಬಗ್ಗೆ ಇನ್ನೆಷ್ಟು ತಿರಸ್ಕಾರವೋ ....

ಒಂದುವೇಳೆ ಗತಿಸಿದವರ ಇಚ್ಛಾಶಕ್ತಿಯಮೇಲೆ ನಮ್ಮ ಭವಿಷ್ಯ ಅವಲಂಬಿಸುತ್ತದೆಯೇ ? ಯಾವ ಅಜ್ಞಾತ ಶಕ್ತಿ ತನ್ನ ಪಾಶವೀ ಪ್ರವೃತ್ತಿಯಿಂದ ಜನ ಸಮುದಾಯದ ಮೇಲೆ ಅಧಿಕಾರ ಚಲಾಯಿಸುತ್ತದೆಯೋ ಆ ಶಕ್ತಿ ಕಿಂಚಿತ್ತೂ ನ್ಯಾಯಾನ್ಯಾಯಗಳನ್ನು ವಿಮರ್ಶಿಸುವುದಿಲ್ಲವೇಕೆ ? ಕಷ್ಟ ಕಾರ್ಪಣ್ಯಗಳು ಧರ್ಮಾಧರ್ಮಗಳು ಮನುಷ್ಯನಿಗೆ ಮಾತ್ರ ಸೀಮಿತವೇ ? ಹಾ.....!.....

ಶಾಂತ ಸುಂದರ ಸಂಧ್ಯಾಸೂರ್ಯ ಪಡುವಣಂಚಿಗೆ ಇಳಿದು ಬಿಟ್ಟಿದ್ದಾನೆ. ಇನ್ನು ಮುಳುಗುವುದೊಂದು ಬಾಕಿ. ಅಸ್ತಮಾನ ಸೌಂದರ್ಯ ಧಾರೆ ಬಾನಿನಿಂದ ಭುವಿಯುವರೆವಿಗೂ ಹರಿದುದನ್ನು ಅವಲೋಕಿಸುತ್ತಾ ಮಂತ್ರಮುಗ್ಧಳಂತೆ ಕುಳಿತು ಮನವನ್ನು ಗತಕಾಲಕ್ಕೆ ಹರಿಯಬಿಟ್ಟಳು—ಪೂವಿ.

ಹೋಟೇಲಿನ ಪೋರ್ಟಿಕೊ ಆಕಡೆ ಇರುವುದರಿಂದ ಹೋಗಿ-ಬರುವವರಿಗೆ ಅವಳು ಕುಳಿತ ಸ್ಥಳ ದೃಷ್ಟಿಗೆ ಬೀಳುವಂತಿಲ್ಲ. ಶಾಂತಿಯುತವಾಗಿ ಎಷ್ಟು ಹೊತ್ತಾದರೂ ಕೂಡಬಹುದಾಗಿತ್ತು. ಒಳ ಹೋಗಿ ಒಬ್ಬಳೇ ಕೂಡುವುದಕ್ಕಿಂತ ಇಲ್ಲೇ ಇನ್ನಷ್ಟು ಹೊತ್ತಿದ್ದು ಉದ್ಯಾನವನದ ಸೊಬಗನ್ನಾದರೂ ಸವಿಯಬಹುದು ಎಂಬ ಯೋಚನೆಯಿಂದ ತಂಗಾಳಿಗೆ ಮೈಗೊಟ್ಟು ಅಲ್ಲೇ ಕುಳಿತುಕೊಂಡಳು. ಆಕೆಯ ಉಜ್ವಲ ನೋಟ ಅಲ್ಲಲ್ಲೇ ಹರಿದಾಡಿದರೂ ಏನನ್ನೂ ನೋಡುತ್ತಿಲ್ಲ. ಕ್ರಿಮಿಕೀಟಗಳು ಜೀರಿಡುತ್ತಿವೆ. ಪಕ್ಷಿಗಳು ಅತ್ತಿತ್ತ ಜಿಗಿದಾಡುತ್ತಿವೆ. ಉದ್ಯಾನದ ಮಾಲಿ ಇನ್ನೂ ನೀರೆರೆಯುತ್ತಿದ್ದಾನೆ.

ಹೊತ್ತು ಉರುಳಿತು. ಸೂರ್ಯ ತಂಗಿದ.

ದಿವಾರಾತ್ರಿಗಳ ತಾನವಿತಾನದಲ್ಲಿ ತಣ್ಣ ತಳೆದ ಮಂದಪವನ ತೀಡಿ ಬಂದ. ಪೀತಾಂಬರಧಾರಿಣೀ ಪಶ್ಚಿಮಾಂಗನೆಯ ದಿವ್ಯಶೋಭೆ ದರ್ಶನೀಯವಾಗಿತ್ತು. ಅನುರಾಗವತೀ ಸಂಧ್ಯಾಲಕ್ಷ್ಮಿಯು ಅಪೂರ್ವ ರಸ ಸಂಯೋಜನೆಯಿಂದ ಹೃದಯವನ್ನು ಸಿಕ್ತಗೊಳಿಸಿದಳು.

ಆಗ.....

ಆ ಪ್ರಕೃತಿಯ ಶುಭಚರಣಗಳಲ್ಲಿ ನಿತಾಂತ ಮಾನಸವೇದನೆ-ನಿವೇದನೆಗಳಿಗೆ ಅಲ್ಲಿ ಇನ್ನೆಷ್ಟು ಹೊತ್ತಿದ್ದರೂ ಸಾಲದು ಎನಿಸಿತು. ಪೂವಿ ಅಲುಗಲಿಲ್ಲ ಕೆಲವು ನಿಮಿಷಗಳು ಕಳೆದುವೇನೋ. ರಸ್ತೆಯಲ್ಲಿ ತಮಟೆ ವಾದ್ಯಗಳ ಶೋಕರಾಗ ಕೇಳಿಬಂತು. ಸ್ವಲ್ಪ ಹೊತ್ತು ಎಲ್ಲೋ ದೂರದಲ್ಲಿ ಕೇಳಿಬರುತಿದ್ದ ಅದು ಈಗೀಗ ಸ್ಪಷ್ಟವಾಗಿ ಕೇಳಿ ಬರಹತ್ತಿತು. ನೋಟ ರಸ್ತೆಯ ಕಡೆ ಹೊರಳುವುದರೊಳಗಾಗಿ ಅಂತಿಮ ಕೈಂಕರ್ಯಕ್ಕೆ ಟೊಂಕ ಕಟ್ಟಿದ ಶವವಾಹಕರು ದಿಟ್ಟಿಗೆ ಬಿದ್ದರು. ಯಾವ ಜೀವ ಬಾಳು ತುಂಬುವ ಮುನ್ನ

ಪುಟನೆಗೆದು ಹಾರಿತೋ....ಒಡನೆ ಚಂಗಪ್ಪನ ಅಂತಿಮಯಾತ್ರೆ ಸ್ಮೃತಿಪಥದಲ್ಲಿ ಮೂಡಿ ಬಂತು. ಶುಭ್ರಧವಳಾಂಬರಧಾರೀ ಬಂಧು-ಬಾಂಧವರು ಭಾಗವಹಿಸಿದ ದಾರುಣ ದೃಶ್ಯ ಕಣ್ಣುಗಳಲ್ಲಿ ಫಳಕ್ಕನೆ ನೀರಾಡಿಸಿತು. ಅಳುತಿದ್ದವರ ಆಕ್ರಂದನ, ಹಾಡುವವರ ಶೋಕಗೀತೆ ಕರ್ಣದೇಶದಲ್ಲಿ ಮೆಲ್ಲನೆ ಮರುಧ್ವನಿಗೈಯಹತ್ತಿತು. ಎಷ್ಟೇ ಪ್ರಯತ್ನಿಸಿದರೂ ಮನವನ್ನು ಆ ದಾರಣ ಪ್ರಸಂಗದಿಂದ ಸೆಳೆದುಕೊಳ್ಳಲಾಗಲಿಲ್ಲ. ಕಣ್ಣುಗಳಲ್ಲಿ ನಾಲ್ಕಾರು ಹನಿಗಳು ಪಟಪಟ ಉದುರಿದುವು.

ಇನ್ನು ಅಲ್ಲಿ ಕೂಡುವುದು ಸಾಧ್ಯವಾಗಲಿಲ್ಲ. ಎದ್ದು ಒಳಗಡೆ ಹೋದಳು. ಬಾಗಿಲಲ್ಲಿ ಎದುರಾದ ಪರಿಚಾರಕ "ಎರಡನೇ ನಂಬರಿನ ಕೊಠಡಿಯ ಬಾಗಿಲನ್ನು ಹರವಾಗಿ ತೆರೆದ. ಒಳಗಡೆ ಸಂಧ್ಯಾರಾಗದ ಪ್ರಶಾಂತಧಾರೆ ಹರಿದಿದೆ. ಅದೇ ಪಲ್ಲಂಕ, ಅದೇ ಕುರ್ಚಿ, ಅದೇ ಮೇಜು, ಅದೇ ಕನ್ನಡಿ.....ಎಲ್ಲಾ ಅವೇ. ಅಂದು ಹೇಗೆ ಹೊಂದಿಸಿಟ್ಟಿತ್ತೋ ಇಂದೂ ಹಾಗೆಯೇ ಹೊಂದಿಸಲ್ಪಟ್ಟವೆ.

ಬೊಗಸೆಗಂಗಳಿಂದ ನೋಡುತ್ತಲೇ ಒಳಗಡೆ ಪದಾರ್ಪಣ ಮಾಡಿದಳು ಪೂವಿ.

ಸುಂದರ ಮನೋಹರ ಉದ್ಯಾನವನಕ್ಕೆದುರಾದ ಅದೇ ಕಿಟಕಿಯ ಬಳಿಯಲ್ಲಿ ಕುಳಿತು, ಒಂದು ಬಗೆಯ ವಿಚಿತ್ರ ಆನಂದಜ್ಯೋತಿಯಿಂದ ಪ್ರದೀಪ್ತವಾದ ಕಾಡಿಗೆಯಂತಹ ಕಣ್ಣುಗಳ ಬೆಳಕನ್ನು ಚೆಲ್ಲಿ, ಮೂರ್ತಿಮತ್ತಾಗಿ ದಿನಗಳೆಯುತ್ತಿದ್ದ-ಚಂಗಪ್ಪ. ಆ ಕೊಠಡಿಯನ್ನಿಂದು ಕೇಳದಿದ್ದರೂ ಅದು ತೆರವಾಗಿದ್ದುದರಿಂದ ದೊರಕಿಸಲಾಗಿತ್ತು. ಒಂದು ಘಳಿಗೆ ನಿಂತು ನೋಡಿ ಪಲ್ಲಂಕದ ಮೇಲೆ ಕುಳಿತುಕೊಂಡಳು. ಹಳೆಯ ನೆನಹುಗಳು ಮನವನ್ನು ಮುತ್ತಿ ಮುಖ ಕಳಾಹೀನವಾಯಿತು.

ಚಂಗಪ್ಪ ಸಮೀಪ ಸಂಬಂಧಿ. ಬಾಲ್ಯದಿಂದಲೂ ಆತನ ಒಡನಾಡಿಯಾಗಿ ಗುಣಾವಗುಣಗಳನ್ನು ಮನಸಮಾಡಿ, ರೀತಿನೀತಿಗಳನ್ನು ಅರಿತು ಭಾವವಿಭಾವಗಳನ್ನು ಪರಿಶೀಲಿಸಿ, ಆಶೋತ್ತರಗಳನ್ನು ಹೃದ್ಗತ ಮಾಡಿಕೊಂಡ ನಾರೀಶ್ರೀಗೆ ಜೀವನಯಾತ್ರೆ ನೀರು ಕುಡಿದಷ್ಟು ಸರಾಗ. ಆದರೆ.....ಆದರೆ....ಆ 'ಸಮೀಪ ಸಂಬಂಧ' ಮಕ್ಕಳ ಭಾಗ್ಯ ನೀಡಲಿಲ್ಲ. ವಿವಾಹ

ಪೂರ್ವದಲ್ಲಿ ಅವಳು ಅದೇ ಕಾರಣವಾಗಿ ಸಮಿಾಪ ಸಂಬಂಧವನ್ನು ವಿರೋಧಿಸಿದ್ದುಂಟು. ಆಗ ತನ್ನ ಮನದನ್ನೆಯ ಮನವನ್ನು ಗೆಲ್ಲಲು ಹರಿಸಿದ ಲೀಲಾಜಾಲವಾದ ಆತನ ಸರಳ ಸಲಿಲ ವಾಕ್ಚಾತುರ್ಯಕ್ಕೆ, ಹೃದಯ ನಿವೇದನೆಗೆ, ಭಾವ ಸಂವೇದನೆಗೆ ಹೆಂಗರುಳು ಸೋತಿತು. ಕಿಂಚಿತ್ ಅಸಮಾಧಾನವನ್ನು ಬದಿಗೊತ್ತಿ ಹೃತ್ಪೂರ್ವಕವಾಗಿ ಮನಪೂರ್ವಕವಾಗಿ ಪಾಣಿಗ್ರಹಣ ಮಾಡಿಕೊಂಡಳು. ಅಂದು ಮನದನ್ನೆಯ ಮನವನ್ನು ಗೆದ್ದಿದ್ದರೂ ಅನಂತರ ಮಕ್ಕಳ ಭಾಗ್ಯವನ್ನು ಪಡೆಯಲಾಗದಾಗ ಅತೀವ ಪರಿತಾಪವನ್ನು ಮನದಲ್ಲೇ ಅನುಭವಿಸುತ್ತಿದ್ದ. ತನ್ನಿಂದಾಗಿಯೇ ಅವಳ ಬಾಳ ಕುಡಿಯು ಸಹ ಕವಲೊಡೆಯಲಿಲ್ಲವೆಂಬುದು ಮನವನ್ನು ಮುಳ್ಳಿನಂತೆ ಚುಚ್ಚುತಿತ್ತು....ಹೃದಯವನ್ನು ಭೈರಿಗೆಯಂತೆ ಕೊರೆಯುತಿತ್ತು. ಆದರೂ ದಂಪತಿಗಳು ಅದರ ಆಸೆಯನ್ನು ಬಿಟ್ಟುಕೊಟ್ಟು ಪರಸ್ಪರ ಅನ್ಯೋನ್ಯತೆಯನ್ನು ಗಳಿಸಿಕೊಂಡಿದ್ದರು. ಕ್ರೂರ ವಿಧಿ ಅಷ್ಟಕ್ಕೂ ಸುಮ್ಮನಾಗಲಿಲ್ಲ. ಭಾವೀ ಮಂಗಳದೆಡೆಗೆ ಪಿಶಾಚ ಹಸ್ತವನ್ನು ಚಾಚಿತು. ಕೆಲವು ಕಾಲ ಚಂಗಪ್ಪ ಚಳಿಜ್ವರಗಳಿಂದ ನರಳಿದ. ಅದೇ ನೆವದಲ್ಲಿ ಜೀವನ ಮಾರ್ಗಯೋಗದ ಒಂದು ಅಶುಭ ರಾತ್ರಿಯಲ್ಲಿ ಬಹುಮೂಲ್ಯಹೃದಯವನ್ನು ಹಿಸುಕಿ ಮಡದಿಯನ್ನು ದಿಕ್ಕಿಲ್ಲದಂತೆ ಮಾಡಿತು.

ಅಂದಿನ ಆ ಕ್ರೂರ ಸುಂದರ ನೆನಹು ಚಿತ್ತಭಿತ್ತಿಯಲ್ಲಿ ಸುಳಿದಳಿದು ಮನೋವೇಗದಿಂದ ತನ್ನ ಮೇಲಣ ಹತೋಟಿ ತಪ್ಪಿ ಕಣ್ಣುಗಳಲ್ಲಿ ಕಂಬನಿಗಳು ಪಟಪಟನೆ ಉದುರಿದುವು. ಒಂದೆರಡು ಘಳಿಗೆ ವೈಮರೆತರೂ ಅನಂತರ ಕಂಬನಿಗಳನ್ನು ತೀಡಿಕೊಂಡು ತನ್ನನ್ನು ತಾನು ಹತೋಟಿಗೆ ತೆಗೆದುಕೊಂಡಳು.

ಬಾಲ್ಯದಿಂದಲೂ ತನ್ನವಳನ್ನು ಕಂಡಿದ್ದರೂ ಆ ಸಲಿಗೆಯಿಂದ ಜೀವನದಲ್ಲಿ ಎಂದೂ ಲಘುವಾಗಿ ಕಂಡವನಲ್ಲ. ಆಕೆಯಲ್ಲಿ ಕಾಣುತಿದ್ದ ಹಿರಿಮೆ ಸೀಮೆಯಿಲ್ಲದ್ದು. ಅವನು ಹೃದ್ರೋಗಿಯಾಗಿ ಎರಡು ವರ್ಷಗಳ ಕಾಲ ವಿಶ್ರಾಂತಿಯಲ್ಲಿದ್ದಾಗ ಮಡದಿಯ ಕಿವಿಯಲ್ಲಿ ಊದಿದ ತಾರಕ ಮಂತ್ರ ಇದು.

"ಪೂವಮ್ಮಾ, ಇನ್ನು ಮೇಲೆ ಖಂಡಿತಾ ನನ್ನ ಆಸೆ ಇಟ್ಟುಕೊಳ್ಳಬೇಡ. ಎಂದಾದರೂ ಯಾವ ಘಳಿಗೆಯಲ್ಲಾದರೂ ನಾನು ಹೋಗುವವನೇ!

ಅನಂತರ ನಿನ್ನ ಪ್ರಾಯ ಕಳೆಯುವ ಮೊದಲೇ ಯಾರಾದರೂ ಯೋಗ್ಯ ನನ್ನು ಕೈಹಿಡಿದು, ಮಕ್ಕಳ ಭಾಗ್ಯ ಪಡೆದು ಈ ಜೀವನವನ್ನು ಉದ್ಧರಿಸು."

ಆ ಮಾತು ಕಿವಿಗೆ ಬಿದ್ದೊಡನೆಯೇ ಕಾದ ರಸ ಸುರಿದಂತಾಯಿತು.

ಹಾ.....! ಮಾನವನ ಕೋಟಿಯಲ್ಲಿ ಅಂತಹ ವ್ಯಕ್ತಿ ದುರ್ಲಭ.

ಆ ದುಃಖಭರಿತ ಉಷ್ಣೋಧಿಕ ಮಹಾಜ್ವಾಲೆಯಲ್ಲಿ ದಹಿಸಿ ಬಳಲಿ

ಅಖಂಡ ಸ್ತ್ರೀತ್ವದಲ್ಲಿ ಲೀನನಾಗಿ ಮಹಾನುಭೂತಿಯನ್ನು ಪಡೆದು, ನಯವಿನಯ ಪ್ರೀತಿ ವಿಶ್ವಾಸಗಳ ಖನಿಯಾಗಹತ್ತಿದ....ಅದೇನು ಅಸ್ತ ಮಾನ ಸೌಂದರ್ಯವೋ ಅಥವಾ ವಿದ್ಯಮಾನದ ಪ್ರೌಢಿಮೆಯೋ ಎಂಬು ದನ್ನು ಭಗವಂತ ಮಾತ್ರ ಅರಿಯ ಬಲ್ಲ....

ರುಗ್ಣ ಶಯ್ಯೆಯಲ್ಲಿ ರುದ್ರ ಮಧುರ ದಿನಗಳು ಎರಡು ವರ್ಷಮಾನಗಳ ಕಾಲ ನಿರಂತರ ಉರುಳಿದಾಗ ಆತನ ಸಹಚರ್ಯದಲ್ಲಿ ಪಡೆದುಕೊಂಡ ಆತ್ಮಾನು ಭೂತಿಯನ್ನು ಬಹುಶಃ ಆಕೆ ತನ್ನ ಜೀವಮಾನದಲ್ಲೇ ಪಡೆದುಕೊಂಡಿರಲಿಲ್ಲ ವೇನೋ.....ಬದುಕು ಎಷ್ಟೊಂದು ಮಧುರವೋ ಅಷ್ಟೇ ಭೀಷಣವೆಂಬು ದನ್ನು ಅರಿತಾಗ ತೆರೆಯ ಮರೆಯಲಿ ಮಗುವಿನಂತೆ ಕಂಬನಿಗರೆದಿದ್ದಳು ನೀರೆ.

ಸಂಧ್ಯಾಲಕ್ಷ್ಮೀ ಯಾವಾಗ ಕಪ್ಪು ಸೀರೆ ಧರಿಸಿ ನಕ್ಷತ್ರಗಳ ಮಾಲೆ ಸೂಡಿದಳೋ, ಶುಕ್ಲಪಕ್ಷದ ಚಂದ್ರಮ ಯಾವಾಗ ಬಿಜಯಂಗೈದನೋ, ಶೀತಕಾಲದ ತಂಪು ಯಾವಾಗ ಆರಂಭವಾಯಿತೋ ಎಂಬುದು ಆಕೆಯ ಗಮ ನಕ್ಕೆ ಬಂದೇ ಇರಲಿಲ್ಲ. ಒಳಗಡೆ ನಸುಗತ್ತಲು ಆವರಿಸಿದ್ದರೂ ಆ ಸುಂದರ ಸುನೇತ್ರೆ ಸ್ವಿಚ್ ಒತ್ತಿರಲಿಲ್ಲ.

.....ಪೂವಿ ತನ್ನ ಆರಾಧ್ಯ ದೇವತೆಯಾದ ಚಂಗಪ್ಪ ಸ್ವರ್ಗಸ್ಥನಾಗಿ ವರ್ಷ ತುಂಬುವ ಮೊದಲೇ ಮರುಮದುವೆ ಮಾಡಿಕೊಳ್ಳಲು ಒಪ್ಪಿಕೊಂಡು ದುದೂ ಸಹ ಒಂದು ಸಂದಿಗ್ಧ ಪರಿಸ್ಥಿತಿಯಲ್ಲಿ. ಆಗಲೇ ಮೂವತ್ತಾರು ವಸಂತಗಳ ಸೊಂಪುಂಡುದುದೊಂದಾದರೆ ಸಾಮಾಜಿಕ ವಲಯದಲ್ಲಿ ತಲೆಯೆ ತ್ತಿದ ದುಷ್ಟ ವ್ಯಾಘ್ರಗಳ ಹಾವಳಿ ಇನ್ನೊಂದು. ಅಪಾರವಾದ ಆಸ್ತಿಗೆ ಒಡೆಯಳೂ ಏಕಾಂಗಿಯೂ ಆದ ಅವಳ ಅಧೋಗತಿಗೆ ಸರ್ವ ಸನ್ನಾಹ ನಡೆ ಯುತಿದ್ದುದು ನಾರೀಮೂರ್ತಿಯ ಧೃತಿಗೆಡಿಸಿತು. ಮೊನ್ನಪ್ಪನನ್ನು ಆಕೆ ಮೊದಲಿನಿಂದಲೂ ಬಲ್ಲಳು. ಚಂಗಪ್ಪನಿಗೂ ಈತನಿಗೂ ಹಗಲು ರಾತ್ರಿಯ

ಅಂತರವಿದೆ ಎಂಬುದೂ ಸಹ ಗೊತ್ತು. ಆದರೂ ಆಗಿನ ಸಂದರ್ಭದಲ್ಲಿ 'ಅಸ್ತು' ಎನ್ನದೆ ವಿಧಿ ಇರಲಿಲ್ಲ, ಚಂಗಪ್ಪನೊಡನೆ ಪಡೆದ ಸಹಾನುಭೂತಿಯ ಸೌಖ್ಯ ಇನ್ನಾವ ಗಂಡಸಿನಿಂದಲೂ ಅಸಾಧ್ಯ ಎಂಬುದಂತೂ ಖಚಿತ. ಅಂದ ಮೇಲೆ ಮೊನ್ನಪ್ಪನಿಗೆ ಹಣೆ ಮಣಿಯುವುದರಿಂದ ಅನರ್ಥವೇನೂ ಆಗಲಾರದು ಎಂಬುದು ಬುದ್ಧಿ ಗಮ್ಯ ...ಅನುಭವ ವೇದ್ಯ. ಅರ್ಥಾತ್, ಅವನ ರೀತಿ ನೀತಿಗಳು ಮಿಲಿಟರಿ ಚೌಕಟ್ಟಿಗಾಗಿ ನಿಯೋಜಿತವಿದ್ದು ಸಿವಿಲ್ ಕ್ಷೇತ್ರಕ್ಕೆ 'ಅತಿ' ಯಾದುದರಿಂದ ಆತನ ಬಗ್ಗೆ ಅಂತರಂಗದಲ್ಲಿ ಎಷ್ಟು ವಿಶ್ವಾಸ ವಿದೆಯೋ ಅಷ್ಟೇ ಪರಿತಾಪವೂ ಇದೆ. ಸುಖ-ದುಃಖಗಳ ತಾನವಿತಾನದಲ್ಲಿ ಹೃದಯ ದಣಿಯುತ್ತದೆ. ಪರಿಸ್ಥಿತಿಯ ಒತ್ತಡಕ್ಕೆ ಮಣಿದ ಮನಸ್ಸು ಕಂಬನಿ ಮಿಡಿಯುತ್ತದೆ. ಈಗ....ಅಂತಹ ಪರಿಸ್ಥಿತಿಯಲ್ಲಿ ತಾನು ಯಾವ ರಂಗ ದಲ್ಲೂ ಇಲ್ಲದಿರುವಂತೆ ಸ್ತಬ್ಧತೆಯಿಂದ ದಿನಚರಿಯನ್ನು ನೂಂಕುತ್ತಾಳೆ; ಸ್ಮಶಾನ ಕೈಂಕರ್ಯದೋಪಾದಿಯಲ್ಲಿ ಕಾರ್ಯಕಲಾಪಗಳು ನಡೆಯುತ್ತವೆ.

ಮರುಮದುವೆಯಾಗುವುದಕ್ಕಿಂತ ಕೊಡವ ಪದ್ಧತಿಯ ಪ್ರಕಾರ 'ಒಬ್ಬಂಗಾಲ' ದಿಂದ ಸಂತತಿ ಪಡೆದರೆ ಸಾಕು. ಚಂಗೂ ಬರಿದು ಮಾಡಿ ಹೋದ ಈ ಸಂಸಾರವನ್ನು ತುಂಬುವುದು ಇನ್ನಾರಿಂದಲೂ ಸಾಧ್ಯವಿಲ್ಲ. ಅಂದಮೇಲೆ ಬಾಳುದ್ದಕ್ಕೂ ಹೆಣಗಾಟವೇಕೆ.....? ಎಂಬ ಯೋಚನೆಯೂ ಮೂಡುತಿತ್ತು, ಸಾಮಾಜಿಕ ವಲಯದಲ್ಲಿ ಹಲವಾರು ಮಂದಿ ಹಲವಾರು ವಿಧಿ ವಿಧಾನಗಳನ್ನು ತಲೆಗೆ ತುಂಬಿ ಮನಸ್ಸಾಗರದ ಅಲೆಗಳು ಅಲ್ಲೋಲ ಕಲ್ಲೋಲವಾಗಿ ಘೂರ್ಣ ಉದ್ಭ್ರಾಂತತೆ ಮಂಡಿಯೂರಿ ನಿಂತಾಗ ವಿಷಯ ಬಗೆಹರಿಯದೆ ಮರುಮದುವೆ ಮಾಡಿಕೊಂಡು ಶಾಶ್ವತ ರಕ್ಷಣೆ ಪಡೆಯುವುದು ಲೇಸು ಎಂಬ ತೀರ್ಮಾನಕ್ಕೆಡೆಕೊಟ್ಟಿತು ಸಂಭ್ರಾಂತ ಚಿತ್ತ.

ಪ್ರಸ್ತುತ,

ಕಣ್ತೆರೆದು ಜೀವನವನ್ನು ಪರಿಶೀಲನಾ ದೃಷ್ಟಿಯಿಂದ ನೋಡಿದಾಗ ಮಡದಿಯ ಶೀತಲ ಮೌನ ಅಂತರಂಗವನ್ನು ಹದಗೆಡಿಸಿ, ಮೊನ್ನಪ್ಪ ಬೆಚ್ಚಿದ. "ಪೂವೀ....ಏನೋ ಒಂದು ರೀತಿ ಇದ್ದೀಯಲ್ಲಾ, ಅದೇಕೆ?"

ಆ ಅಮಾಯಕ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲವಾದುದರಿಂದ ಬೆಚ್ಚಿತು ಜೀವ,

"ಯಾಕೋ....ತಲೆನೋವು,"

ಅದೊಂದೇ ಆಕೆ ಮುಂದಿಡಬಹುದಾಗಿದ್ದ ಕಾರಣ.

"ನಿನಗೆ ಸದಾ ತಲೆನೋವು ಬರುತ್ತದೆಯೇ ? ಸುಮ್ಮನೇ ಇದ್ದೀಯಲ್ಲ, ಡಾಕ್ಟರ ಬಳಿಗೆ ಏಕೆ ಹೋಗಬಾರದು ?"

"ನೋಡೋಣ, ವಿಶ್ರಾಂತಿ ತೆಗೆದುಕೊಂಡರೆ ಸರಿಹೋಗುತ್ತದೆ "

ಅಂತಹ ಸಂದರ್ಭದಲ್ಲಿ ಚಂಗಪ್ಪ ತೋರುತಿದ್ದ ಅನುಕಂಪವೇ ಬೇರೆ. ಮಾತಿನ ಸರಣಿಯಂತೂ ಮನಮೋಹಕ. ಆತನ ಸನ್ಮೋಹನಾಕಾರದಲ್ಲಿ ಅಡಗಿದ ಆ ಮಾರ್ದವ ಭಾವನೆ ಈಗಲೂ ತನ್ನ ಸುತ್ತಮುತ್ತ ಸುಳಿಸುತ್ತುತ್ತಿರುವಂತೆ ಭಾಸವಾಗುತ್ತದೆ.

ಪ್ರಾಯಶಃ,

ಭಾರತ ಲಲನೆಯರ ಜೀವನದಲ್ಲಿ ಪ್ರಧಾನ ಅಂಶವಾಗಿ ಭಾವಿಸುತ್ತಿರುವ ಪಾತಿವ್ರತ್ಯ ಕೇವಲ ಅಲ್ಪ ವಿಷಯವೆಂದು ಅಲಕ್ಷಿಸಲು ಬಹಳ ಮಟ್ಟಿಗೆ ಚಂಗಪ್ಪನೇ ಕಾರಣ. ಆತನನ್ನು ಹೃದಯ ಪೂರ್ವಕವಾಗಿ ಪ್ರೀತಿಸಿ, ಅನಂತ ದುಃಖವನ್ನು ಪಡೆದು, ಸಾಮಾನ್ಯ ವ್ಯಕ್ತಿಯಾದ ಮೊನ್ನಪ್ಪನನ್ನು ಹೃದಯ ದೇಗುಲಕ್ಕೆ ಬರಮಾಡಿಕೊಳ್ಳುವಾಗ ಅನುಭವಿಸಿದ ದುಃಖ ಕಡಿಮೆಯೇನಲ್ಲ. ಚಂಗಪ್ಪನಿಗಾಗಿ ಬಿಟ್ಟುಕೊಟ್ಟ ತಿಲಕವನ್ನು ಮೊನ್ನಪ್ಪನಿಗಾಗಿ ಮತ್ತೆ ಧರಿಸಿ ಹಸೆಮಣೆಯ ಹೆಣ್ಣಾದಾಗ ಈ ಜೀವನ ಒಂದೀ 'ಭ್ರಮೆ' ಕೇವಲ ಸಾಮಾಜಿಕ ರಕ್ಷಣೆ ಮತ್ತು ಜೀವನ ತೃಷೆಗಳ ವಿನಾ ಇದರಲ್ಲಿ ಇನ್ನಾವ ಹುರುಳೂ ಇಲ್ಲ..... ಎಂದು ಕಳಕಳಿಯಿಂದ ಮರುಗಿತು ಜೀವ.

ಚಂಗಪ್ಪ ಗತಿಸಿದ ತರುಣದಲ್ಲಿ ಕಂಡ ಕನಸಿನಲ್ಲಿ ಆತ ಸತಿಗೆ ನೀಡಿದ ಆಶ್ವಾಸನೆ ಜನ್ಮಜನ್ಮಾಂತರಗಳಲ್ಲೂ ಮೆಚ್ಚುವಂತಿತ್ತು; ಬೆಚ್ಚುವಂತಿತ್ತು.

"ಪೂವಮ್ಮಾ! ನೀನು ಎಲ್ಲೇ ಇರು ; ಕೊನೆಯಲ್ಲಿ ಸೇರುವುದು ನನ್ನನ್ನೆ !"

"ಹಾ....!"

"ಇಗೋ, ನಿನಗೆ ಅಂದೇ ನೀಡಬೇಕಾಗಿದ್ದ ಬಹುಮಾನವನ್ನು ಇಂದು ನೀಡುವೆ !"

ಪೂವಮ್ಮ ಪ್ರಾಂಜಲೀಬದ್ಧಳಾಗಿ ನಿಂತಳು.

ಚಂಗಪ್ಪ ಎರಡೂ ಕೈಗಳಿಂದ ನೀಡಿದುದು ದಟ್ಟಪುಷ್ಟವಾದ ಮಗು ! ಅಳಬೇಕೋ ನಗಬೇಕೋ ಹೊಳೆಯದೆ ಆಶ್ಚರ್ಯತೃಷಿತ ಲೋಚನಗಳಿಂದ, ನಿಟ್ಟಿಸಿದೊಡನೆಯೇ ಅವನು ಅದೃಶ್ಯನಾದ.

ಕನಸೊಡೆಯಿತು.

ಹಾ....! ಆ ಕನಸು ನನಸಾಗಬಲ್ಲುದೇ ಇಂದು ?

ವ್ಯಾಪ್ತಿಗೆ ಮೀರಿ ಮದ್ದಲೆಯ ಘೋಷದಂತೆ ಮಿಡಿಯುತಿದ್ದ ಹೃದಯ ವನ್ನು ಅದುಮಿ ಹಿಡಿದುಕೊಂಡಳು ಪೂವಿ. ಅಸ್ತಗಿರಿಯ ತಟಾಂತಲಗ್ನದಲ್ಲಿನ ಸೂರ್ಯಮಂಡಲದಂತೆ ಮುಖಬಿಂಬ ಕೆಂಪಾಯಿತು. ಕಣ್ಣುಗಳಂಚಿನಲ್ಲಿ ಕಂಬನಿಗಳು ಪಳಪಳ ಮಿಂಚಿದುವು. ಕೃತಜ್ಞತಾಪಾಶದಲ್ಲಿ ಬಂಧಿತಳಾಗಿ ಕಂಬನಿಯನ್ನು ಕರವಸ್ತ್ರದಿಂದ ತೀಡಿಕೊಂಡು ನೋಟವನ್ನು ಪಲ್ಲಂಕದ ಕಡೆ ಹರಿಸಿದಳು. ಚಂಗಪ್ಪ ಮಲಗುತ್ತಿದ್ದುದು ಅಲ್ಲೇ. ಆ ವಿಶಾಲವಾದ ಗವಾಕ್ಷಿ ಯಲ್ಲಿ ಮೊಗವಿಟ್ಟು ಸುಂದರ ಉದ್ಯಾನದ ಸೊಬಗನ್ನು ಸವಿಯುತಿದ್ದ ದೃಶ್ಯ ಮತ್ತೆ ಮೂಡಿತು. ಆ ರಾಶಿ ರಾಶಿ ಹೂಗಳ ಬಳಿ ತನ್ನ ಮನದನ್ನೆ ಇದ್ದಲ್ಲಿ ಸೊಬಗು ಇಮ್ಮಡಿಯಾಗುವುದು ಎಂಬಷ್ಟು ಅಮಿತಾನಂದ. ಅವಳು ಒಲ್ಲೆ ನೆಂದರೂ ಬಿಡದೆ ಕಳುಹಿಸಿ ಇಲ್ಲಿಂದಲೇ ಕ್ಯಾಮರಾ 'ಕ್ಲಿಕ್' ಎನಿಸುವುದರಲ್ಲಿ ಎಲ್ಲಿಲ್ಲದ ಆನಂದ. ನೀರು ಚಿಮ್ಮುವ ಕಾರಂಜಿಯ ಬಳಿ ಇಬ್ಬರೂ ಕೂಡಿ ತೆಗೆಸಿಕೊಂಡ ಚಿತ್ರಗಳೆಷ್ಟೋ.... ಬಾಲ್ಯದಲ್ಲಿ ಎಲ್ಲರೂ ಆತನನ್ನು ಕರೆಯುತ್ತಿ ದ್ದುದು "ಚಂಗೂ" ಎಂದು. ಅದೇ ಕೊನೆಗೆ ಅನ್ವರ್ಥನಾಮವಾಯಿತು, ಅವಳು ಕರೆಯುತ್ತಿದ್ದುದು ಸಹ "ಚಂಗೂ" ಅಂತಲೇ. ಮದುವೆಯಾದ ನಂತರವೂ ಅದು ಬದಲಾಗಲಿಲ್ಲ. ಚಂಗೂ ಹೃದ್ರೋಗಿಯಾದ ನಂತರ ದುಃಖ ದುಗುಡ ಭಯ ಉದ್ವೇಗಗಳಿಂದ ಆಕೆ ಬಿಳಿಚಿಕೊಂಡಳು. ಮೈ ಸೊರಗಿ ಪಾಂಡುರವರ್ಣದ ಮುಖಮಂಡಲವು ಮ್ಲಾನವಾಯಿತು. ಮಡದಿಯ ಸ್ಥಿತಿಗತಿಯನ್ನು ಗಮನಿಸಿದ ಚಂಗಪ್ಪನಿಗೆ ಎಲ್ಲಿಲ್ಲದ ಭಯ.

"ಒಂದು ವೇಳೆ ನೀನೇ ಹೋಗಿ ಬಿಟ್ಟರೆ ನನ್ನ ಗತಿಯೇನು ಪೂವಮ್ಮಾ?"

ಕರುಣ ಕಾತರ ಸ್ವರ ಮಾನಸ ನಿವೇದನೆಯಿಂದ ಉದ್ಭಿನ್ನವಾಗಿತ್ತು. ಸ್ವಲ್ಪ ಸಾವರಿಸಿಕೊಂಡು ಮುಂದುವರಿದ. "ಕೇವಲ ದಂಡಭೋಗಕ್ಕಾಗಿ ನೀನು ನಾರೀ ಜನ್ಮವೆತ್ತಲಿಲ್ಲ ಪೂವಮ್ಮ. ಕಾವೇರಿಯ ಪವಿತ್ರ ಮಂದಿರ

ನಿನ್ನ ಹೃದಯದೇಗುಲ. ನೀನು ಸೊರಗುವುದರಿಂದ ಕಾವೇರಿಯು ನಲುಗ ಬಾರದು. ಏನೇ ಇರಲಿ, ಧೈರ್ಯದಿಂದ ಸಂಬಾಳಿಸಿಕೊಂಡು ಹೋಗು. ಯಾರೂ ಈ ಲೋಕದಲ್ಲಿ ಶಾಶ್ವತವಲ್ಲ."

ಸಾಂಧ್ಯಮೇಗಮಂಡಲ ಮಾಲೆಯಲ್ಲಿ ಬಂಧಿತ ಚಂದ್ರಮಂಡಲ ದೀಪ್ತಿಯಂತೆ ದಂಪತಿಗಳ ಪ್ರೇಮವರ್ಷಣ ದುಃಖಭೋಗದ ತೆರೆಯ ಮರೆಯಲ್ಲಿ ಅಜ್ಞಾತವಾಗಿತ್ತು.

ಆಗಿನ ಅಂತಹ ದುರ್ಭರ ದಿನಗಳಲ್ಲಿ ಆತನ ಸಲುವಾಗಿಯಾದರೂ ತಾನು ಸಂತಸದಿಂದಿರುವುದು ಅನಿವಾರ್ಯವಾಗಿತ್ತು. ಆತನಿಗೆ ವಿಶ್ರಾಂತಿ ನೀಡುವ ಸಲುವಾಗಿ ತಿಂಗಳುಗಟ್ಟಲೆ ಅಲ್ಲಿಗೆ ಎಳೆತರುತಿದ್ದಳು ಪೂವಮ್ಮ.

ಅಂದಿನ ಮರೆಯಲಾಗದ ನೆನಹುಗಳು ಚಿತ್ತಭಿತ್ತಿಯಲ್ಲಿ ಚಲನ ಚಿತ್ರದಂತೆ ಸುಳಿದಳಿದುವು, ಮೂರ್ತಿಮತೀ ಶೋಭಾ ದೀಪ್ತಿಯಂತೆ ಮರವಟ್ಟು ಕುಳಿತುಕೊಂಡಳು ಪೂವಿ. ದೂರದಿಗಂತದ ಬಾನ್ತಟದಲ್ಲಿ ಚಂದ್ರಮ ಮಾಂಗಲ್ಯದ ಮಳೆಗರೆಯುತಿದ್ದ. ಬೆಳುದಿಂಗಳ ವಿಮಲಧಾರೆ ಒಳಗಡೆ ಹರಿದಿತ್ತು. ಎದ್ದು ಸ್ವಿಚ್ ಒತ್ತುವ ಅವಶ್ಯಕತೆಯೂ ಬೀಳಲಿಲ್ಲ. ಹಾಗೆ ಅದೆಷ್ಟು ಹೊತ್ತು ಉರುಳಿತೋ. ಸದ್ದಿಲ್ಲದ ಶಾಂತಿಯಲ್ಲಿ ದುಃಖತಪ್ತ ಚಿತ್ತ ಕಂಬನಿಯ ಉಗಮವಾಯಿತು. ಎರಡೂ ಕೈಗಳಿಂದ ಕರವಸ್ತ್ರವನ್ನು ಕಣ್ಣುಗಳಿಗೆ ಒತ್ತಿ ಹಿಡಿದುಕೊಂಡಳು. ಘಳಿಗೆ ಘಳಿಗೆಗಳು ನಿರಾತಂಕವಾಗಿ ಉರುಳಿದುವು. ಗತಕಾಲಕ್ಕೆ ಸರಿದ ಚಿತ್ತ ಪ್ರಯತ್ನಿಸಿದರೂ ಹಿಮ್ಮರಳಲಿಲ್ಲ. ಯಾರ ಬಳಿ ಆತ್ಮಾರ್ಪಣೆ ಮಾಡಿಕೊಂಡಿದ್ದಳೋ ಆ ಅಭಿಶಸ್ತ ಚರಣಗಳ ಉದ್ದಂಡ ನೆನಹು ಮತ್ತೆಮತ್ತೆ ಚಿತ್ತಭಿತ್ತಿಯಲ್ಲಿ ಸುಳಿಸುಳಿದಳಿಯಿತು. ಸ್ವಲ್ಪ ಹೊತ್ತು ಉರುಳಿತು. ಕರ್ಣ ಪಟಲಗಳ ನೆಲೆಯಲ್ಲಿ ಇನ್ನದರ ನೆನಹು ತರವಲ್ಲ ಎಂದು ಯಾರೋ ಕೂಗಿ ಹೇಳಿದಂತಾಯಿತು.

ಆದರೂ....

ಪೂವಿ ಕಣ್ಣುಗಳನ್ನು ತೀಡಿಕೊಂಡು ನೋಟವನ್ನು ಕಿಟಕಿಯೆಡೆಗೆ ಹರಿಸಿದಳು.

ಬಾನಂಚಿನಲ್ಲಿ ನಡೆದಿತ್ತು ಮಂಗಳ ಮಯವಾದ ಬೆಳ್ಮುಗಿಲುಗಳ ಮೇಲ.

ಗಮನವನ್ನು ಅತ್ತಲೇ ಹರಿಸಿ ಮಂತ್ರ ಮುಗ್ಧಳಂತೆ ಕುಳಿತಳು ಪೂವಿ. ಸದ್ದಿಲ್ಲದ ಶಾಂತಿಯಲ್ಲಿ ಎಲ್ಲಿಯದೋ ಪ್ರಶಸ್ತ ಹೆಜ್ಜೆಗಳ ಮೆಲುಸದ್ದು...... ಎದೆಯಾಳದಿಂದ ನೀಳವಾದ ನಿಟ್ಟುಸಿರೊಂದು ಹರಿದು ಬಂತು. ಸ್ಪಷ್ಟವಾಗಿ ಕೇಳಿಸಹತ್ತಿದ ಆ ಮೆಲುಸದ್ದನ್ನು ಗಮನಿಸಿತು ಚಿತ್ತ. ನೋಟ ಸಹಜ ಕುತೂಹಲದಿಂದ ಸದ್ದು ಬಂದೆಡೆಗೆ ಹೊರಳಿತು. ಎದ್ದು ಸ್ವಿಚ್ ಒತ್ತೋಣ ವೆಂದು ಹಿಂತಿರುಗಿದಾಗ ನಸು ಬೆಳಕಿನ ನೆಲೆಯಲ್ಲಿ ಬಿಳಿಯ ಆಕೃತಿ....ಧವಳ ವಸ್ತ್ರದಾರಿ ಚಂಗೂ! ಹೌದು....ನಿಜವಾಗಿಯೂ ಹೌದು! ಚಂಗೂ!.... ನನ್ನ ಚಂಗೂ!

ನೀಡಿದ ತೋಳುಗಳ ಬಂಧನದೊಳಗೆ ವೈಯ್ಯಾಂತ ಮಡದಿಯನ್ನು ಸಂತೈಸುತ್ತಾ–"ನಾನು....! ಚಂಗೂ ಅಲ್ಲ; ಮೊನ್ನಪ್ಪ!"

ಮೆಲ್ಲಗೆ–ಬಹು ಮೆಲ್ಲಗೆ ಭಾಹು ಬಂಧನದೊಳಗೆ ಕಂಪಿಸುತ್ತಿದ್ದ ಅವಳು ಮುಸು ಮುಸು ಅತ್ತಳು.

ಧರ್ಮ–ಕರ್ಮ, ಭಕ್ತಿ–ಜ್ಞಾನ, ಕಾಂತಿ-ಕೀರುತಿ, ಮಧುರ–ಸೌಮ ನಸ್ಯ ಸಂಘಟನೆಯ ರಾಗಾರುಣತಾನ ಹೊಮ್ಮುತಿವೆ ಅಲ್ಲಿ.....!

– ಸಂಪೂರ್ಣಂ –

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧) ಜೀವನಗಂಗಾ
೨) ಡಾ|| ಅಘೋರ
೩) ಡಾ|| ಕಮಲೇಶ್
೪) ವಂದೇ ಮಾತರಂ
೫) ಅನಂತಾನಂತದೆಡೆಗೆ

(ಕಥಾ ಸಂಕಲನ)

೬) ಶ್ರೀಮುಖಿ
೭) ಬಹುರತ್ನಾವಸುಂಧರಾ
೮) ರತ್ನಗರ್ಭಾವಸುಂಧರಾ
೯) ವೈಶಾಖೀ ಪರ್ವ
೧೦) ಫಾಲ್ಗುಣೀ ಪರ್ವ
೧೧) ರಮಣೀಮಣಿ
೧೨) ಶ್ರೀಹರ್ಷಲಾ (ಅಚ್ಚಿನಲ್ಲಿ)

(ಕವಿತಾ ಸಂಕಲನ)

೧೩) ಪೂಜಾವಸಾನ ಸಮಯೇ....!
೧೪) ಧ್ಯಾನಾವಸಾನ ಸಮಯೇ....!

(ಪೌರಾಣಿಕ ನಾಟಕ)

೧೫) ಪುಣ್ಯಪಯೋನಿಧಿ
೧೬) ಪುಣ್ಯಾಭಿಸಾರ
೧೭) ತರಂಗಿಣಿ

(ಇವುಗಳ ಪ್ರತಿಗಳು ಮುಗಿದಿವೆ)

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

| | | |
|---|---|---|
| ೧೮) | ಮನೋನ್ಮಣಿ | ೨೦—೦೦ |
| ೧೯) | ಸಂತ್ರಾಸಿನಿ | ೨೪—೦೦ |
| ೨೦) | ಆಸೆಯ ಸುಳಿಯಲ್ಲಿ | ೨೦—೦೦ |
| ೨೧) | ಲಿಯೋನಾ | ೩೦—೦೦ |
| | (ಕವಿತಾ ಸಂಕಲನ) | |
| ೨೨) | ಗಗನ ಕುಸುಮ | ೧೦—೦೦ |
| ೨೩) | ಜೀವನ ಕುಸುಮ | ೧೦—೦೦ |
| ೨೪) | ಕಸ್ತೂರಿ ಮಾಲಿಕಾ | ೧೦—೦೦ |
| ೨೫) | ಮಂದಾರ ಮಾಲಿಕಾ | ೧೦—೦೦ |
| ೨೬) | ಚಂಪಕ ರಾಜಿ | ೧೦—೦೦ |
| ೨೭) | ನಾದ ಬಿಂದು | ೧೦—೦೦ |
| ೨೮) | ವಿಜಯ ಗಾಥಾ | ೬—೦೦ |
| | (ಸಂಜೀವನ ಕಾವ್ಯ) | |
| ೨೯) | ರಾಗಾನುರಾಗಿಣಿ | ೧೫—೦೦ |
| ೩೦) | ಉತ್ತರೋತ್ತರಣಿ | ೧೫—೦೦ |
| | (ಗದ್ಯ ಕಾವ್ಯ) | |
| ೩೧) | ಐಂದ್ರ ಕೀರ್ತಿ ಕೇತನಂ | ೩೬—೦೦ |
| | (ಉಪನಿಷತ್ಕಥಾ) | |
| ೩೨) | ಕೃತಂ ಸ್ಮರ ಕ್ರತುಂ ಸ್ಮರ | ೩೦—೦೦ |
| | (ಶಿಶು ಸಾಹಿತ್ಯ) | |
| ೩೩) | ದೂರ ದೇಶದಲ್ಲಿ | ೫—೦೦ |
| ೩೪) | ಬೆಳದಿಂಗಳ ರಾತ್ರಿ | ೫—೦೦ |
| ೩೫) | ವಿಶೇಷ ಸುದ್ದಿ | ೫—೦೦ |
| ೩೬) | ರಂಗನ ಸಾಹಸ | ೫—೦೦ |
| | (ಕವಿತಾ ಸಂಕಲನ) | |
| ೩೭) | ಗಾನತೀರ್ಥ (ಅಚ್ಚಿನಲ್ಲಿ) | — |

ಲಕ್ಷ್ಮೀ ಪ್ರಕಾಶನ

7, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-560 025